# ಗೀತಾ ಮಧು



ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯ

ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನ
ಬೆಂಗಳೂರು

# ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನ (ರಿ.)

'Pajaka', 89/24, III Cross, Mount Joy Road, Hanumanthanagar, Bangalore - 560 019.

Website: www.vyasamadhwa.org Ph:26602802 Email: info@vyasamadhwa.org

## ಸಂಸ್ಥೆಯ ಪ್ರಮುಖ ಯೋಜನೆಗಳು

೧. ಪ್ರಾಚೀನ ಸಂಸ್ಕೃತ ಹಸ್ತಪ್ರತಿಗ್ರಂಥಗಳನ್ನು ಸಂಗ್ರಹಿಸಿ, ವ್ಯವಸ್ಥಿತವಾಗಿ ಸಂರಕ್ಷಿಸುವುದು; ಈಗಾಗಲೇ ೨೦೦೦ಕ್ಕೂ ಹೆಚ್ಚು ಹಸ್ತಪ್ರತಿಗಳನ್ನು ಸಂಗ್ರಹಿಸಿ, ತನ್ನ 'ಶ್ರೀಜಯತೀರ್ಥ ಸಂಸ್ಕೃತ ಹಸ್ತಲಿಖಿತ ಗ್ರಂಥಾಲಯ'ದಲ್ಲಿ ಸಂರಕ್ಷಿಸುತ್ತಿದೆ.

೨. ಶ್ರೀವ್ಯಾಸಮಧ್ವರ ಕೃತಿಗಳ ಅನುವಾದ ಹಾಗೂ ವಿವರಣೆಗಳನ್ನೊಳಗೊಂಡ ಕೃತಿಗಳನ್ನು ಹರಿದಾಸಸಾಹಿತ್ಯವನ್ನು ಪ್ರಕಾಶನಪಡಿಸುವುದು (ಐತರೇಯಪ್ರಕಾಶನ); ಈಗಾಗಲೇ ೪೦೦೦೦ ಪುಟಗಳಿಗೂ ಮೀರಿದ ಸಾಹಿತ್ಯವನ್ನು ಸಂಸ್ಕೃತ, ಕನ್ನಡ, ಆಂಗ್ಲ ಹಾಗೂ ತೆಲುಗು ಭಾಷೆಗಳಲ್ಲಿ ಪ್ರಕಾಶನ ಪಡಿಸಲಾಗಿದೆ.

೩. 'ಶ್ರೀರಾಘವೇಂದ್ರ ವೇದಾಂತಪಾಠಶಾಲಾ' ಎಂಬ ಸಂಸ್ಥೆಯನ್ನೂ ಪ್ರಾರಂಭಿಸಿ, ಪ್ರತಿನಿತ್ಯ ಸರ್ವ-ಮೂಲಗ್ರಂಥಗಳ ಪಾಠ-ಪ್ರವಚನ, ಸ್ತೋತ್ರಪಾಠ ಇತ್ಯಾದಿಗಳನ್ನು ಅನೇಕ ವರ್ಷಗಳಿಂದ ನಿರಂತರ ನಡೆಸುತ್ತಾ ಬಂದಿದೆ.

೪. 'ಶ್ರೀವ್ಯಾಸಮಧ್ವಸೇವಾಪುರಸ್ಕಾರ ಯೋಜನೆ': ಶ್ರೀವ್ಯಾಸಮಧ್ವರ ಸೇವೆ ಸಲ್ಲಿಸಿದ ವೃದ್ಧ ವಿದ್ವಾಂಸರಿಗೆ ಪ್ರತಿತಿಂಗಳು ಮಾಸಿಕ ಗೌರವಧನವನ್ನು ಆಜೀವ ಸಲ್ಲಿಸುವುದು; ಪ್ರಕೃತ ೨೬ ವಿದ್ವಾಂಸರಿಗೆ ರೂ. ೧೫೦೦/-ಗಳನ್ನು ಸಲ್ಲಿಸುತ್ತಿದೆ.

೫. ಶ್ರೀವ್ಯಾಸಮಧ್ವರ ಕೃತಿಗಳನ್ನು ಅಧ್ಯಯನ ಮಾಡುತ್ತ, ಲೌಕಿಕ ವಿದ್ಯೆಯ ವ್ಯಾಸಂಗ ಮಾಡುತ್ತಿರುವ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಆರ್ಥಿಕಸಹಾಯ ನೀಡುವುದು.

೬. ಪ್ರತಿವರ್ಷ ಒಬ್ಬ ಶ್ರೇಷ್ಠ ಹಿರಿಯ ವಿದ್ವಾಂಸರಿಗೆ ರೂ. ೧೨,೦೦೦/-ಗಳ 'ಶ್ರೀವ್ಯಾಸಮಧ್ವಸೇವಾಪ್ರಶಸ್ತಿ'.

೭. ಮಹಾಭಾರತತಾತ್ಪರ್ಯನಿರ್ಣಯವನ್ನು ಪೂರ್ಣಕಂಠಪಾಠ ಒಪ್ಪಿಸುವ ವಿದ್ಯಾರ್ಥಿಗೆ ರೂ.೨೫,೦೦೦/- ಪ್ರಶಸ್ತಿ, ಸುಮಧ್ವವಿಜಯವನ್ನು ಒಪ್ಪಿಸುವ ವಿದ್ಯಾರ್ಥಿಗೆ 'ಶ್ರೀಮಧ್ವಪ್ರಿಯ' ಪ್ರಶಸ್ತಿ, ಹಾಗೂ ಹರಿಕಥಾಮೃತಸಾರವನ್ನು ಒಪ್ಪಿಸುವ ವಿದ್ಯಾರ್ಥಿನಿಗೆ 'ದಾಸಪ್ರಿಯ' ಪ್ರಶಸ್ತಿಪ್ರದಾನ.

೮. ಶ್ರೀವ್ಯಾಸಮಧ್ವರನ್ನು ಹಾಗೂ ಅವರ ಕೃತಿಗಳನ್ನು ಕುರಿತ ಸಂಶೋಧನಕೃತಿಗಳ ಪ್ರಕಾಶನಕ್ಕೆ ಆರ್ಥಿಕ ಸಹಾಯ.

೯. ಯುವಜನತೆಯಲ್ಲಿ ತಾತ್ತ್ವಿಕಜಾಗೃತಿಯನ್ನು ಉಂಟು ಮಾಡಲು ಕಾಲಕಾಲಕ್ಕೆ ಶ್ರೀವ್ಯಾಸಮಧ್ವರ ತತ್ತ್ವಗಳ ಬಗ್ಗೆ ಕಾರ್ಯಾಗಾರಗಳನ್ನು, ವಿಚಾರಸಂಕಿರಣಗಳನ್ನು ಮತ್ತು ವಿದ್ವದ್ಗೋಷ್ಠಿಗಳನ್ನು ಏರ್ಪಡಿಸುವುದು.

ಅಪಾರವೆಚ್ಚದ ಈ ಎಲ್ಲ ಯೋಜನೆಗಳಿಗಾಗಿ ಪ್ರತಿಷ್ಠಾನವು ಯಾವುದೇ ರೀತಿಯ ದೇಣಿಗೆಯನ್ನು ಆಸ್ತಿಕಜನತೆಯಿಂದ ಸ್ವಾಗತಿಸುತ್ತದೆ. ರೂ.೧೫,೦೦೦/- ಹಾಗೂ ಅದಕ್ಕಿಂತ ಹೆಚ್ಚಿನ ಮೊತ್ತದ ದೇಣಿಗೆಯನ್ನು ನೀಡುವವರಿಗೆ ಸರ್ವಮೂಲಗ್ರಂಥಗಳು, ಮಹಾಭಾರತತಾತ್ಪರ್ಯನಿರ್ಣಯ ಹಾಗೂ ಹರಿಕಥಾಮೃತಸಾರಗಳ ಅನುವಾದಗಳು ಸೇರಿದಂತೆ ಪ್ರತಿಷ್ಠಾನದ ಪ್ರಕಾಶನದಲ್ಲಿ ಲಭ್ಯವಿರುವ ಎಲ್ಲಾ ಗ್ರಂಥಗಳನ್ನು ಉಚಿತವಾಗಿ ನೀಡಲಾಗುವುದು.

### ವಿಶೇಷ ಸೂಚನೆ :

೧. ದೇಣಿಗೆಗಳನ್ನು "ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನ(ರಿ.)", ಬೆಂಗಳೂರು - ಈ ಹೆಸರಿಗೆ ನಗದು/ಚೆಕ್/ಡ್ರಾಫ್ಟ್ ಮೂಲಕ ಸಲ್ಲಿಸಿ ಅಧಿಕೃತ ರಸೀತಿಯನ್ನು ಪಡೆಯತಕ್ಕದ್ದು.

೨. 80G ಅನ್ವಯ ಆದಾಯ ತೆರಿಗೆ ವಿನಾಯಿತಿಯನ್ನು ಬಯಸುವವರು ನಮ್ಮ ಪ್ರತಿಷ್ಠಾನಕ್ಕೆ "**Sri Vyasa Madhwa Research Foundation (R)**" ಎಂಬ ಹೆಸರಿಗೆ ದೇಣಿಗೆ ನೀಡಬಹುದು.

# ಗೀತಾ ಮಧು

ಲೇಖಕರು:

ಡಾ॥ ವ್ಯಾಸನಕೆರೆ ಪ್ರಭಂಜನಾಚಾರ್ಯ

ಪ್ರಕಾಶನ:

ಐತರೇಯ ಪ್ರಕಾಶನ ವ್ಯಾಸನಕೆರೆ

ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನದ ಪ್ರಕಾಶನ ವಿಭಾಗ

'ಪಾಜಕ', ೮೯/೨೪, ೩ ನೇ ಅಡ್ಡರಸ್ತೆ, ಮೌಂಟ್‌ಜಾಯ್ ಎಕ್ಸ್‌ಟೆನ್ಷನ್,

ಹನುಮಂತನಗರ, ಬೆಂಗಳೂರು - ೫೬೦ ೦೧೯.

**Gītāmadhu :** by Vidyāvācaspati, Darśanaratnam, Pravacanācārya, Sacchāstra-vicakṣaṇaratnam, Śāstrapravacanakesari, Madhvamatavardhana, Vidvaccūḍāmaṇi, Vedavidyāvicakṣaṇa, Paṇḍitaratnam, Vidyāvāridhi, Sacchāstrapravacanapravīṇa, Gītāratnākara, Tattvavācaspati, Jnānaratnākara (and Recipient of Karnataka State Sanskrit Award - 1999 & **Karnataka Rajyotsava Award-2002, Śrī Vidyāmānya Mahāpraśasti** of Śrī Pejavar Math, Udupi and **Rashtrapati Award - 2005) Dr.Vyasanakere Prabhanjanacharya,** M.A., Ph.D., D.Litt., F.I.B.R., F.U.W.A., Principal (Rtd.), Govt. First Grade College, K.R.Puram, Bangalore and Published by **Aitareya Prakāśana Vyasanakere,** Publication wing of **Śrī VyāsaMadhva Samśodhana Pratiṣṭhāna** Pājakâ, No.89/24, Third Cross, Mount Joy Extension, Hanumanthanagar, Bangalore - 560019. Pages: VIII + 240 = 248

Phone : 26602802; 26611011.

Internet : *www.vyasamadhwa.org*

E-mail : *info@vyasamadhwa.org*



GĪTĀMADHU

**ISBN No. 978-93-81826-29-4**

First Edition : 1994
Second Edition : 1996
Third Edition : 2005
Fourth Edition : 2014

Price : Rs. 100/-

Typeset by :
**Śrī Vyāsa Madhva Samśodhana Pratiṣṭhāna**

Printed at :
**Vāgartha,** N.R. Colony, Bangalore, Ph: 22427677.

# ಮುನ್ನುಡಿ

ಭಗವದ್ಗೀತೆಯು ವಿಶ್ವಮಾನ್ಯಕೃತಿ, ಇದನ್ನು ಉಪದೇಶಿಸಿದವನು ವಿಶ್ವೇಶನಾದ ಶ್ರೀಕೃಷ್ಣ. ವಿಶ್ವದ ಸಕಲ ಜನರ ಸರ್ವವಿಧಸಮಸ್ಯೆಗಳಿಗೂ ಇದರಲ್ಲಿ ಪರಿಹಾರ ಉಂಟು. ಮಹಾಭಾರತ 'ಪಂಚಮವೇದ'. ವೇದಗಳಿಗೂ ಮಿಗಿಲಾದ ವೇದ ಎಂದು ಮಾನ್ಯವಾಗಿದ್ದರೆ, ಗೀತೆ ಭಾರತವೇದದ ಉಪನಿಷತ್ತು ಗೀತೆಯಂತೆ ಮಹಾಭಾರತದ ಮತ್ತೊಂದು ಅತಿಮಹತ್ವದ ಭಾಗ 'ವಿಷ್ಣುಸಹಸ್ರನಾಮ'. ಗೀತೆಯು ಭಗವಂತನ ಉಪದೇಶವಾದರೆ, ವಿಷ್ಣುಸಹಸ್ರನಾಮವು ಆ ಭಗವಂತನ ದಿವ್ಯಸ್ತುತಿಯಾಗಿದೆ. ಗೀತೆ ಕುರುಕ್ಷೇತ್ರ ಸಮರದ ಆರಂಭದಲ್ಲಿ ಭೀಷ್ಮಪರ್ವದಲ್ಲಿ ಬಂದರೆ, ವಿಷ್ಣುಸಹಸ್ರನಾಮ ಆ ಸಮರದ ಉಪಸಂಹಾರದಲ್ಲಿ ಭೀಷ್ಮರ ಬಾಯಲ್ಲಿ ಬಂದಿದೆ. ವಿಷ್ಣುಸಹಸ್ರನಾಮ ಹೇಳಿದ ಭೀಷ್ಮರು ಗೀತೆ ಕೇಳಿದ ಅರ್ಜುನನ ಪಿತಾಮಹ. ಮತ್ತೊಂದು ರೀತಿಯಲ್ಲಿ ವಿಷ್ಣುಸಹಸ್ರನಾಮ ಗೀತಾರ್ಥ: ಗೀತೆ ವಿಷ್ಣುಸಹಸ್ರನಾಮದ ವಿವರಣೆ. ಇವೆರಡು ಪಡೆದವರು ಕೃತಾರ್ಥರು ಎಂದು ಆಚಾರ್ಯ ಶ್ರೀಮಧ್ವರು ಸಾರಿರುವರು.

ಅರ್ಜುನ ಗೀತೆ ಕೇಳಿದ. ಅವನ ಮೊಮ್ಮಗ ಪರೀಕ್ಷಿದ್ರಾಜ ಭಾಗವ ಕೇಳಿದ: ಅವನ ಮಗ ಜನಮೇಜಯ ಮಹಾಭಾರತ ಕೇಳಿದ. ಎಂತಹ ಅಪೂರ್ವವಂಶ ಇದು! ಗೀತೆ ಕೇಳುವವರ ವಂಶಜರು ಭಾಗವತ ಕೇಳಿ ಭಗವದ್ಭಕ್ತರಾಗುವರು; ಮಹಾಭಾರತ ಕೇಳಿ ಭೀಮಾದಿಗಳಂತೆ ಧರ್ಮಶೀಲರಾಗುವರು ಎಂಬ ತತ್ತ್ವವೂ ಇಲ್ಲಿದೆ.

ಗೀತೆ ಹೇಳಿದವರು ಯಾದವಕೃಷ್ಣ. ಗೀತೆ, ಭಾಗವತ, ಮಹಾಭಾರತ ಮೂರನ್ನು ಬರೆದವರು ವಾಸಿಷ್ಠಕೃಷ್ಣವೇದವ್ಯಾಸರು. ಎರಡೂ ಭಗವದ್ರೂಪಗಳೇ. ಇಂತಹ ಮಹತ್ತ್ವದ ಕೃತಿಗಳು ಬೇರೆ ಯಾವೂ ಇಲ್ಲ. ಇದನ್ನು ಬರೆದ ವ್ಯಾಸರಂತಹವರೂ ಬೇರಿಲ್ಲ. ಆದ್ದರಿಂದ ಇವುಗಳ ತತ್ತ್ವ ಸಕಲಶಾಸ್ತ್ರಸಾರ. ಭಗವಂತನ ಪಾರಮ್ಯ. ಜೀವರಿಗೆ ಅವನ ಅಧೀನ್ಯ ಇವೆಲ್ಲವುಗಳ ಅಂತರ್ಯ.

ಇದು ವಿಶ್ವಮಾನ್ಯವಾದ ಮಹೋನ್ನತ ಕೃತಿ. ಅದನ್ನು ಹೇಳಿದವನು ಭಗವಂತನಾದ ಶ್ರೀಕೃಷ್ಣ ಕೇಳಿದವನು ಪರಮಭಗವದ್ಭಕ್ತನಾದ ಅರ್ಜುನ. ಅದರಲ್ಲಿನ ವಿಷಯವಂತು ಭಗವಂತನ ವಿಚಾರವೇ. ಅದರ ಮಾನ್ಯತೆಯ ರಹಸ್ಯ ಅಡಗಿರುವುದೇ ಇದರಲ್ಲಿ. ಶಬ್ದದಲ್ಲಿ ವಾಮನ; ಅರ್ಥದಲ್ಲಿ ತ್ರಿವಿಕ್ರಮ. ಇದು ಅದರ ಮತ್ತೊಂದು ಹಿರಿಮೆ. ವಿಶ್ವದ ಬೇರಾವ ಗ್ರಂಥಕ್ಕೂ ಇರದ ಮಹಿಮೆ ಇದರದು.

ವೇದವ್ಯಾಸರದು ವಿಚಿತ್ರ ವ್ಯಕ್ತಿತ್ವ. ಸಂಜಯನಿಗೆ ಕಣ್ಣು ನೀಡಿದರು; ಯುದ್ಧದ ವಾರ್ತೆಯನ್ನು ಧೃತರಾಷ್ಟ್ರನ ಕಿವಿಗೆ ಬೀಳಿಸಿದರು; ಅದನ್ನು ಅನಂತರದ ಜನ ತಿಳಿಯಲೆಂದು ಅದರ ವಿವರಗಳನ್ನು ತಾವೇ ಬರೆದರು. ಜನ ನಿರ್ವಿಘ್ನವಾಗಿ ಕೇಳಲು ಸಾಧ್ಯವಾಗಲಿ ಎಂದು ವಿಘ್ನೇಶನಾದ ಗಣೇಶನಿಂದಲೇ ಆ ಯುದ್ಧದ ಪೂರ್ವಾಪರಗಳ ಸಮೇತ ಬರೆಸಿದರು. ಅದೇ ಜಗತ್ತಿನ ಸಾರಸ್ವತ ಪ್ರಪಂಚದ ಅಚ್ಚರಿಯ ಮೇರು ಎನ್ನಿಸಿದ 'ಮಹಾಭಾರತ'. ಅದು ವಸ್ತುವಾಗಿ ಇತಿಹಾಸ; ಅದ್ಭುತ ನಿರೂಪಣೆಯಿಂದಾಗಿ ಮಹಾಕಾವ್ಯ. ನೀಡುವ ಅಮರಸಂದೇಶದಿಂದಾಗಿ ಅಜರಾಮರವಾದ ತತ್ತ್ವಶಾಸ್ತ್ರ. ಜೊತೆಗೆ ನೀತಿಶಾಸ್ತ್ರ ರಾಜ್ಯಶಾಸ್ತ್ರ ಸಮಾಜಶಾಸ್ತ್ರ ಅರ್ಥಶಾಸ್ತ್ರ ಮೊದಲಾಗಿ ಸಕಲಶಾಸ್ತ್ರಗಳ ಸಾರಸರ್ವಸ್ವ. ಅದಕ್ಕೆಂದೇ ಅದು ವಿಶ್ವಕಂಡ ಅನುಪಮ ವಿಶ್ವಕೋಶ. ಎಂದೂ ತತ್ತ್ವಜಿಜ್ಞಾಸುಗಳ ಬಾಳಿಗೆ ಬೆಳಕು ಬೀರುವ ಪ್ರಮೇಯರತ್ನಕೋಶ. ಮಹಾಭಾರತದ ಹದಿನೆಂಟು ಪರ್ವಗಳಲ್ಲಿ ಭೀಷ್ಮಪರ್ವ ಮೊದಲ ಐದು ಪರ್ವಗಳು ಆದಿಪಂಚಕ. ದ್ರೋಣಪರ್ವ, ಕರ್ಣಪರ್ವ, ಶಲ್ಯಪರ್ವ ಮತ್ತು ಸೌಪ್ತಿಕಪರ್ವಗಳು ಯುದ್ಧಪಂಚಕ. ಸ್ತ್ರೀಪರ್ವ, ಶಾಂತಿಪರ್ವ, ಅನುಶಾಸನಪರ್ವ, ಅಶ್ವಮೇಧಿಕಾಪರ್ವ, ಆಶ್ರಮವಾಸಿಕಪರ್ವ, ಮೌಸಲಪರ್ವ, ಮಹಾಪ್ರಸ್ಥಾನಪರ್ವ ಹಾಗೂ ಸ್ವರ್ಗಾರೋಹಣಪರ್ವಗಳು ಅವಶಿಷ್ಟ ಎಂಟು ಪರ್ವಗಳು.

ಇದನ್ನು ಉಪದೇಶಿಸಿದ ಸನ್ನಿವೇಶವೂ ವಿಚಿತ್ರವಾದುದು, ವಿಶಿಷ್ಟವಾದುದು; ಋಷಿಮುನಿಗಳು ಅಧ್ಯಯನ ಮಾಡುವ ಇದರ ರಚನೆಯ ರಂಗಸ್ಥಳ ನಿರ್ಮಲವಾದ ತಪೋಭೂಮಿಯಲ್ಲ; ಭಯಾನಕವಾದ ರಣಭೂಮಿ. ಸುತ್ತಲೂ ಇದ್ದದ್ದು ಮರಗಿಡಗಳಲ್ಲ, ಸಾಧುಪ್ರಾಣಿಗಳಲ್ಲ; ಚಿತ್ರವಿಚಿತ್ರ

ಸಾಮರ್ಥ್ಯದ ಯೋಧರು. ಅವರ ಕೈಯಲ್ಲಿ ಆ ಮುನ್ನ ಜಗತ್ತು ಕಂಡರಿಯದ ಬಗೆ ಬಗೆಯ ಶಸ್ತ್ರಾಸ್ತ್ರಗಳು. ನೆರೆದಿದ್ದವರು ಶತ್ರುಗಳಲ್ಲ, ಬಂಧುಗಳು; ಆದರೆ ಅವರಂತಹ ಶತ್ರುಗಳನ್ನೇ ಜಗತ್ತು ಬೇರೆಂದೂ ಕಾಣಲಿಲ್ಲ. ನೆರೆದಿದ್ದ ಸೇನೆಯ ಸಂಖ್ಯೆಯಂತೂ ಹದಿನೆಂಟು ಅಕ್ಷೋಹಿಣಿಯಷ್ಟು ಅಪಾರ. ಆ ಕುರುಪಾಂಡವರು ಒಂದೇ ವಂಶದ ಕುಡಿಗಳು. ಪ್ರಶಾಂತಿಗೆ ಹೆಸರಾದ ಚಂದ್ರನ ವಂಶ ಅವರದು; ಆದರೆ ಕಂಡರಿಯದ ಅಶಾಂತಿ ಅಲ್ಲಿ ತುಂಬಿತ್ತು. ಕೌರವರಿಗೆ ರಾಜ್ಯಲಕ್ಷ್ಮಿಯ ಬಯಕೆ; ಪಾಂಡವರಿಗೆ ಲಕ್ಷ್ಮೀಪತಿಯಾದ ಶ್ರೀಕೃಷ್ಣನನ್ನು ಒಲಿಸುವ ಹಂಬಲ. ಆ ಕುರುಕ್ಷೇತ್ರವೂ ಅಂತಹುದೇ. ಅದೇ ವಂಶದ ಪ್ರಖ್ಯಾತನಾದ ಕುರುವೆಂಬ ರಾಜ ನಿರ್ಮಿಸಿದ್ದ ರಣಾಂಗಣ. ಅದರಿಂದಾಗಿಯೇ ಅದು ಕುರುಕ್ಷೇತ್ರ. ಧರ್ಮಕ್ಕೆ ಜಯವಾಗಬೇಕೆಂಬ ಹಂಬಲ ಆ ರಾಜನಿಗೆ ಆ ಕ್ಷೇತ್ರದ ನಿರ್ಮಾಣದ ಹಿನ್ನೆಲೆಯಲ್ಲಿತ್ತು ಒಂದೇ ವಂಶದ ಜನ ಅದೇ ವಂಶದ ರಾಜ ನಿರ್ಮಿಸಿದ್ದ ರಣಭೂಮಿಯಲ್ಲಿ ಒಂದೆಡೆ ಸೇರಿ ಕಾದಲು ಸರ್ವಸನ್ನದ್ಧರಾಗಿದ್ದರು. ಆ ಸಮರದ ವಿವರ ಕೇಳಲು ಕೌರವರ ತಂದೆ ಧೃತರಾಷ್ಟ್ರ ಕಾತರದಿಂದ ಕುಳಿತಿದ್ದ. ಅದನ್ನು ಅವನಿಗೆ ತಿಳಿಸಲು ಕುರುಪಾಂಡವರ ತಾತ ವೇದವ್ಯಾಸರು ದಿವ್ಯದೃಷ್ಟಿಯನ್ನು ನೀಡಿ, ತಮ್ಮ ಶಿಷ್ಯನಾದ ಸಂಜಯನನ್ನು ಅಣಿ ಮಾಡಿದ್ದರು. ವೇದವ್ಯಾಸರು ಆ ವಂಶದ ತಾತನಾದರೂ, ಇಡೀ ಜಗತ್ತಿಗೆ ಮುತ್ತಾತನಾದ ಪರಬ್ರಹ್ಮ.

ಭೀಷ್ಮಪರ್ವದಲ್ಲಿ ಭಗವಂತನ ಬಾಯಿಂದ ಹೊರಹೊಮ್ಮಿದ ಉಪದೇಶಾಮೃತ ಭಗವದ್ಗೀತೆ. ಸಮರದ ಮುನ್ನ ಅದರ ಆವಶ್ಯಕತೆಯನ್ನು ಸಾರುವ ಅಪೂರ್ವಭಾಗ. ಇನ್ನೇನು ಯುದ್ಧ ಪ್ರಾರಂಭವಾಗಬೇಕು ಎನ್ನುವ ಸಮಯದಲ್ಲಿ ಉಭಯಪಕ್ಷದ ಯೋಧರನ್ನು ಕಾಣುವ ವಿಚಿತ್ರ ಬಯಕೆ ಅರ್ಜುನನಿಗೆ. ಅದನ್ನು ಪೂರೈಸಲೆಂದು ಪುರುಷೋತ್ತಮನಿಂದ ಎರಡು ಸೇನೆಗಳ ಮಧ್ಯೆ ಅವನ ರಥದ ಸ್ಥಾಪನೆ. ಉಭಯಪಕ್ಷಗಳಲ್ಲಿ ನೆರೆದಿದ್ದ ಕಾದಲು ಸಜ್ಜಾಗಿ ನಿಂತಿದ್ದ ಬಂಧುಸಮೂಹವನ್ನು ಕಾಣುತ್ತಲೇ ಸಲ್ಲದ ಕರುಣೆಗೆ ಒಳಗಾಗಿ ಅರ್ಜುನನ ವಿಷಾದ. ಅದರ ಪರಿಹಾರಕ್ಕಾಗಿ ಅವನು ಶ್ರೀಕೃಷ್ಣನನ್ನೇ ಮೊರೆಹೋಗುವ ವಿವೇಕ ತೋರಿದ. ಅದರ ಫಲವಾಗಿ ಭಗವಂತನಿಂದ ಹರಿದ ಉಪದೇಶಧಾರೆ ಮನುಕುಲದ ಅಜ್ಞಾನದ ಕೊಳೆಯನ್ನು ತೊಳೆಯುವ ಗಂಗಾಧಾರೆಯಾಯಿತು. ಅದನ್ನು ಕೇಳುತ್ತಿದ್ದಂತೆಯೇ ಅರ್ಜುನನ ದುಗುಡ ಕಳೆಯಿತು; ಜ್ಞಾನದ ಕಣ್ಣು ತೆರೆಯಿತು. ತತ್ತ್ವ ಕೇಳಿದ ಅವನು ಭಗವಂತನ ದಯೆಯಿಂದ ಅವನ ವಿಶ್ವರೂಪವನ್ನು ಕಣ್ಣಾರೆ ಕಂಡ. ಸಾಧನೆಯ ಸಾರಸರ್ವಸ್ವವನ್ನೂ ಮನಗಂಡ. ತೊರೆದಿದ್ದ ಬಿಲ್ಲು ಬಾಣಗಳನ್ನು ಅವನ ಆದೇಶದಂತೆ ಮತ್ತೆ ಕೈಗೆತ್ತಿಕೊಂಡ. ಶತ್ರುನಾಶಕ್ಕೆ ಬದ್ಧಕಂಕಣನಾಗಿ ನಿಂತುಕೊಂಡ. ಅಂತೂ ಕರ್ತವ್ಯವಿಮುಖನಾಗಿದ್ದ ಅರ್ಜುನ ಕರ್ತವ್ಯಸುಮುಖನಾದ. ಕೆಲವೇ ನಿಮಿಷಗಳ ಅವಧಿಯಲ್ಲಿ ಮರೆಯಾಗಿದ್ದ ಜ್ಞಾನವನ್ನು ಮತ್ತೆ ಬೆಳಗಿದ ಕೃತಿ ಭಗವದ್ಗೀತೆ. ಭಗವಂತನ ಮಾತಿನ ಮಾಂತ್ರಿಕಶಕ್ತಿ ಅಂತಹುದು. ಅದಕ್ಕೆಂದೇ ಅದಕ್ಕೆ ಸರ್ವಮಾನ್ಯತೆ. ಅದನ್ನು ಓದುವ ಜನರು ಮತ್ತ ಕರ್ತವ್ಯಪರಾಯಣರಾಗುವುದರಲ್ಲಿ ಎರಡು ಮಾತಿಲ್ಲ. ಅದಕ್ಕೆಂದೇ ಅದು ನಿತ್ಯಪಠ್ಯಗ್ರಂಥ. ಅದು ಉಪದೇಶಗೊಂಡ ಪರಿಸರವೂ ಅಂತಹುದೇ. ಹೆಸರಿಗೆ ರಣಾಂಗಣವಾದರೂ, ಅದು ಧರ್ಮಕ್ಷೇತ್ರವಾದ ಕುರುಕ್ಷೇತ್ರ. ಅರ್ಜುನ ಕುಳಿತಿದ್ದ ರಥವಂತೂ ಸ್ವತಃ ಶ್ರೀರಾಮ ಏರಿ ಕುಳಿತು ರಾವಣನನ್ನು ಸಂಹರಿಸಿದ್ದ ಪವಿತ್ರರಥ. ಅದನ್ನು ಸ್ವತಃ ಶ್ರೀರಾಮನಿಗೆ ಅರ್ಪಿಸಿ, ಪೂಜಿಸಿದ್ದು ಸ್ವರ್ಗಾಧಿಪತಿಯಾದ ದೇವೇಂದ್ರ. ಈಗ ಅದರಲ್ಲಿ ಕುಳಿತು ಕೇಳುತ್ತಿರುವ ಅರ್ಜುನ ಆ ದೇವೇಂದ್ರನ ಅವತಾರನೇ. ಅಂದು ಅವನು ತನಗೆ ಅರ್ಪಿಸಿದ್ದ ರಥಕ್ಕೆ ಇಂದು ಸಾರಥಿಯಾಗಿ ಕುಳಿತು ಮುನ್ನಡೆಸ ಬಂದವನು ಆ ಶ್ರೀರಾಮನೇ ಆದ ಶ್ರೀಕೃಷ್ಣ. ದೇಹವೇ ರಥ ಎಂದಿದೆ ಕಠೋಪನಿಷತ್ತು. ದೇಹವನ್ನು ಭಗವಂತನಿಗೆ ಒಪ್ಪಿಸಿದಾಗ, ಅದನ್ನು ಸದ್ಗತಿಯತ್ತ ಮುನ್ನಡೆಸಲು ಸ್ವತಃ ಭಗವಂತನೇ ಸಾರಥಿಯಾಗಿ ಕೂಡುವನು ಎಂಬುದು ಇದರ ಮರ್ಮ. ರಥದ ಮೇಲೆ ಜಯರೂಪದ ಹನುಮಂತ; ಅವನಂತೂ ಶ್ರೀರಾಮ ಭಕ್ತಾಗ್ರೇಸರ. ಪಕ್ಕದಲ್ಲಿ ಹನುಮಂತನ ಮತ್ತೊಂದು ರೂಪವಾದ ಭೀಮಸೇನ ಕೃಷ್ಣಭಕ್ತಾಗ್ರೇಸರ. ರಥದ ಕುದುರೆಗಳು ಅಚ್ಚ ಬಿಳಿ ಬಣ್ಣದವುಗಳು ಶುದ್ಧತೆಯ ಸಂಕೇತ. ಕೈಯಲ್ಲಿ ಗಾಂಡೀವ; ಅದು ಬ್ರಹ್ಮ ಹಿಡಿದ

ಧನುಸ್ಸು, ಅದಕ್ಕೆ ಅಕ್ಷಯಬತ್ತಳಿಕೆಗಳು. ಅರ್ಜುನನೊಳಗೆ ನರನೆಂಬ ಶೇಷನ ಆವೇಶ ಬೇರೆ. ಅದಕ್ಕೆಂದು ಅವನ ರಥ ನಡೆಸುತ್ತಲೇ ಕೃಷ್ಣ ಅವನ ಮನೋರಥ ಪೂರೈಸಿದ. ಆದ್ದರಿಂದಲೇ ಅವನು ನಾರಾಯಣನಾದ ಶ್ರೀಕೃಷ್ಣನಿಂದ ಕೇಳಿದ ಗೀತೆ ಸಮಸ್ತನರರಿಗೂ ಶಾಸ್ತ್ರಸಂದೇಶವಾಯಿತು.

ಇಂತಹ ಭಗವದ್ಗೀತೆಯ ಮೇಲೆ ರಚಿತವಾಗಿರುವಷ್ಟು ವಿಪುಲಸಾಹಿತ್ಯ ಜಗತ್ತಿನ ಬೇರಾವ ಕೃತಿಯ ಮೇಲೂ ರಚಿತವಾಗಿಲ್ಲ. ಗಾತ್ರದಲ್ಲಿ ಗೀತೆಯಷ್ಟು ಚಿಕ್ಕದಾದ ಮಹತ್ತ್ವದ ಕೃತಿ ಮತ್ತೊಂದಿಲ್ಲ. ಅದರ ಮೇಲಿನ ವಿವರಣೆಗಳು ವಿಪುಲವಾಗಿರುವಂತೆ, ವಿಭಿನ್ನವೂ ಆಗಿವೆ. ಅದಕ್ಕೆ ಅದರ ಅರ್ಥಸಂಕೀರ್ಣತೆಯೊಂದಿಗೆ ವ್ಯಾಖ್ಯಾನಕಾರರ ಮತಿವೈವಿಧ್ಯವೂ ಕಾರಣ. ಗೀತೆಯ ಬಗೆಗಿನ ವ್ಯಾಖ್ಯಾನಗಳಲ್ಲಿ ಶಂಕರ, ರಾಮಾನುಜರ ವಿವರಣೆಗಳು ಜನರ ಗಮನಕ್ಕೆ ಬಂದಿರುವಂತೆ, ಶ್ರೀಮಧ್ವರ ವ್ಯಾಖ್ಯಾನದ ವಿವರಗಳು ಬಂದಿಲ್ಲ. ಗೀತಾಭಾಷ್ಯ ಮತ್ತು ಗೀತಾತಾತ್ಪರ್ಯ ಎಂಬ ಎರಡು ಕೃತಿಗಳ ಮೂಲಕ ಗೀತಾರ್ಥವನ್ನು ವಿವರಿಸಿದ ಏಕಮಾತ್ರ ಆಚಾರ್ಯರು ಎಂಬುದು ಶ್ರೀಮಧ್ವಾಚಾರ್ಯರ ಹಿರಿಮೆ. ಗೀತೆಗೆ ಅತಿ ಕಡಿಮೆ ಎಂದರೂ ಹತ್ತು ಅರ್ಥಗಳೆಂದು ಸಾರಿದವರು ಅವರು. ಗೀತೆಯಲ್ಲಿನ ಜ್ಞಾನ, ಕರ್ಮ, ಭಕ್ತಿ, ಸಗುಣ, ನಿರ್ಗುಣ, ಸಾಕಾರ, ನಿರಾಕಾರ, ಪ್ರಕೃತಿ, ಪುರುಷ, ಕ್ಷರ, ಅಕ್ಷರ ಮೊದಲಾದ ಎಲ್ಲದರ ಬಗ್ಗೆ ಪರಿಪೂರ್ಣ ವಿವೇಚನೆ ನೀಡಿದ ವೈಶಿಷ್ಟ್ಯ ಅವರದು. ಗೀತೆಯ ಹಿರಿಮೆಯನ್ನು ಬಗೆಬಗೆಯಾಗಿ ಸಾರಿದವರು ಅವರೇ. ಶ್ರೀಕೃಷ್ಣಾರ್ಜುನ ಸಂವಾದರೂಪವಾದ ಗೀತೆಗೂ, ಶ್ರೀಕೃಷ್ಣೋದ್ಧವಸಂವಾದರೂಪವಾದ ಭಾಗವತಪುರಾಣದ ಏಕಾದಶ ಸ್ಕಂಧಕ್ಕೂ ಇರುವ ನಿಕಟಸಂಬಂಧವನ್ನು ಗುರುತಿಸಿದ್ದು ಅವರ ಕೊಡುಗೆ. ಅದಕ್ಕೆ ಅವರು ನೀಡಿರುವ ವಿವರಣೆ ಮತ್ತೊಂದು ರೀತಿಯಲ್ಲಿ ಗೀತಾರ್ಥವಾಗಿದೆ. ಇದರೊಂದಿಗೆ ತಮ್ಮ ಮಹಾಭಾರತ ತಾತ್ಪರ್ಯನಿರ್ಣಯದಲ್ಲೂ ಗೀತಾರ್ಥಸಂಗ್ರಹವನ್ನು ಒದಗಿಸಿರುವರು. ಹೀಗೆ ಬಗೆಬಗೆಯಲ್ಲಿ ಗೀತಾರ್ಥವನ್ನು ತೆರೆದಿಟ್ಟ ಅನನ್ಯಸಾಧಾರಣ ಮಹತ್ತ್ವ ಅವರದು. ಅನಂತರವೂ ಅವರ ಪರಂಪರೆಯ ಶ್ರೀಟೀಕಾಕೃತ್ಪಾದರೆನ್ನಿಸಿದ ಶ್ರೀಜಯತೀರ್ಥರು, ಶ್ರೀವಾದಿರಾಜಸ್ವಾಮಿಗಳು, ಶ್ರೀರಾಘವೇಂದ್ರಸ್ವಾಮಿಗಳು ಗೀತೆಯ ಬಗ್ಗೆ ಅವರ ವಿವರಣೆಯನ್ನು ವಿಶ್ಲೇಷಿಸಿರುವರು. ಗೀತೆಯ ಬಗ್ಗೆ ವಿಪುಲಸಾಹಿತ್ಯವನ್ನು ನೀಡಿದ ವಿಶಿಷ್ಟಪರಂಪರೆ ಅವರ ವೈಷ್ಣವಪರಂಪರೆ. ಹೀಗಿದ್ದೂ ಅವರು ತಿಳಿಸಿರುವ ಗೀತಾರ್ಥ ಜಿಜ್ಞಾಸುಜನತೆಗೆ ಅಷ್ಟಾಗಿ ತಲುಪಿಲ್ಲ ಎಂದೇ ಹೇಳಬಹುದು. ಆ ಕೊರತೆಯನ್ನು ನೀಗಿಸಲೆಂದು ಗೀತಾಮಧು ಎಂಬ ಕೃತಿಯನ್ನು ೧೯೯೪ರಲ್ಲಿ ನಮ್ಮ ಪ್ರಕಾಶನ ಹೊರತಂದಿತ್ತು. ನವೆಂಬರ್ ೨೦೦೦ರಿಂದ ೧೫.೦೨.೨೦೦೪ರವರೆಗೆ ಬೆಂಗಳೂರಿನ ನರಸಿಂಹರಾಜ ಕಾಲೋನಿಯ ಶ್ರೀರಾಮ ದೇವಸ್ಥಾನದಲ್ಲಿ ಶ್ರೀರಾಮಮಂದಿರಮ್ ಅಸೋಸಿಯೇಷನ್ ಸಂಸ್ಥೆಯು ನನ್ನಿಂದ ಭಗವದ್ಗೀತೆಯ ಪ್ರವಚನವನ್ನು ಪ್ರತಿ ತಿಂಗಳಿಗೆ ಒಂದು ಸಪ್ತಾಹದಂತೆ ಏರ್ಪಡಿಸಿ, ಗೀತಾರ್ಥವನ್ನು ತಿಳಿಸುವ ಯೋಜನೆಯನ್ನು ಹಮ್ಮಿಕೊಂಡಿತ್ತು; ಪ್ರತಿಶ್ಲೋಕದ ವಿವರಣೆ ನಡೆದು, ಅದು ನಿರ್ವಿಘ್ನವಾಗಿ ಪೂರೈಸಿತು ಸಹ. ಆ ಪ್ರವಚನಮಾಲಿಕೆಯ ಸ್ಮಾರಕವಾಗಿ ಮುಂಚೆ ಪ್ರಕಾಶಿತವಾಗಿದ್ದ ಗೀತಾಮಧು ಕೃತಿಯು ನಮ್ಮ ಪ್ರತಿಷ್ಠಾನದಿಂದ ಸಮಗ್ರವಾಗಿ ೨೦೦೪ರಲ್ಲಿ ಪ್ರಕಟವಾಯಿತು. ಅದರ ಪ್ರತಿಗಳು ಕೆಲವೇ ದಿನದಲ್ಲಿ ತೀರಿದವು. ಅದರ ಪರಿಷ್ಕೃತ ಆವೃತ್ತಿ. ೨೦೦೬ರಲ್ಲಿ ಪ್ರಕಾಶನಗೊಂಡಿತು. ಪ್ರಸ್ತುತ ಆವೃತ್ತಿ ಮತ್ತಷ್ಟು ಪರಿಷ್ಕೃತವಾಗಿರುವ ನಾಲ್ಕನೆಯ ಆವೃತ್ತಿ.

ಇದನ್ನು ನಮ್ಮ ಶ್ರೀವ್ಯಾಸಮಧ್ವಸಂಶೋಧನಪ್ರತಿಷ್ಠಾನದ ಐತರೇಯಪ್ರಕಾಶನವು ಹೊರತರುತ್ತಿದೆ. ಶ್ರೀ ಹರಿಗುರುಗಳ ಭಕ್ತರೂ, ಪಾಠ ಪ್ರವಚನಗಳಲ್ಲಿ ವಿಶೇಷವಾಗಿ ಆಸಕ್ತರೂ ಆದ ಬಳ್ಳಾರಿಯ ಶ್ರೀ **ಗುತ್ತಲ ವರದರಾಜ** ಅವರು ತಮ್ಮ ಭೀಮರಥೀ ಶಾಂತಿಮಹೋತ್ಸವದ ಶುಭ ಸಂದರ್ಭದಲ್ಲಿ ಶ್ರೀಹರಿಗುರುಗಳ ಪ್ರೀತಿಗಾಗಿ ಇದರ ಪ್ರಕಾಶನದಲ್ಲಿ ಪಾಲ್ಗೊಂಡಿರುವರು. ಇದರ ಡಿ.ಟಿ.ಪಿ ಕಾರ್ಯ ನಮ್ಮ ಪ್ರತಿಷ್ಠಾನದ್ದು, ಸಹಕಾರ ಶ್ರೀ ಆನಂದಪದ್ಮನಾಭ (ಸುದರ್ಶನ), ನನ್ನ ಪುತ್ರ ಡಾ. ಜಯಂತ ವ್ಯಾಸನಕೆರೆ ಹಾಗೂ ನನ್ನ ಧರ್ಮಪತ್ನಿ ಶ್ರೀಮತಿ ಕುಂ. ಸೌ. ವಿ.ಪಿ. ಜಯಶ್ರೀ ಅವರದ್ದು . ಡಿ.ಟಿ.ಪಿ ಕಾರ್ಯದಲ್ಲಿ ಶ್ರೀ ಪ್ರವೀಣ ಕಟ್ಟಿ ಇವರು ಪಾಲ್ಗೊಂಡಿರುವರು. ಮುದ್ರಣ ವಾಗರ್ಥ ಅವರದ್ದು.

ಬೆಂಗಳೂರು– ೧೫.೦೪.೨೦೧೪ ವ್ಯಾಸನಕೆರೆ ಪ್ರಭಂಜನಾಚಾರ್ಯ

ಜಯ – ಹನುಮಜ್ಜಯಂತೀ

# ವಿಷಯಾನುಕ್ರಮಣಿಕೆ

*****

# ಗೀತಾ ಮಧು

## ಗೀತಾ – ಸುಗೀತಾ[೧]

ಭಗವದ್ಗೀತೆಯು ಜಗನ್ಮಾನ್ಯವಾದ ಅಮರ ಕೃತಿ; ಭಗವಂತನನ್ನು ಒಪ್ಪುವ ಎಲ್ಲರಿಗೂ ಅತ್ಯಂತಪ್ರಿಯಗ್ರಂಥ; ಗಾತ್ರದಲ್ಲಿ ಅದರಂತಹ ಪುಟ್ಟ ತಾತ್ತ್ವಿಕಕೃತಿ ಜಗತ್ತಿನಲ್ಲೇ ಮತ್ತೊಂದಿಲ್ಲ; ಅದರಂತೆ ಹಿರಿಮೆಯಲ್ಲಿ ಅದನ್ನು ಮೀರುವ ಗ್ರಂಥ ಕೂಡ. ಅದು ಬರುವ ಮಹಾಭಾರತವೂ ಹಾಗೆಯೇ; ಅರ್ಥದಲ್ಲಿರಲಿ, ಗಾತ್ರದಲ್ಲೂ ಇಂದೂ ಅದೇ ವಿಶ್ವದ ಸಾರ್ವಭೌಮಗ್ರಂಥ; ಮಹಾಭಾರತವು ಮೂಲತಃ ಕೃಷ್ಣನ ಕಥೆಯಾದರೆ, ಗೀತೆ ಆ ಕೃಷ್ಣನ ಉಪದೇಶದ ಸಾರವಾಗಿದೆ; ಗೀತೆಯು ಮಹಾಭಾರತದ 'ದರ್ಶನ'ವಾದರೆ, ಮಹಾಭಾರತವು ಗೀತಾತತ್ತ್ವದ 'ನಿದರ್ಶನ'ವಾಗಿದೆ. ಗೀತೆಯು ವಾಮನನಾದರೆ ಮಹಾಭಾರತವು ಅದರ ತ್ರಿವಿಕ್ರಮರೂಪವಾಗಿದೆ; ವಾಮನ-ತ್ರಿವಿಕ್ರಮ ಎರಡೂ ಮಹಾವಿಷ್ಣುವಿನ ಎರಡು ರೂಪಗಳೇ ಆಗಿವೆ. ಅರ್ಜುನನ ತಿಳಿವಿಗಾಗಿ ಯಾದವಕೃಷ್ಣ ಗೀತೆಯನ್ನು ಉಪದೇಶಿಸಿದರೆ, ಜಗತ್ತಿನ ತಿಳಿವಿಗಾಗಿ ವಾಸಿಷ್ಠಕೃಷ್ಣ ವೇದವ್ಯಾಸರು ಅದನ್ನು ಗ್ರಂಥರೂಪದಲ್ಲಿ ಒದಗಿಸಿದ್ದಾರೆ[೨]. ಅವುಗಳಲ್ಲಿ ಯಾವ ಒಂದನ್ನು ತಿಳಿಯದಿದ್ದರೂ, ಉಳಿದ ಮತ್ತೊಂದು ತಿಳಿಯುವುದಿಲ್ಲ. ಪದ್ಮನಾಭನ ಮುಖಪದ್ಮದಿಂದ ಹೊರಹೊಮ್ಮಿದ ಗೀತೆ, ವ್ಯಾಸರ ಮುಖಪದ್ಮದಿಂದ ಜಗತ್ತಿಗೆ ತಲುಪಿತು; ಅದರಲ್ಲಿ ತುಂಬಿರುವುದಂತು ಪ್ರಮೇಯಪದ್ಮಗಳೇ.

[೩]ಮಹಾಭಾರತವು ಎಲ್ಲ ಬಗೆಯಲ್ಲೂ ವಿಶಿಷ್ಟವಾದ ಕೃತಿ; ವಸ್ತುವಾಗಿ ಅದು ಇತಿಹಾಸ; ಕಾವ್ಯವಾಗಿ ಅದು ಕವಿಗಳ ಕಲ್ಪವೃಕ್ಷ; ತತ್ತ್ವದಿಂದಾಗಿ ವೇದೋತ್ತಮವಾದ ಮಹಾಶಾಸ್ತ್ರ. ಬರೆದ ವ್ಯಾಸರೂ ಅಷ್ಟೇ ಅವರು ಬರೆಯದ್ದೇ[೪] ಇಲ್ಲ; ಅವರ ಕೃತಿಗಳಲ್ಲಿ ಭಗವಂತನ ವಿಷಯವಿದ್ದರೆ, ಅವರಂತೂ ಸ್ವತಃ [೫]ಭಗವಂತನೇ ಆಗಿರುವರು.

---

೧. ಗೀತಾ ಸುಗೀತಾ ಕರ್ತವ್ಯಾ ಕಿಮನ್ಯೈಃ ಶಾಸ್ತ್ರಸಂಗ್ರಹೈಃ ।
ಯಾ ಸ್ವಯಂ ಪದ್ಮನಾಭಸ್ಯ ಮುಖಪದ್ಮಾದ್ವಿನಿಃಸೃತಾ ॥ –ಮಹಾಭಾರತ (೬/೪೩/೧)

೨. ಏಕಾಂತೇ ಕಥಯನ್ನಪಿ ವ್ಯಾಸರೂಪೇಣ ತದೇವ ಲೋಕೇ ಪ್ರಕಾಶಯಿಷ್ಯತಿ ಹಿ ।
–ಗೀತಾತಾತ್ಪರ್ಯ(೨/೧೧)

೩. ಮಹತ್ತ್ವಾತ್ ಭಾರವತ್ತ್ವಾಚ್ಚ ಮಹಾಭಾರತಮುಚ್ಯತೇ ।
ನಿರುಕ್ತಮಸ್ಯ ಯೋ ವೇದ ಸರ್ವಪಾಪೈಃ ಪ್ರಮುಚ್ಯತೇ ॥ – ಮಹಾಭಾರತ (೧/೧/೨೬೪)

೪. ವ್ಯಾಸೋಚ್ಛಿಷ್ಟಂ ಜಗತ್ಸರ್ವಮ್ ।

೫. ಕೃಷ್ಣದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪ್ರಭುಮ್ ।
ಕೋ ಹ್ಯನ್ಯಃ ಪುಂಡರೀಕಾಕ್ಷಾನ್ಮಹಾಭಾರತಕೃದ್ಭವೇತ್ ॥ – ಮ ಭಾ ತಾ ನಿ(೨/೫೫)

ಮಹಾಭಾರತವನ್ನೂ ಮೀರಿಸುವ ಏಕಮಾತ್ರ ಕೃತಿ 'ಬ್ರಹ್ಮಸೂತ್ರ'ವೂ ಅವರ ರಚನೆಯೇ; ಹದಿನೆಂಟು ಪುರಾಣಗಳನ್ನು ಬರೆದವರೂ ಅವರೇ; ಜಗತ್ತಿಗೆ ಜ್ಞಾನಕೊಟ್ಟ ಮಹನೀಯರಲ್ಲಿ ಅವರದೇ ಅಗ್ರಸ್ಥಾನ. ಕರ್ಮಮೀಮಾಂಸೆ ಬರೆದ ಜೈಮಿನಿ, ದೈವೀಮೀಮಾಂಸೆಯ ಬಹುಭಾಗ ಬರೆದ ಶೇಷಪೈಲರು ಅವರ ಶಿಷ್ಯರೇ ಆಗಿರುವರು. ಸಕಲಪುರಾಣಗಳನ್ನು ಪ್ರವಚನ ಮಾಡಿದ ಸೂತಪುರಾಣಿಕರು ಅವರ ಅನುಗ್ರಹದಿಂದ ಜನಿಸಿದವರು. ಮಹಾಭಾರತಪ್ರವರ್ತಕ ವೈಶಂಪಾಯನರು, ಅಥರ್ವಣವೇದಪ್ರವರ್ತಕ ಸುಮಂತು ಇವರ ಶಿಷ್ಯರು. ಅದರಂತೆ ಬಾದರಿ, ಕಾಶಕೃತ್ಸ್ನ, ಔಡುಲೋಮಿ, ಕಾರ್ಷ್ಣಾಜಿನಿ ಮೊದಲಾದ ಅನೇಕ ಪ್ರಮುಖ ಆಚಾರ್ಯರುಗಳು ಸಹ ಇವರ ಶಿಷ್ಯವರ್ಗಕ್ಕೆ ಸೇರಿದವರು.

ಕೃತಿಕಾರರಾಗಿ ಮಾತ್ರವಲ್ಲದೆ, ವ್ಯಾಸರು ಮಹಾಭಾರತದ ಪ್ರಧಾನ ಪಾತ್ರಧಾರಿಯೂ ಆಗಿರುವರು; ಕುರು-ಪಾಂಡವರ ಜನಕರಾದ ಧೃತರಾಷ್ಟ್ರ, ಪಾಂಡುಗಳಿಗೆ ಜನ್ಮವಿತ್ತವರೇ ಇವರು; ಅಂದರೆ ಕೌರವ ಪಾಂಡವರು ಇವರ ಮೊಮ್ಮಕ್ಕಳು; ಮಹಾಭಾರತವು ತಾತ ಬರೆದ ಮೊಮ್ಮಕ್ಕಳ ಕಥೆ. ಮಹಾಭಾರತದ ಉದ್ದಕ್ಕೂ ಎಲ್ಲೆಡೆಯೂ ಕೃಷ್ಣನಂತೆ ಕಾಣಿಸಿಕೊಳ್ಳುವ ಮತ್ತೊಂದು ಪ್ರಮುಖ ಪಾತ್ರ ಇವರದು.

ಮಹಾಭಾರತವನ್ನು ಕೇಳದ ಜನರಿಲ್ಲ ; ಅದನ್ನು ಪೂರ್ಣವಾಗಿ [೧]ತಿಳಿದ ಜನರೂ ಇಲ್ಲ; ಅದರಲ್ಲಿ ಬರುವ ಗೀತೆಯೂ ಹಾಗೆಯೇ; ಅವುಗಳನ್ನು ತಿಳಿದವರಿಗಿಂತ ಅವುಗಳ ಮೇಲೆ ಬರೆದವರೇ ಹೆಚ್ಚು.

ಮಹಾಭಾರತವು ಪಂಚಮವೇದ; ವ್ಯಾಸರು ಬರೆದದ್ದರಿಂದ 'ಕಾರ್ಷ್ಣವೇದ'; ಮಹತ್ತ್ವದಲ್ಲಿ ಇತರ ವೇದಗಳಿಗಿಂತ ಮಿಗಿಲಾದ ವೇದ; ಗೀತೆ ಅದರ ಉಪನಿಷತ್ತು; ಆದ್ದರಿಂದ ಅದು ಇತರ ಉಪನಿಷತ್ತುಗಳಿಗಿಂತ ಮಿಗಿಲಾದ ಉಪನಿಷತ್ತು.

ಮಹಾಭಾರತವು ಸಕಲಶಾಸ್ತ್ರಗಳ [೨]ಸಾರ. ಬಾಲಕೃಷ್ಣನ ಬಾಯಲ್ಲಿ ಯಶೋದೆಗೆ ಇಡೀ ಬ್ರಹ್ಮಾಂಡ ಕಂಡಿತು; ಪುಟ್ಟ ಗೀತೆಯ ಮಾತುಮಾತಿನಲ್ಲೂ ಆಸ್ತಿಕರಿಗೆ ಶಾಸ್ತ್ರದ ಬ್ರಹ್ಮಾಂಡವೇ ಕಾಣುವುದು.

ಅರ್ಥದ ದೃಷ್ಟಿಯಿಂದಲೂ ಮಹಾಭಾರತ ಜಗತ್ತಿನ ಅದ್ವಿತೀಯಗ್ರಂಥ; ಇದರ ಪ್ರತಿಶ್ಲೋಕದ ಪ್ರತಿಪದಕ್ಕೂ ಅತಿ ಕಡಿಮೆ ಎಂದರೂ [೩]ಹತ್ತು ಅರ್ಥಗಳು; ಅದರಲ್ಲಿ

---

೧. ಬ್ರಹ್ಮಾಽಪಿ ತನ್ನ ಜಾನಾತಿ ಈಷತ್ತತ್ಪೂರ್ಣೋಽಪಿ ಜಾನತಿ। – ಉಪನಾರದೀಯ

೨. ಭಾರತಂ ಸರ್ವಶಾಸ್ತ್ರೇಷು ಭಾರತೇ ಗೀತಿಕಾ ವರಾ।
ವಿಷ್ಣೋಃ ಸಹಸ್ರನಾಮಾಪಿ ಜ್ಞೇಯಂ ಪಾಠ್ಯಂ ಚ ತದ್ದ್ವಯಮ್॥ – ಮಹಾಕೌರ್ಮ

೩. ತ್ರಯೋಽರ್ಥಾಃ ಸರ್ವವೇದೇಷು ದಶಾರ್ಥಾಃ ಸರ್ವಭಾರತೇ।
ವಿಷ್ಣೋಃ ಸಹಸ್ರನಾಮಾಪಿ ನಿರಂತರಶತಾರ್ಥಕಮ್॥ – ಸ್ಕಂದಪುರಾಣ

ಬರುವ ವಿಷ್ಣುಸಹಸ್ರನಾಮದ ಪ್ರತಿನಾಮಕ್ಕೂ ಕನಿಷ್ಠ ನೂರು ಅರ್ಥಗಳು. ಗೀತೆಯ ಅರ್ಥಗಳು ಹತ್ತೂ ಹೌದು, ನೂರೂ ಹೌದು; ಅವೆಲ್ಲ ಅಪೂರ್ವವೂ ಹೌದು; ಮಹಾಭಾರತದಲ್ಲಿ ಧರ್ಮಾದಿಸಕಲಪುರುಷಾರ್ಥಗಳ ವಿಚಾರವೂ ಬಂದಿದೆ; ಅದಕ್ಕೆಂದೇ ಅದು 'ಪುರುಷಾರ್ಥಗಳ[೧] ವಿಶ್ವಕೋಶ'ವಾಗಿದೆ.

ಮಹಾಭಾರತವು ಹದಿನೆಂಟು'ಪರ್ವ'ಗಳ 'ಪರ್ವತ'ವಾದರೆ ಗೀತೆಯು ಅದರ ಗೌರೀಶಂಕರ; ವಿಷ್ಣುಸಹಸ್ರನಾಮ ಅದರ ಆವಳಿಶಿಖರ; ಗೀತೆಯು ಯುದ್ಧಕ್ಕಿಂತ ಮುನ್ನ ಭೀಷ್ಮಪರ್ವದಲ್ಲಿ ಬಂದರೆ, ವಿಷ್ಣುಸಹಸ್ರನಾಮವು ಯುದ್ಧ ಮುಗಿದ ಮೇಲೆ ಭೀಷ್ಮರ ಬಾಯಿಂದ ಬಂದಿದೆ. ಅವುಗಳ ಅರಿವು ಎಂದರೆ ಅಜ್ಞಾನದ ಅಳಿವು; ಬಾಳಿನ ಉಳಿವು. ಶಾಸ್ತ್ರಗಳು ಸಾರಿವೆ – 'ವೇದ ಓದಬಲ್ಲವರಿಗೆ ಮಹಾಭಾರತ 'ವೇದಾರ್ಥ'ವಾದರೆ, ಹಾಗಲ್ಲದವರಿಗೆ ಅದೇ 'ವೇದ'; ಎಲ್ಲರಿಗೂ ಅದರಿಂದಲೇ ತತ್ತ್ವಜ್ಞಾನದ[೨] ಬೋಧ.

ಶ್ರೀಮನ್ಮಧ್ವಾಚಾರ್ಯರು ಎರಡಕ್ಕೂ ಅರ್ಥ ಬರೆದ ಮಹನೀಯರು; ಗೀತಾಭಾಷ್ಯ ಮತ್ತು ಗೀತಾತಾತ್ಪರ್ಯನಿರ್ಣಯಗಳು 'ಗೀತಾರ್ಥ'ಗಳಾದರೆ ಮಹಾಭಾರತ-ತಾತ್ಪರ್ಯನಿರ್ಣಯವು 'ಭಾರತಾರ್ಥ'ವಾಗಿದೆ. ಗೀತೆಯ ಮೇಲೆ ಎರಡು ಕೃತಿಗಳನ್ನು ಕೊಟ್ಟ ಏಕಮಾತ್ರ ಆಚಾರ್ಯರು ಅವರು; ಅವರು ಹೇಳುತ್ತಾರೆ : "ಮಹಾಭಾರತವು ಪಾರಿಜಾತ; ಗೀತೆಯು ಅದರ ಮಧು".

ಮತ್ತೊಂದು ಮಾತೂ ಉಂಟು; "ಸಕಲ ಉಪನಿಷತ್ತುಗಳು ಗೋವುಗಳು; ಶ್ರೀಕೃಷ್ಣನೇ ಗೋವಳಿಗ; ಅರ್ಜುನನೇ ಕರು; ಗೀತಾಮೃತವೇ ಅವನು ಕರೆದ ಕ್ಷೀರ; ಸಜ್ಜನರು ಅದನ್ನು ಸವಿಯುವವರು"[೩]. ದೇಹದ ಪೋಷಣೆಗೆ ಅವಶ್ಯವಾದ ಸಕಲ ಅಂಶಗಳೂ ಹಸುವಿನ ಹಾಲಿನಲ್ಲಿರುವಂತೆ ಜೀವದ ಪೋಷಣೆಗೆ ಅವಶ್ಯವಾದ ಸಕಲವಿಚಾರಗಳೂ ಗೀತೆಯಲ್ಲಿ ಬಂದಿವೆ ಎಂದು ಅದರ ಭಾವ.

ಗೀತೆಯನ್ನು ಕೇಳಿದವನು ನರ(ನರಾಂಶ ಅರ್ಜುನ) ಹೇಳಿದವನು ನಾರಾಯಣ (ಶ್ರೀಕೃಷ್ಣ); ಅಂದರೆ ಇದು ಸಕಲ ನರರಿಗೂ ಭಗವಂತನಾದ ನಾರಾಯಣನ ಜ್ಞಾನ ಸಂದೇಶ.

---

೧. ಧರ್ಮೇ ಚಾರ್ಥೇ ಚ ಕಾಮೇ ಚ ಮೋಕ್ಷೇ ಚ ಭರತರ್ಷಭ।
ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ಕುತ್ರಚಿತ್। – ಮಹಾಭಾರತ (೧೮/೫/೫೦)

೨. ಭಾರತಂ ಬ್ರಾಹ್ಮಣಾದೀನಾಂ ವೇದಾರ್ಥಪರಿವಿತ್ತಯೇ।
ತ ಏವ ವೇದಾಸ್ತ್ವನ್ಯೇಷಾಂ ನರ್ತೇ ತತ್ ಕಸ್ಯಚಿತ್ ಸುಖಮ್॥
– ಇತಿ ಸ್ಕಾಂದೇ– ಭಾಗವತ ತಾತ್ಪರ್ಯ ನಿರ್ಣಯ (೧/೪/೨೪)

೩. ಸರ್ವೋಪನಿಷದೋ ಗಾವೋ ದೋಗ್ಧಾ ಗೋಪಾಲನಂದನಃ।
ಪಾರ್ಥೋ ವತ್ಸಃ ಸುಧೀರ್ಭೋಕ್ತಾ ದುಗ್ಧಂ ಗೀತಾಮೃತಂ ಮಹತ್ ॥

ಮಹಾಭಾರತದಲ್ಲಿ ಮತ್ತೊಂದು ಮಾತೂ ಇದೆ:

ಗೀತಾ, ಗಂಗಾ, ಗಾಯತ್ರೀ ಮತ್ತು ಗೋವಿಂದ ಎಂಬ ನಾಲ್ಕನ್ನು ಹೃದಯದಲ್ಲಿ ಹೊತ್ತವನಿಗೆ ಮತ್ತೆ ಹುಟ್ಟುವ[1] ಭಯವಿಲ್ಲ. ಗೀತೆಯು ಭಗವಂತನ ಮುಖಪದ್ಮದಿಂದ ಬಂದ ವಾಣಿ. ಗಂಗೆಯು ಆ ಶ್ರೀಹರಿಯ ಪವಿತ್ರ ಪಾದೋದಕ, ಗಾಯತ್ರಿಯು ಅವನ ಮಹಿಮೆಯನ್ನು ಅಪಾರ ಎಂದು ಸಾರುವ ವೇದಗಳ ಸಾರಸರ್ವವೆನಿಸಿದ ಮಹಾ ಮಂತ್ರ. ಗೋವಿಂದ ಮೋಕ್ಷ ನೀಡುವಂತಹ ಸಾಕ್ಷಾತ್ ಶ್ರೀಹರಿ. ಹೀಗೆ ಈ ಗ ಕಾರಗಳಲ್ಲಿ ಮೋಕ್ಷಸಾಧನೆಯ ರಹಸ್ಯವೇ ಅಡಗಿದೆ.

ಭಗವದ್ಗೀತೆ ಒಟ್ಟು ಹದಿನೆಂಟು ಅಧ್ಯಾಯಗಳ ಪುಟ್ಟಗ್ರಂಥ ; ಇದರಲ್ಲಿನ ಒಟ್ಟು ಶ್ಲೋಕಗಳ ಸಂಖ್ಯೆ ೭೦೧; ಇದರಲ್ಲಿನ ಒಟ್ಟು ೧೮ ಅಧ್ಯಾಯಗಳ ಹೆಸರುಗಳು ಕ್ರಮವಾಗಿ[2] ಹೀಗಿವೆ[3] :

| | |
|---|---|
| ೧. ಅರ್ಜುನವಿಷಾದಯೋಗ (೪೭) | ೨. ಸಾಂಖ್ಯಯೋಗ (೭೨) |
| ೩. ಕರ್ಮಯೋಗ (೪೩) | ೪. ಜ್ಞಾನಯೋಗ (೪೨) |
| ೫. ಸಂನ್ಯಾಸಯೋಗ (೨೯) | ೬. ಆತ್ಮಸಂಯಮ(ಧ್ಯಾನ)ಯೋಗ (೪೭) |
| ೭. ಜ್ಞಾನವಿಜ್ಞಾನಯೋಗ (೩೦) | ೮. ಅಕ್ಷರಬ್ರಹ್ಮಯೋಗ (೨೮) |
| ೯. ರಾಜವಿದ್ಯಾರಾಜಗುಹ್ಯಯೋಗ (೩೪) | ೧೦. ವಿಭೂತಿಯೋಗ (೪೨) |
| ೧೧. ವಿಶ್ವರೂಪದರ್ಶನಯೋಗ (೫೫) | ೧೨. ಭಕ್ತಿಯೋಗ (೨೦) |
| ೧೩. ಕ್ಷೇತ್ರಕ್ಷೇತ್ರಜ್ಞಯೋಗ (೩೫) | ೧೪. ಗುಣತ್ರಯವಿಭಾಗಯೋಗ (೨೭) |
| ೧೫. ಪುರುಷೋತ್ತಮಯೋಗ (೨೦) | ೧೬. ದೈವಾಸುರಸಂಪದ್ವಿಭಾಗಯೋಗ (೨೪) |
| ೧೭. ಶ್ರದ್ಧಾತ್ರಯವಿಭಾಗಯೋಗ (೨೮) | ೧೮. ಮೋಕ್ಷಸನ್ಯಾಸಯೋಗ (೭೮) |

ಇವುಗಳನ್ನು ಆರಾರು ಅಧ್ಯಾಯಗಳ ಒಟ್ಟು ಮೂರು ಭಾಗಗಳನ್ನಾಗಿ ವಿಂಗಡಿ-ಸಿರುವರು; ಪ್ರಥಮಷಟ್ಕ (ಶ್ಲೋ.೨೮೦)ದಲ್ಲಿ ತತ್ತ್ವಜ್ಞಾನದ ಉಪಾಯವಾದ ಕರ್ಮ-ಯೋಗವೂ, ದ್ವಿತೀಯ(ಶ್ಲೋ. ೨೦೯)ಷಟ್ಕದಲ್ಲಿ ಮೋಕ್ಷಕ್ಕೆ ಸಾಧನವಾದ ತತ್ತ್ವ-ಜ್ಞಾನದ ಸ್ವರೂಪವೂ, ತೃತೀಯ(ಶ್ಲೋ. ೨೧೨)ಷಟ್ಕದಲ್ಲಿ ಅವೆರಡರ ವಿವರಣೆಯೂ[4] ಬಂದಿದೆ.

---

೧. ಗೀತಾ ಗಂಗಾ ಚ ಗಾಯತ್ರೀ ಗೋವಿಂದೇತಿ ಹೃದಿಸ್ಥಿತೇ।
ಚತುರ್ಗಕಾರಸಂಯುಕ್ತೇ ಪುನರ್ಜನ್ಮ ನ ವಿದ್ಯತೇ ॥ – ಮಹಾಭಾರತ (೬/೪೩/೩)

೨. ಕಂಸದಲ್ಲಿನ ಸಂಖ್ಯೆ ಆಯಾ ಅಧ್ಯಾಯದಲ್ಲಿನ ಒಟ್ಟು ಶ್ಲೋಕಗಳ ಸಂಖ್ಯೆ.

೩. ಪ್ರಾಚೀನಪ್ರತಿಗಳಲ್ಲಿ ಅಧ್ಯಾಯಗಳ ನಾಮನಿರ್ದೇಶನ ಕಂಡುಬರುವುದಿಲ್ಲ

೪. ತತ್ರ ಪೂರ್ವಷಟ್ಕೇ .....ಪ್ರಾಗುಕ್ತಸ್ಯ ಪ್ರಪಂಚನಂ ಕ್ರಿಯತೇ ಇತಿ ವಿವೇಕಃ।
– ಶ್ರೀರಾಘವೇಂದ್ರಸ್ವಾಮಿಗಳ ಗೀತಾವಿವೃತಿ

ಕುರುಕ್ಷೇತ್ರಯುದ್ಧದ ಕಾಲಕ್ಕೆ ಪಾಂಡವರ - ಕೌರವರ ವಯಸ್ಸು ಎಷ್ಟು ಎಂಬುದು ತುಂಬಾ ಕುತೂಹಲದ ವಿಚಾರ. ಶ್ರೀಕೃಷ್ಣನು ಪರಂಧಾಮಕ್ಕೆ ತೆರಳಿದ್ದು ಒಟ್ಟು ೧೦೬ ವರ್ಷಗಳು ಮತ್ತು ೬ ತಿಂಗಳುಗಳ ಅನಂತರ; ಪಾಂಡವರು ಸ್ವರ್ಗಾರೋಹಣ ಮಾಡಿದ್ದೂ ಆಗಲೇ. ಅವರು ಕುರುಕ್ಷೇತ್ರ ಯುದ್ಧದ ಅನಂತರ ರಾಜ್ಯಭಾರ ನಡೆಸಿದ್ದು ಒಟ್ಟು ಮೂವತ್ತಾರು ವರ್ಷಗಳು. ಎಂದರೆ ಕುರುಕ್ಷೇತ್ರಯುದ್ಧಕಾಲಕ್ಕೆ ಶ್ರೀಕೃಷ್ಣನ ವಯಸ್ಸು ೭೦ ವರ್ಷ ಆರು ತಿಂಗಳು; ಭೀಮಸೇನ ಅವನಿಗಿಂತ ಐದು ತಿಂಗಳು ಹಿರಿಯ; ಅರ್ಜುನ ಶ್ರೀಕೃಷ್ಣನಿಗಿಂತ ಏಳು ತಿಂಗಳು ಕಿರಿಯ; ಎಂದರೆ ಅವರ ವಯಸ್ಸುಗಳು ಕ್ರಮವಾಗಿ ೭೦ ವರ್ಷ ೧೧ ತಿಂಗಳು ಮತ್ತು ೬೯ ವರ್ಷ ೧೧ ತಿಂಗಳುಗಳು; ಯುಧಿಷ್ಠಿರ ಭೀಮನಿಗಿಂತ ಒಂದು ವರ್ಷ ಹಿರಿಯ; ಅವನ ವಯಸ್ಸು ೭೧ ವರ್ಷ ೧೧ ತಿಂಗಳು; ನಕುಲ ಸಹದೇವರ ವಯಸ್ಸು ೬೮ ವರ್ಷ ೧೧ ತಿಂಗಳುಗಳು.

ಕೌರವರ ಕಡೆಯವರಲ್ಲಿ ದುರ್ಯೋಧನನು ಭೀಮನ ಸಮವಯಸ್ಕ (ಒಂದು ದಿನ ಮಾತ್ರ ಹಿರಿಯ); ಅವನ ನೂರು ಜನ ತಮ್ಮಂದಿರ ಅಂತರ ಕ್ರಮವಾಗಿ ಒಂದು ದಿನ ಮಾತ್ರ. ಭೀಷ್ಮರ ವಯಸ್ಸು ೮೦೦ ವರ್ಷಗಳು; ದ್ರೋಣ, ಕೃಪ, ದ್ರುಪದ, ವಿರಾಟ ಮೊದಲಾದವರು ಅವರ ಸಮವಯಸ್ಕರು; ಭೀಷ್ಮರ ತಂದೆ ಶಂತನುವಿನ ಅಣ್ಣ ಬಾಹ್ಲೀಕನೂ ಆ ಯುದ್ಧದಲ್ಲಿ ಪಾಲ್ಗೊಂಡಿದ್ದ; ಎಂದರೆ ಅವನ ವಯಸ್ಸು ೮೦೦ನ್ನೂ ಮೀರಿತ್ತು. ಅಂತೂ ಆ ಯುದ್ಧದಲ್ಲಿ ಅತ್ಯಂತ ಹಿರಿಯ ಬಾಹ್ಲೀಕ(ಈತ ಪ್ರಹ್ಲಾದನ ಅವತಾರ); ಯೋಗ್ಯತೆಯಲ್ಲಿ ಅತ್ಯಂತ ಹಿರಿಯ ಭಗವಂತನಾದ ಶ್ರೀಕೃಷ್ಣ(ನರಸಿಂಹ).

ಇದರಂತೆ ಪಾಂಡವರು ಮೊದಲಬಾರಿಗೆ ಹಸ್ತಿನಾಪುರಕ್ಕೆ ಬಂದಾಗ ಭೀಮನಿಗೆ ೧೫ ವರ್ಷ, ಅರ್ಜುನನಿಗೆ ೧೪,ಯುಧಿಷ್ಠಿರನಿಗೆ ೧೬ ವರ್ಷ, ನಕುಲ ಸಹದೇವರಿಗೆ ೧೩ ವರ್ಷ; ಅವರು ವಾರಣಾವತಕ್ಕೆ ತೆರಳುವವರೆಗೆ ಅಲ್ಲಿ ಇದ್ದದ್ದು ೧೩ ವರ್ಷಗಳು; ಅರಗಿನ ಮನೆಯಲ್ಲಿ ೬ ತಿಂಗಳು, ಹಿಡಿಂಬವನ ಮತ್ತು ಏಕಚಕ್ರನಗರಗಳಲ್ಲಿ ೬ ತಿಂಗಳು, ದ್ರೌಪದೀ ಸ್ವಯಂವರದ ನಂತರ ಪಾಂಚಾಲ ದೇಶದಲ್ಲಿ ೧ ವರ್ಷ, ಅನಂತರ ಹಸ್ತಿನಾಪುರಕ್ಕೆ ಮರಳಿ ಅಲ್ಲಿ ಇದ್ದದ್ದು ೫ ವರ್ಷಗಳು, ಅನಂತರ ರಾಜಸೂಯ- ಯಾಗದವರೆಗೆ ಇಂದ್ರಪ್ರಸ್ಥದಲ್ಲಿ ರಾಜ್ಯಭಾರ ೨೩ ವರ್ಷಗಳ ಕಾಲ, ಅನಂತರ ದ್ಯೂತ, ೧೨ ವರ್ಷಗಳ ವನವಾಸ , ಒಂದು ವರ್ಷ ಅಜ್ಞಾತವಾಸ; ಹೀಗೆ ಮೇಲೆ ಹೇಳಿದ ವಯಸ್ಸು ಇವರಿಗೆಲ್ಲ ಈ ದೃಷ್ಟಿಯಿಂದಲೂ ಸರಿ ಹೊಂದುತ್ತದೆ.

ಗೀತೆಯ ವಯಸ್ಸು ಐದು ಸಾವಿರ ವರ್ಷವನ್ನೂ ಮೀರುತ್ತದೆ; ಆದರೆ ಅದರ ತತ್ತ್ವ ಮಾತ್ರ ನಿತ್ಯನೂತನ. ಜನಗಳಿರುವವರೆಗೂ ಅದು ಇದ್ದೇ ಇರುತ್ತದೆ; ಅದು ಇಲ್ಲದಾಗ ಜನಗಳ ಬದುಕೂ ಇಲ್ಲವಾಗುತ್ತದೆ.

ಧರ್ಮಾದಿಪಾಂಡವರಿಗೆ ಶ್ರೀಕೃಷ್ಣನ ರಕ್ಷಣೆ ಇದ್ದಂತೆ, ಧಾರ್ಮಿಕಜನತೆಗೆ ಸದಾ ಭಗವಂತನ ಆಸರೆ ಇದ್ದೇ ಇರುತ್ತದೆ ಎಂಬುದು ಗೀತೆಯ ಸಂದೇಶ.

ಅರ್ಜುನನಂತಹ ಮಹಾಜ್ಞಾನಿಗೆ ಅಜ್ಞಾನವೇ? ಹೌದು; ಗ್ರಹಣ ಹಿಡಿಯುವುದು ಸೂರ್ಯಚಂದ್ರರಂತಹ ತೇಜೋರಾಶಿಗಳಿಗೇ ಹೊರತು ನಕ್ಷತ್ರಗಳಿಗಲ್ಲ. ಜ್ಞಾನಿಗಳ ಇಂತಹ ಬೌದ್ಧಿಕಗ್ರಹಣವನ್ನು ಶಾಸ್ತ್ರಗಳು 'ಜ್ಞಾನತಿರೋಧಾನ' ಎನ್ನುತ್ತವೆ. ಗ್ರಹಣದ ಅವಧಿ ದಿನಗಟ್ಟಲೆ ಅಲ್ಲ; ಗಂಟೆಗಟ್ಟಲೆ ನಿಮಿಷಗಟ್ಟಲೆ ಮಾತ್ರ. ಇಂತಹವರ ಜ್ಞಾನತಿರೋಧಾನವೂ ಅಂತೆಯೇ ಅಲ್ಪಕಾಲಿಕ.

ಯುದ್ಧದಂತಹ ವಿಷಮಸನ್ನಿವೇಶದಲ್ಲಿ ಅಂತಹ ಅಜ್ಞಾನ ಸಂಭಾವಿತವೇ? ಹೌದು; ಸೂರ್ಯಗ್ರಹಣ ಕಾಣುವುದು ಹಗಲಿನಲ್ಲಿ; ಹಾಗೆಯೇ ಚಂದ್ರಗ್ರಹಣ ರಾತ್ರಿಯಲ್ಲಿ ; ಅಂದರೆ ಅವರು ಬೆಳಗಬೇಕಾದ ಕಾಲದಲ್ಲಿ. ಹೀಗೆ ಅಸಾಧ್ಯಗಳನ್ನು ಸಾಧ್ಯವಾಗಿಸುವುದರಲ್ಲೇ ವಿಧಿಯ ಹಿರಿಮೆ ತುಂಬಿದೆ; ಜೀವನದ ರಹಸ್ಯ ಅಡಗಿದೆ.

ಯುದ್ಧರಂಗದಲ್ಲಿ ಉಪದೇಶವೇ? ಹೌದು ಹೇಳಬಲ್ಲ ಗುರು, ಕೇಳಬಲ್ಲ ಶಿಷ್ಯ ಜೊತೆಗೂಡಿದಾಗ ರಣರಂಗವೂ ಗುರುಕುಲವಾಗುತ್ತದೆ; ಹಾಗಿಲ್ಲದಾದಾಗ ಗುರುಕುಲ ರಣರಂಗವಾಗುತ್ತದೆ; ವಿದ್ಯಾಲಯ ನಿದ್ರಾಲಯವಾಗುತ್ತದೆ.

ಗೀತೋಪದೇಶದ ಅವಧಿ ಎಷ್ಟು? ಈಗಿರುವ ರೀತಿಯಲ್ಲಿ ಗೀತೆಯ ಪಾರಾಯಣದ ಅವಧಿ ಬಲ್ಲವರಿಗೆ ಒಂದೂವರೆ ತಾಸುಗಳನ್ನು ಮೀರುವುದಿಲ್ಲ; ಇದು ವ್ಯಾಸರು ಎಲ್ಲರಿಗೂ ತಿಳಿಯಲಿ ಎಂದು ನಿರೂಪಿಸಿದ್ದು; ಅದು ಅರ್ಜುನನಿಗೆ ತಿಳಿಯಲಿ ಎಂದು ಶ್ರೀಕೃಷ್ಣ ಉಪದೇಶಿಸಿದ್ದು; ಇದು ವಿಸ್ತಾರ, ಅದು ಸಂಕ್ಷೇಪ. ಎಂದರೆ ಅದರ ಅವಧಿ ಹೆಚ್ಚೆಂದರೆ ೩೦ ರಿಂದ ೪೦ ನಿಮಿಷಗಳಷ್ಟು ಮಾತ್ರ.

## ಭಗವದ್ಗೀತೆಯ ಹಿನ್ನೆಲೆ

ಪಾಂಡವ ಕೌರವರ ಜನನದೊಂದಿಗೆ ಅವರ ವೈರವೂ ಹುಟ್ಟಿತು; ಅವರು ಬೆಳೆದಂತೆ ಅದೂ ಬೆಳೆಯಿತು. ಪಾಂಡವರು ಧರ್ಮಪ್ರಿಯರು; ಕೌರವರು ಅಧರ್ಮಪ್ರಿಯರು. ಅದೇ ಅವರ ವೈರಕ್ಕೆ ಕಾರಣವಾಯಿತು. ಪಾಂಡವರ ಬೆಂಬಲಕ್ಕೆ ಶ್ರೀಕೃಷ್ಣ ನಿಂತರೆ, ಕೌರವರ ಬೆಂಬಲಕ್ಕೆ ಶಕುನಿ ನಿಂತ. ಆಸ್ತಿಕರಿಗೆ ಭಗವಂತನ ಬೆಂಬಲ; ಹಾಗಲ್ಲದವರಿಗೆ ನಾಸ್ತಿಕ್ಯವೇ ಬೆಂಬಲ; ಶ್ರೀಕೃಷ್ಣನನ್ನು ನಂಬಿದ ಪಾಂಡವರು ರಾಜಸೂಯ ಮಾಡಿದರು; ಶಕುನಿಯನ್ನು ನಂಬಿದ ಕೌರವರು ಜೂಜಿಗಿಳಿದರು; ಧರ್ಮರಾಜನಿಗೆ ದ್ಯೂತವೂ ತಿಳಿಯದು, ಕಪಟವೂ ತಿಳಿಯದು. ಶಕುನಿಗೆ ತಿಳಿದಿದ್ದುದ್ದೇ ಆ ಎರಡು; ಧರ್ಮರಾಜನು ದ್ಯೂತಕ್ಕಿಂತ ಹೆಚ್ಚಾಗಿ ಕಪಟಕ್ಕೆ ಬಲಿಯಾದ. ಪಾಂಡವರ ಸಭೆಯಲ್ಲಿ ಶ್ರೀಕೃಷ್ಣನಿಗೆ ಅಗ್ರಪೂಜೆಯಾಯಿತು; ಕೌರವರ ಸಭೆಯಲ್ಲಿ ಕೃಷ್ಣನಿಗೆ ಅವಮಾನವಾಯಿತು; ಅದನ್ನು

ಕಂಡ ಭೀಷ್ಮರು ಇದನ್ನೂ ಕಂಡರು. ಕೃಷ್ಣನಿಗೆ ಅಗ್ರಪೂಜೆ ಮಾಡಲು ಸೂಚಿಸಿದ ಭೀಷ್ಮರು ಕೃಷ್ಣೆಗಾದ ಅವಮಾನವನ್ನು ಪ್ರತಿಭಟಿಸದಾದರು. ಅಗ್ರಪೂಜೆಗೆ ಅಡ್ಡಿಮಾಡಲೆಂದು ಬಂದ ಶಿಶುಪಾಲನನ್ನು ಜರಿದ ಅವರು, ಕೃಷ್ಣೆಯ ಅವಮಾನವನ್ನು ಪ್ರತಿಭಟಿಸಿದ ವಿದುರನನ್ನು ಬೆಂಬಲಿಸದಾದರು. ಗಂಗಾಪುತ್ರನ ಎದುರು ಸರಸ್ವತಿಗೆ ಅವಮಾನವಾಯಿತು; ಧೃತರಾಷ್ಟ್ರ ಕಣ್ಣಿಲ್ಲದೆ ಮೌನವಹಿಸಿದರೆ; ಇವರೆಲ್ಲ ಕಣ್ಣಿದ್ದು ಬಾಯಿತೆರೆಯದಾದರು. ಕೊನೆಗೂ ಆಗ ಕಾಪಾಡಿದ್ದು ಶ್ರೀಕೃಷ್ಣ; ಪ್ರತೀಕಾರದ ಪಣ ತೊಟ್ಟಿದ್ದು ಭೀಮ. ದ್ಯೂತ ಮತ್ತೊಮ್ಮೆ ನಡೆಯಿತು; ಧರ್ಮರಾಜ ಮತ್ತೊಮ್ಮೆ ಸೋತನು. ಪಾಂಡವರು ವನವಾಸಕ್ಕೆ ನಡೆದರು; ಅಜ್ಞಾತವಾಸವನ್ನು ಪೂರೈಸಿದರು. ಕೌರವರಿಗೆ ಗೊತ್ತಿತ್ತು 'ಅವರು ಬರುವುದು ಎಂದರೆ ನಾವು ಹೋಗುವುದು' ಎಂದು; ಅದಕ್ಕೆಂದೇ ವಾದಿಸಿದರು : 'ಇವರು ಅಜ್ಞಾತವಾಸ ಪೂರೈಸಿಯೇ ಇಲ್ಲ'. ತಮ್ಮ ವಾದವನ್ನು ಒಪ್ಪದವರನ್ನೆಲ್ಲ ಅವರು ಧಿಕ್ಕರಿಸಿದರು.

ಪಾಂಡವರ ರಾಜ್ಯವನ್ನು ಅವರಿಗೆ ಮರಳಿಸಲು ಪಿತಾಮಹಭೀಷ್ಮರು, ಮಾತಾಪಿತೃಗಳಾದ ಧೃತರಾಷ್ಟ್ರ-ಗಾಂಧಾರಿಯರು, ಆಚಾರ್ಯರಾದ ದ್ರೋಣ-ಕೃಪರು, ಚಿಕ್ಕಪ್ಪ ವಿದುರ, ನಾರದಾದಿಮುನಿಗಳು ಮೊದಲಾಗಿ ಎಲ್ಲರೂ ಹೇಳಿದರು. ಅವನು ಮಾತ್ರ ಯಾರ ಮಾತನ್ನೂ ಕೇಳಲಿಲ್ಲ. ಸ್ವತಃ ಶ್ರೀಕೃಷ್ಣ ಅವನಿಗೆ ಆ ಮಾತನ್ನು ಹೇಳಿದ; ಹಾಗೆ ಹೇಳಿದ್ದು 'ಅವನು ಕೇಳಲಿ' ಎಂದಲ್ಲ; ಅವನು 'ಕೇಳುವುದಿಲ್ಲ' ಎಂಬುದು ಜಗತ್ತಿಗೆ ತಿಳಿಯಲಿ ಎಂದು. ದುರ್ಯೋಧನನು ಕೇಳಲಿಲ್ಲ; ಕೇಳುವ ಪ್ರವೃತ್ತಿ ಅವನಿಗೆ ಇರಲೂ ಇಲ್ಲ. ಯಾರು ತೋರಿಸಿದರೂ ಕುರುಡನಿಗೆ ಏನೂ ಕಾಣುವುದೂ ಇಲ್ಲ. ಕೊನೆಗೆ ಯುದ್ಧ ಅನಿವಾರ್ಯವಾಯಿತು. ಅವರ ಪೂರ್ವಜ 'ಕುರು'ರಾಜ ನಿರ್ಮಿಸಿದ ಕುರುಕ್ಷೇತ್ರ ಅವರ ಸಮರಕ್ಷೇತ್ರವಾಯಿತು. ಧೃಷ್ಟದ್ಯುಮ್ನ ಪಾಂಡವರ ಸೇನಾಧಿಪತಿಯಾದ; ಕೌರವರಲ್ಲಿ ಆ ಕಾರ್ಯ ಭೀಷ್ಮರದಾಯಿತು.

ಈ ಮಧ್ಯೆ ವೇದವ್ಯಾಸರು ಧೃತರಾಷ್ಟ್ರನನ್ನು ಕೇಳಿದರು "ಯುದ್ಧವನ್ನು ನಿನ್ನ ಕಣ್ಣುಗಳಿಗೆ ಕಾಣಿಸಬೇಕೋ? ಅದರ ವಾರ್ತೆಯನ್ನು ಕಿವಿಗೆ ಕೇಳಿಸಬೇಕೋ?" ಧೃತರಾಷ್ಟ್ರನಿಗೆ ಗೊತ್ತಿತ್ತು ; ತನ್ನವರದು ಈ ಬಾರಿ ಬರೀ ಸೋಲಲ್ಲ; ಸಾವು ಎಂದು. ಅದನ್ನು ನೋಡಲು ಧೈರ್ಯಸಾಲದ ಅವನು ಕೇಳುವುದನ್ನೇ ಇಷ್ಟಪಟ್ಟನು. ನೋಡುವ ಕಣ್ಣು, ತಿಳಿಯುವ ಬುದ್ಧಿ ಮತ್ತು ಹೇಳುವ ಕೌಶಲ ಎಲ್ಲವನ್ನೂ ಶ್ರೀವ್ಯಾಸರು ಸಂಜಯನಿಗೆ ಅನುಗ್ರಹಿಸಿದರು. ಸಂಜಯನು ವ್ಯಾಸರ ಶಿಷ್ಯ, ಧೃತರಾಷ್ಟ್ರನ ಆಪ್ತ. ಅವರಿಗೆ ಬೇರೆ ಶಿಷ್ಯರು ಇದ್ದರೂ, ಧೃತರಾಷ್ಟ್ರನಿಗೆ ಬೇರೆ ಆಪ್ತರು ಇರಲಿಲ್ಲ. ಅದಕ್ಕೆಂದೇ ಅವನಿಗೆ ಅವರು ದಿವ್ಯದೃಷ್ಟಿಯನ್ನಿತ್ತರು. ಹೇಳುವವನಲ್ಲಿ ಕೇಳುವವನಿಗೆ ವಿಶ್ವಾಸವಿದ್ದರೆ ತಾನೇ ಹೇಳುವುದು. ಕೃಷ್ಣನಾಗಿ ಯುದ್ಧದ ನೇತೃತ್ವ ವಹಿಸಿದ ಭಗವಂತ, ವ್ಯಾಸರೂಪದಿಂದ

ಸಂಜಯನಿಗೆ ಯುದ್ಧವನ್ನು ಕಾಣುವ ದಿವ್ಯನೇತ್ರವನ್ನು ನೀಡಿದನು. ಧೃತರಾಷ್ಟ್ರನು ನೋಡಲು ಬಯಸಿದ್ದರೆ, ಅವನಿಗೆ ದೃಷ್ಟಿ ನೀಡಿದ್ದರೆ ಮಾತ್ರ ಸಾಕಿತ್ತು. ಆದರೆ ಅವನು ಕೇಳಲು ಬಯಸಿದ್ದರಿಂದ ಸಂಜಯನಿಗೆ ದಿವ್ಯದೃಷ್ಟಿ ಕೊಟ್ಟು ಹೇಳುವ ಸಾಮರ್ಥ್ಯವನ್ನೂ ಕೊಡುವ ಮೂಲಕ ಇನ್ನೂ ಹೆಚ್ಚಾಗಿ ತಮ್ಮ ಮಹಿಮೆಯನ್ನು ತೋರಿದರು.

ಪಾಂಡವರು ದೇವತೆಗಳು. ದೇವತೆಗಳು 'ಅಗ್ನಿಮುಖ'ರು. ಧೃಷ್ಟದ್ಯುಮ್ನ ಅಗ್ನಿಯ ಅವತಾರ; ಆದ್ದರಿಂದಲೇ ಪಾಂಡವರ ಸೇನಾಧಿಪತ್ಯ ಅವನದು. ಆ ಮುಂಚೆಯೇ ಇದನ್ನು ಶ್ರೀಕೃಷ್ಣನೇ ನಿರ್ಣಯಿಸಿದ್ದ. ಕೌರವರು ಅಸುರರು; ಅವರು ಧನಕನಕಾದಿಗಳನ್ನು ಮುಂದಿಟ್ಟುಕೊಂಡು ಬದುಕುವವರೇ ಹೊರತು, ಜ್ಞಾನಾದಿಗಳನ್ನಲ್ಲ ; ಅದಕ್ಕೆಂದೇ ವಸುವಿನ (ಧನಾಭಿಮಾನಿಯ) ಅವತಾರ ಭೀಷ್ಮರು ಅವರ ಸೇನಾಧಿಪತಿ; ಇಲ್ಲಿ ಮಾತ್ರವಲ್ಲ, ಎಲ್ಲೆಲ್ಲೂ ಮಹಾಭಾರತದಲ್ಲಿ ಹೀಗೆ ಅಧ್ಯಾತ್ಮ[೧] ತುಂಬಿದೆ; ಅದಕ್ಕೇ ಅದು ವೇದ; ಪಂಚಮವೇದ; ಅಪೌರುಷೇಯ ವೇದಗಳಿಗಿಂತಲೂ ಮಿಗಿಲಾದ ಪೌರುಷೇಯವೇದ.

*****

---

೧. ಏವಮಧ್ಯಾತ್ಮನಿಷ್ಠಂ ಹಿ ಭಾರತಂ ಸರ್ವಮುಚ್ಯತೇ ॥–

ಮಹಾಭಾರತತಾತ್ಪರ್ಯನಿರ್ಣಯ(೨/೧೪೬)

# ಅಧ್ಯಾಯ - ೧

ಒಂದು ಹಂತದಲ್ಲಿ ಧೃತರಾಷ್ಟ್ರನು ಸಂಜಯನನ್ನು ಕೇಳಿದ :

**ಧರ್ಮಕ್ಷೇತ್ರೇ ಕುರುಕ್ಷೇತ್ರೇ ಸಮವೇತಾ ಯುಯುತ್ಸವಃ।**
**ಮಾಮಕಾಃ ಪಾಂಡವಾಶ್ಚೈವ ಕಿಮಕುರ್ವತ ಸಂಜಯ ॥** (ಗೀತಾ ೧/೧)

''ಸಂಜಯ! ಧರ್ಮಕ್ಷೇತ್ರವಾದ ಕುರುಕ್ಷೇತ್ರದಲ್ಲಿ ಸಮರದ ಬಯಕೆಯಿಂದ ಒಂದೆಡೆ ಸೇರಿದ ನನ್ನವರು ಮತ್ತು ಪಾಂಡವರು ಏನು ಮಾಡಿದರು?''.

**'ಅರ್ಜುನವಿಷಾದಯೋಗ'** ಮೊದಲ ಅಧ್ಯಾಯದ ಹೆಸರು; ಅರ್ಜುನನು ಗೀತೆಯನ್ನು ಕೇಳಿದ; ಹಾಗೆ ಕೇಳಲು ಕಾರಣವಾದ ಸನ್ನಿವೇಶವನ್ನು ಇದು ವಿವರಿಸುತ್ತದೆ. ಪರೀಕ್ಷಿದ್ರಾಜನು ಭಾಗವತ ಕೇಳಲು ಕಾರಣವಾದ ಸನ್ನಿವೇಶವನ್ನು ಭಾಗವತಪುರಾಣದ ಪ್ರಥಮಸ್ಕಂಧ ತಿಳಿಸುವಂತೆ. 'ಉತ್ತರದ ಸ್ವಾರಸ್ಯ ಅರಿಯಲು ಪ್ರಶ್ನೆಯ ಪೂರ್ವೋತ್ತರ ತಿಳಿದಿರಬೇಕು'. ಅದಕ್ಕೆಂದೇ ಈ ಅಧ್ಯಾಯ.

ಧೃತರಾಷ್ಟ್ರ ಹೆಸರಿಗೆ ಮಾತ್ರವಲ್ಲದೆ, ಪಾಂಡವರ ರಾಷ್ಟ್ರವನ್ನು ಅವರಿಗೆ ಕೊಡದೆ ತನ್ನ ಹಿಡಿತದಲ್ಲಿಟ್ಟುಕೊಂಡು 'ಧೃತರಾಷ್ಟ್ರ'ನೇ ಆಗಿದ್ದ. ಅವನಂತಹ ಜನರೂ ಹಾಗೆಯೇ, ಮತ್ತೊಬ್ಬರ ಸ್ವತ್ತನ್ನು ಹಿಡಿದಿಟ್ಟುಕೊಂಡವರೆಲ್ಲ ಇಂತಹ ಧೃತರಾಷ್ಟ್ರರೇ ಸರಿ! ಅವನ ಕುರುಡು ಪಾಂಡವರನ್ನು ಕಾಣಲು ಅಡ್ಡಿಯಾಗಿದ್ದರೆ, ಅವನ ಮನಸ್ಸಿನ ಕುರುಡು ಅಭಿಮಾನ ಪಾಂಡವರ ರಾಜ್ಯವನ್ನು ಅವರಿಗೆ ಒಪ್ಪಿಸಲು ಅಡ್ಡಿಯಾಗಿತ್ತು. ಅವನಿಗೆ ಕೌರವರು 'ಮಾಮಕರು' - ತನ್ನವರು; ಆದರೆ ಪಾಂಡವರು ಹಾಗಲ್ಲ. ಇಂತಹ ಮಲತಾಯಿ ಧೋರಣೆ ಅವನಿಗೆ ವಂಶವನ್ನೇ ಕಳೆದುಕೊಳ್ಳುವ ದುರಂತಕ್ಕೆ ಕಾರಣವಾಯಿತು. ಅಜ್ಞಾನಿಗಳ ಪಾಡೇ ಅಂತಹುದು. ದೇವರ ಸ್ವತ್ತನ್ನು ತಮ್ಮ ಸ್ವತ್ತೇ ಎಂದು ತಿಳಿಯುವ ಕುರುಡರೂ ಇರುವಾಗ ಇದೇನೂ ಆಶ್ಚರ್ಯವಲ್ಲ; ಎಂದರೆ ಅವನು ಅಜ್ಞಾನಿಗಳ ಸಂಕೇತ; ಅವನ ನೂರು ಮಕ್ಕಳು ಅವನ ನೂರಾರು ದುರಾಸೆಗಳ ಸಂಕೇತ. **'ಕೌರವಾಃ ಪಾಂಡವಾಃ'** ಎಂಬ ಅಲಿಪ್ತ ಧೋರಣೆಯಾಗಲೀ, **'ಮಾಮಕಾಃ ಕೌರವಾಶ್ಚೈವ'** ಎಂಬ ಉದಾತ್ತ ಧೋರಣೆಯಾಗಲೀ ಅವನಿಗೆ ಸಾಧ್ಯವಾಗಲೇ ಇಲ್ಲ. ಅಜ್ಞಾನಿಯ ಜೀವನವೇ ಅಂತಹುದು; ಅವನಿಗೆ ಧರ್ಮವೂ ಕಾಣದು, ಅಧರ್ಮವೂ ಕಾಣದು; ಅಧರ್ಮದ ಬಗ್ಗೆ ಅಭಿಮಾನ ಮಾತ್ರ ಎಂದೂ ಬಿಡದು. ಅಭಿಮಾನದ ಸೆಳೆತವೂ ಹಾಗೆಯೇ; ತಿಳಿದವನಿಗೂ ಅದನ್ನು ತೊರೆಯಲು ಸಾಧ್ಯವಾಗುವುದಿಲ್ಲ.

*****

## ಶ್ರೀಕೃಷ್ಣನನ್ನೇ ಕಾಣದವನು

ಸಂಜಯನು ಹೇಳತೊಡಗಿದ:

"ರಾಜನೇ ಕೇಳು; ಸಮರಕ್ಕೆ ಅಣಿಯಾಗಿ ನಿಂತ ಪಾಂಡವಸೇನೆಯನ್ನು ದುರ್ಯೋಧನ ಕಂಡ; ದ್ರೋಣರ ಬಳಿ ತೆರಳಿ ತನ್ನ ಮನದಳಲನ್ನು ತೋಡಿಕೊಂಡ. 'ಆಚಾರ್ಯ! ನೋಡಿರಿ! ಈ ಪಾಂಡವಸೇನೆ ಅದೆಷ್ಟು ದೊಡ್ಡದಿದೆ. ಇದನ್ನು ಅಣಿಯಾಗಿ ನಿಲ್ಲಿಸಿರುವವನು ದ್ರುಪದಪುತ್ರನೂ ಬುದ್ಧಿಶಾಲಿಯೂ ಆದ ಧೃಷ್ಟದ್ಯುಮ್ನ; ಅವನೂ ನಿಮ್ಮ ಶಿಷ್ಯನೇ. ಈ ಪಾಂಡವ ಸೇನೆಯಲ್ಲಿ ಯುದ್ಧದಲ್ಲಿ ಭೀಮಾರ್ಜುನರಿಗೆ ಸಾಟಿಯಾದ ಶೂರರೂ, ಬಿಲ್ಲೋಜರೂ ತುಂಬಿರುವರು; ಮಹಾರಥರಾದ ಸಾತ್ಯಕಿ, ವಿರಾಟ ಮತ್ತು ದ್ರುಪದರು; ವೀರ್ಯಶಾಲಿಗಳಾದ ಧೃಷ್ಟಕೇತು, ಚೇಕಿತಾನ ಮತ್ತು ಕಾಶಿರಾಜರು; ಪುರುಷಶ್ರೇಷ್ಠರಾದ ಪುರುಜಿತ್, ಕುಂತಿಭೋಜ ಮತ್ತು ಶೈಬ್ಯರು; ವಿಕ್ರಮಶಾಲಿಗಳಾದ ಯುಧಾಮನ್ಯು, ಉತ್ತಮೌಜಸ್, ಅಭಿಮನ್ಯು ಮತ್ತು ಐವರು ದ್ರೌಪದೀಪುತ್ರರು, ಇದರಲ್ಲಿರುವರು; ಇವರೆಲ್ಲರೂ [೧]ಮಹಾರಥರೇ.

ದುರ್ಯೋಧನ ಇಲ್ಲಿ ಒಟ್ಟು ಹದಿನೆಂಟು ವೀರರ ಪಟ್ಟಿಯನ್ನು ಕೊಟ್ಟಿರುವನು. ಆದರೆ ಅವನ ಕಣ್ಣು ಕಾಣಬೇಕಾದವನನ್ನೇ ಕಾಣಲಿಲ್ಲ; ಜಗತ್ತನ್ನೇ ಕಾಣುವ ಕೃಷ್ಣನನ್ನೇ ಕಾಣಲಿಲ್ಲ; ಇವನು ಕೃಷ್ಣನನ್ನು ಕಾಣಲಿಲ್ಲ; ಕೃಷ್ಣ ಇವನಿಗೆ ಕಾಣಲಿಲ್ಲ; ಅರ್ಜುನನ ಮುಂದೆಯೇ ಕುಳಿತಿದ್ದರೂ. ಜಗತ್ತನ್ನೆಲ್ಲ ಕಂಡು ಜಗನ್ನಾಥನನ್ನು ಮರೆಯುವ ಜನರೆಲ್ಲ ದುರ್ಯೋಧನರೇ ಸರಿ. ಕೃಷ್ಣನನ್ನು ಕಾಣದವನು ಜಯವನ್ನೂ ಕಾಣಲಿಲ್ಲ. ಈಗ ಮಾತ್ರವಲ್ಲ ಅವನು ತನ್ನ ವಿಶ್ವರೂಪ ತೋರಿಸಿದಾಗಲೂ; ಇವನ ಅಜ್ಜಿ ಅಂಬಿಕೆಯೂ ಹಾಗೆಯೇ; ಎದುರಿಗಿದ್ದ ವೇದವ್ಯಾಸರನ್ನು ಕಂಡು ಕಣ್ಣು ಮುಚ್ಚಿದ್ದಳು; ಕುರುಡು ಮಗನನ್ನು ಪಡೆದಳು. ಅದು ಇಂತಹ ಕುರುಡು ಮೊಮ್ಮಗನನ್ನು ಪಡೆಯುವುದಕ್ಕೆ ಸೂಚನೆಯಾಗಿತ್ತು; ಅಂದು ಸಭೆಯಲ್ಲಿ ಕಾಣಲಾಗದೆ ಕಣ್ಣುಮುಚ್ಚಿದ್ದನು; ಇಂದು ಸಮರದಲ್ಲಿ ಕಣ್ಣು ತೆರೆದಿದ್ದೂ ಕಾಣದಾದನು. ಧನಕ್ಕಾಗಿ, ಅದೂ ಪರರ ಧನಕ್ಕಾಗಿ ಬದುಕಿದ ಅವನಿಗೆ, ಅವನಂತಹವರಿಗೆ ಎಂದೂ ಭಗವಂತನು ಕಾಣುವುದೇ ಇಲ್ಲ.

*****

---

೧. ಏಕೋ ದಶಸಹಸ್ರಾಣಾಂ ಯೋಧಯೇದ್ಯಸ್ತು ಧನ್ವಿನಾಮ್।
ಶಸ್ತ್ರಶಾಸ್ತ್ರಪ್ರವೀಣಶ್ಚ ಮಹಾರಥ ಇತಿ ಸ್ಮೃತಃ॥ – ಮಹಾಭಾರತ (೫/೧೬೮/೧೪೧)

– ಒಂಟಿಯಾಗಿ ಹತ್ತು ಸಾವಿರ ಬಿಲ್ಲೋಜರನ್ನು ಎದುರಿಸಬಲ್ಲವನೂ; ಶಸ್ತ್ರ ಮತ್ತು ಶಾಸ್ತ್ರಗಳಲ್ಲಿ ಪ್ರವೀಣನೂ ಆದವನು 'ಮಹಾರಥ' ಎನ್ನಿಸುವನು.

## ಕುರುವೀರರ ಪರಿ

ದುರ್ಯೋಧನನು ಮುಂದುವರೆಸಿದ:

"ವಿಪ್ರೋತ್ತಮ ! ನಮ್ಮಲ್ಲಿನ ಮುಖ್ಯರನ್ನು ನಿಮ್ಮ ಅವಗಾಹನೆಗೆಂದು ತಿಳಿಸುವೆ; ಕೇಳಿರಿ! ತಾವು, ಭೀಷ್ಮರು, ಕರ್ಣ, ಕೃಪಾಚಾರ್ಯ, ಅಶ್ವತ್ಥಾಮ, ವಿಕರ್ಣ ಮತ್ತು ಹಾಗೆಯೇ ಭೂರಿಶ್ರವಸ್; ಇವರೆಲ್ಲ ಯುದ್ಧ ಗೆಲ್ಲಬಲ್ಲವರು; ನನಗೋಸ್ಕರ ಪ್ರಾಣತೊರೆಯಬಲ್ಲವರು; ಅನೇಕತೆರನಾದ ಶಸ್ತ್ರಗಳಲ್ಲಿ ಪರಿಣಿತರು; ಯುದ್ಧದಲ್ಲಿ ನಿಪುಣರಾದ ಇಂತಹ ಇನ್ನೂ ಅನೇಕಶೂರರು ಇದರಲ್ಲಿರುವರು".

ಕಣ್ಣೆದುರೇ ಇದ್ದ ಕೃಷ್ಣನನ್ನು ಕಾಣದ ದುರ್ಯೋಧನ ಇಲ್ಲಿ ಭೀಷ್ಮರಿಂದ 'ಅರ್ಧರಥ' ಎನ್ನಿಸಿಕೊಂಡ ಕರ್ಣನನ್ನು ಕಂಡಿದ್ದಾನೆ. ಅವನು ಭೀಷ್ಮರ ಯುದ್ಧ ಮುಗಿದ ಮೇಲೆಯೇ ತನ್ನ ಯುದ್ಧ ಆರಂಭ ಎಂದು ದೂರ ಉಳಿದವನು. ದುರ್ಜನರ ರೀತಿಯೇ ಹೀಗೆ. ಬೇಡವಾದಾಗ ಎದುರಿಗಿದ್ದವನೂ ಕಾಣುವುದಿಲ್ಲ, ಸದಾ ಜೊತೆ ಇರುವ ಭಗವಂತನನ್ನು ಮರೆಯುವ ಜನ ಎಂದೂ ಹಿಂದೆ ಬಾರದ ಧನಕನಕಗಳನ್ನೆಲ್ಲ ಕಾಣುತ್ತಾರೆ. ಕಾಣಬೇಕಾದ್ದನ್ನು ಕಾಣದೆ ಹೋಗುವಂತೆ, ಕಾಣಬಾರದ್ದನ್ನು ಕಾಣುವುದು ಸಹ ಇಂತಹ ದುರ್ಯೋಧನ ಪ್ರವೃತ್ತಿಯ ಮತ್ತೊಂದು ಮುಖ.

ಅವನ ತಪ್ಪು ಇಲ್ಲಿಗೇ ಮುಗಿಯುವುದಿಲ್ಲ, ತನ್ನ ಪಕ್ಷದವರಲ್ಲೆಲ್ಲ ಪ್ರಥಮರಾದ ಅಶ್ವತ್ಥಾಮರನ್ನು ನಾಲ್ಕನೆಯವರನ್ನಾಗಿ ಕಂಡಿದ್ದಾನೆ. ಎಂದೂ ಸೇನಾನಿಗಳಾಗದ ಕೃಪ, ವಿಕರ್ಣ, ಭೂರಿಶ್ರವರನ್ನು ಕಾಣುವ ಇವನು, ಸೇನಾಪತಿಯಾಗಲಿದ್ದ 'ಶಲ್ಯ'ನನ್ನೇ ಮರೆತಿದ್ದಾನೆ. ಹಾಗೆಯೇ ಯುವರಾಜನಾದ ದುಃಶಾಸನ, ಜೂಜುಕೋರನಾದ ಶಕುನಿ, ಮಹಾವೀರನಾದ ಭಗದತ್ತ, ಮೈದುನನಾದ ಜಯದ್ರಥ ಇವರನ್ನೂ. ದೇವರನ್ನು ಕಾಣದ ಜನರದೆಲ್ಲ ಇಂತಹ ತಪ್ಪು ಲೆಕ್ಕಾಚಾರವೇ ಆಗಿರುತ್ತದೆ.

*****

## ಪರ್ಯಾಪ್ತ - ಅಪರ್ಯಾಪ್ತ

ಉಭಯ ಸೇನೆಗಳ ಬಲಾಬಲಗಳನ್ನು ತುಲನೆ ಮಾಡಿದ ಅವನು, ತನ್ನ ಮನದಳಲನ್ನು ಅವರಲ್ಲಿ ತೋಡಿಕೊಂಡ: "ಭೀಷ್ಮರಕ್ಷಿತವಾದ ನಮ್ಮ ಸೇನೆ ಪಾಂಡವರನ್ನು ಜಯಿಸಲು ಅಸಮರ್ಥ; ಆದರೆ ಭೀಮರಕ್ಷಿತವಾದ ಪಾಂಡವಸೇನೆ ನಮ್ಮನ್ನು ಜಯಿಸಲು [೧]ಸುಸಮರ್ಥ".

---

೧. (ಅಪರ್ಯಾಪ್ತಂ ತದಸ್ಮಾಕಂ ಬಲಂ ಭೀಷ್ಮಾಭಿರಕ್ಷಿತಮ್ ।
ಪರ್ಯಾಪ್ತಂ ತ್ವಿದಮೇತೇಷಾಂ ಬಲಂ ಭೀಮಾಭಿರಕ್ಷಿತಮ್ ॥) – ಗೀತಾ(೧/೧೦)

ಅವನಿಗೆ ತನ್ನ ಸೇನೆ ಗಾತ್ರದಲ್ಲಿ ದೊಡ್ಡದು ಎಂಬ ತೃಪ್ತಿಗಿಂತ, ಸತ್ತ್ವದಲ್ಲಿ ದುರ್ಬಲ ಎಂಬ ಚಿಂತೆ ಆವರಿಸಿದೆ; ಅದರಂತೆ ಪಾಂಡವರ ಸೇನೆ ಗಾತ್ರದಲ್ಲಿ ಚಿಕ್ಕದು ಎಂಬುದಕ್ಕಿಂತ ಸತ್ತ್ವದಲ್ಲಿ ದೊಡ್ಡದೆಂಬ ಭೀತಿ ಸಹ.

ತನ್ನ ಸೇನೆಯ ನೇತಾರರು ಭೀಷ್ಮರು ಮತ್ತು ಭೀಷ್ಮರಂತಹವರು; ಎಂದರೆ ಎಂದೂ ಪಾಂಡವರನ್ನು ಗೆಲ್ಲದವರು, ಗೆಲ್ಲಲಾಗದವರು; ಬದಲಾಗಿ ಉತ್ತರಗೋಗ್ರಹಣದಲ್ಲಿ ಅರ್ಜುನನೊಬ್ಬನಿಗೇ ಎಲ್ಲರೂ ಒಟ್ಟಾಗಿ ಕಾದಿಯೂ ಇನ್ನಿಲ್ಲದಂತೆ ಸೋತವರು. ಜೊತೆಗೆ ಭೀಷ್ಮರು ಸೇನಾಪತ್ಯ ಒಪ್ಪಿಕೊಳ್ಳುವಾಗಲೇ "ನಾನೆಂದೂ ಪಾಂಡವರನ್ನು ಗೆಲ್ಲಲಾರೆ !" ಎಂದು ಖಚಿತವಾಗಿ ಹೇಳಿದ್ದವರು ಸಹ. ರಾಜ್ಯ ದೊರೆಯಬೇಕಾದರೆ ಇವರನ್ನು ಗೆದ್ದರೆ ಸಾಲದು; ಕೊಲ್ಲಬೇಕು; ಗೆಲ್ಲಲೂ ಆಗದ ಇವರಿಗೆ ಅದು ಎಂದಿಗೂ ಆಗದ ಮಾತು.

ಇನ್ನು ಪಾಂಡವರ ರೀತಿ ಹಾಗಲ್ಲ; ಅವರ ಸೇನೆ ಗಾತ್ರದಲ್ಲಿ ಚಿಕ್ಕದಾದರೂ ಅದರ ನಾಯಕನಾಗಿ ಭೀಮನಿರುವನು. ಅವನು ತನಗಿರಲಿ, ಅಲ್ಲಿಯ ಯಾರಿಗೂ ಅಪರಿಚಿತನಲ್ಲ; ಅವನ ಬಲದ ಹಿರಿಮೆಯನ್ನು ಕಾಣದ ಜನರೇ ಅಲ್ಲಿರಲಿಲ್ಲ. ಎಲ್ಲರಿಗಿಂತಲೂ ಅವನ ಬಲದ ಹಿರಿಮೆ ತನಗೆ ಹೆಚ್ಚಾಗಿ ಗೊತ್ತಿದೆ. ಬಾಲ್ಯದಿಂದಲೂ ತನಗೆ ಅವನದೇ ಸಮಸ್ಯೆ; ಅದೇಕೆ ! ತನ್ನ ಕೆಟ್ಟಯೋಜನೆಗಳಿಗೆಲ್ಲ ಸಮಸ್ಯೆ ಬಂದದ್ದೇ ಅವನಿಂದ. ಅವನು ಹಸ್ತಿನಾಪುರಕ್ಕೆ ಬಂದ ದಿನವೇ ಇವನ ರಾಜ್ಯದ ಕನಸು ಒಡೆದಿತ್ತು. ತುಂಬಿದ ಗಂಗೆಯನ್ನು ಈಜಿ ದಾಟುವ, ತಮ್ಮನ್ನೆಲ್ಲ ಮರದ ಬುಡಕ್ಕೆ ಹೊಡೆದೇ ತಪತಪನೆ ಕೆಳಕ್ಕೆ ಬೀಳಿಸುವ, ಎಲ್ಲ ಆಟಗಳಲ್ಲೂ ಪ್ರತಿಬಾರಿ ತಾನೇ ಗೆದ್ದು ಮಾನಸಿಕವಾಗಿಯೇ ತಮ್ಮನ್ನು ಕೊಲ್ಲುವ ಅವನ ಬಾಲಲೀಲೆಗಳನ್ನು ಕಂಡಾಗ ಆ ಕನಸೆಲ್ಲ ನುಚ್ಚುನೂರಾಗಿತ್ತು . ಅವನ ಅಂತಹ ಸಾಹಸಕ್ಕೆ ಪ್ರತಿಯಾಗಿ ಅವನಿಗೆ ತಾವೆಲ್ಲ ಸೇರಿಯೂ ಅಂತಹ ಒಂದೇ ಒಂದು ಪೆಟ್ಟನ್ನೂ ಕೊಡಲು ಸಾಧ್ಯವಾಗಿರಲಿಲ್ಲ ಎಂಬ ನೋವು ಅವನನ್ನು ಸದಾ ಕಾಡುತ್ತಲೇ ಇತ್ತು.

ಆಗಲೇ ಭೀಮನನ್ನು ಕೊಲ್ಲಲು ದುರ್ಯೋಧನ ಹೂಡಿದ ಸಂಚು ಒಂದೆರಡಲ್ಲ ; ಹಾಗೆ ನೋಡಿದರೆ ಅವನು ಅದಕ್ಕೆ ಮಾಡದ ಉಪಾಯ ಇರಲೇ ಇಲ್ಲ; ಕಾಲಕೂಟ ತಿನ್ನಿಸಿದ್ದು, ಹಾವುಗಳಿಂದ ಕಚ್ಚಿಸಿದ್ದು, ಉಕ್ಕಿನ ಪಾಶಗಳಿಂದ ಬಿಗಿದು ಗಂಗೆಯಲ್ಲಿ ಬೀಳಿಸಿದ್ದು, ಒಂದೇ, ಎರಡೇ ! ಅವುಗಳಿಂದ ಭೀಮನಿಗೆ ಏನೂ ಆಗಲಿಲ್ಲ ; ಮಾತ್ರವಲ್ಲದೆ, ಅವನ ನೈಜಬಲ ಕಂಡು ಇವನ ಭೀತಿ ಇನ್ನೂ ಹೆಚ್ಚಿತ್ತು ಮಾತ್ರ.

ಅನಂತರವೂ ಭೀಮನ ಸಾಹಸಗಳು [೧]ಒಂದೆರಡಲ್ಲ. ಚಿಕ್ಕಂದಿನಲ್ಲೇ ಒಮ್ಮೆ ದಿಗ್ವಿಜಯ

---

೧. ಭೀಮಸೇನನು ಪಾಂಡವಶ್ರೇಷ್ಠ ಮಾತ್ರವಲ್ಲದೆ ಜಗದೇಕವೀರ ಎಂಬ ಮಾತು ಮಹಾಭಾರತದಲ್ಲಿ ಅನೇಕ ಕಡೆ ಬಂದಿದೆ; ಅಂತಹ ಕೆಲವು ನಿದರ್ಶನಗಳು ಹೀಗಿವೆ:

ಭೀಮಶ್ಚ ಬಲಭದ್ರಶ್ಚ ಮದ್ರರಾಜಶ್ಚ ವೀರ್ಯವಾನ್ ।

ಮಾಡಿದ್ದ; ರಾಜಸೂಯಯಾಗಕ್ಕೆ ಸಂಬಂಧಿಸಿದಂತೆ ಪೂರ್ವದಿಕ್ಕನ್ನೆಲ್ಲ ಒಬ್ಬನೇ ಜಯಿಸಿ ಬಂದಿದ್ದ; ಅರಗಿನ ಮನೆಯಲ್ಲಿ ಅವರನ್ನೆಲ್ಲ ಸುಟ್ಟು ಹಾಕುವ ಅವನ ಯೋಜನೆ ವಿಫಲವಾದದ್ದು ಇವನಿಂದಲೇ; ತಾನು ಉಳಿಯುವುದರೊಂದಿಗೆ ತನ್ನ ಸೋದರರನ್ನೆಲ್ಲ ಉದ್ದಕ್ಕೂ ರಕ್ಷಿಸಿದವನೇ ಇವನು; ಹಿಡಿಂಬ, ಬಕರಂತಹ ಅಸುರರ ಮುಂದಾಳುಗಳೆಲ್ಲ ಇವನ ಬಾಹುಬಲಕ್ಕೆ ಬಲಿಯಾಗಿದ್ದರು. ಜರಾಸಂಧನಂತಹ ಅತ್ಯಂತಪ್ರಬಲಶತ್ರುವನ್ನು ಬರೀ ಕೈಯಿಂದ ಸೀಳಿ ಬಿಸುಟಿದ್ದ ಧೀರ ಇವನು. ಅಂತಹ ಅಸುರರಿಗೆ ರುದ್ರದೇವರ ವರವಿದ್ದರೆ, ಜರಾಸಂಧನಿಗಂತೂ ಅದರೊಂದಿಗೆ ಬ್ರಹ್ಮವರವೂ ಇತ್ತು; ಅವೆಲ್ಲ ಇವನ ಮುಂದೆ ವ್ಯರ್ಥವಾದವು. ಹಾಗೆ ನೋಡಿದರೆ ರಾಜಸೂಯಯಾಗ ನಡೆದದ್ದೇ ಇವನಿಂದ. ಜರಾಸಂಧನಂತಹ ಪ್ರಬಲರಾಜರುಗಳನ್ನೆಲ್ಲ ಮಣ್ಣುಮುಕ್ಕಿಸಿದವನು ಇವನೇ ಅಲ್ಲವೇ !

ಇವನ ವನವಾಸವೂ ಕಿರ್ಮೀರ, ಜಟಾಸುರ, ಮಣಿಮಂತ ಮೊದಲಾದ ಅಸುರರ ಪ್ರಾಣನಾಶಕ್ಕೆ ಕಾರಣವಾಯಿತು. ಕೀಚಕ, ಉಪಕೀಚಕರು ಇವನಿಂದ ಅಜ್ಞಾತವಾಸದಲ್ಲಿ ಗುರುತೇ ಸಿಕ್ಕದಂತೆ ಹತರಾದರು. ಅವರು ಇವರು ಏತಕ್ಕೆ ! ಅವನನ್ನು ಕೆಣಕಿದ ಯಾರೂ ಈವರೆಗೆ ಉಳಿದಿಲ್ಲ, ಉಳಿದವರು ಇನ್ನು ಮುಂದೆ ಉಳಿಯುವುದಿಲ್ಲ.

---

ಚತುರ್ಥಃ ಕೀಚಕಸ್ತೇಷಾಂ ಪಂಚಮಂ ನಾನುಶುಶ್ರುಮಃ ॥ (೪-೨೯/೧೪)
- ಇದು ಕೀಚಕನ ವಧೆಯ ವಾರ್ತೆ ಕಿವಿಗೆ ಬಿದ್ದಾಗ ದುರ್ಯೋಧನನಿಂದ ಬಂದ ಉದ್ಗಾರ.

ಯತ್ಕಿಂಚಾತ್ಮನಿ ಕಲ್ಯಾಣಂ ಸಂಭಾವಯಸಿ ಪಾಂಡವ ।
ಸಹಸ್ರಗುಣಮಪ್ಯೇತತ್ ತ್ವಯಿ ಸಂಭಾವಯಾಮ್ಯಹಮ್ ॥ (೭೭/೩)
ಅಸ್ಮಿನ್ ಯುದ್ಧೇ ಭೀಮಸೇನ ತ್ವಯಿ ಭಾರಃ ಸಮಾಹಿತಃ ।
ಧೂರರ್ಜುನೇನ ವೋಢವ್ಯಾ ವೋಢವ್ಯ ಇತರೋ ಜನಃ ॥ (೭೭/೧೮)
- ಇದು ಉದ್ಯೋಗ ಪರ್ವದಲ್ಲಿ ಭೀಮಸೇನನನ್ನು ಕುರಿತ ಶ್ರೀಕೃಷ್ಣನ ಮಾತು.

ನ ಹೀಮೇ ಸರ್ವರಾಜಾನಃ ಪರ್ಯಾಪ್ತಾಃ ಸಹಿತಾಸ್ತ್ವಯಾ ।
ಕ್ರುದ್ಧಸ್ಯ ಭೀಮಸೇನಸ್ಯ ಪ್ರೇಕ್ಷಿತುಂ ಮುಖಮಾಹವೇ ॥ (೫/೧೨೪/೪೭)
- ಇದು ದುರ್ಯೋಧನನಿಗೆ ಶ್ರೀಕೃಷ್ಣನು ನೀಡಿದ ಎಚ್ಚರಿಕೆಯ ಮಾತು.

ತತ್ತ್ವಜ್ಞಾನೇ ವಿಷ್ಣುಭಕ್ತೌ ಸ್ಥೈರ್ಯೇ ಧೈರ್ಯೇ ಪರಾಕ್ರಮೇ ।
ವೇಗೇ ಚ ಲಾಘವೇ ಚೈವ ಪ್ರಲಾಪಸ್ಯ ಚ ವರ್ಜನೇ ॥
ಭೀಮಸೇನಸಮೋ ನಾಸ್ತಿ ಸೇನಯೋರುಭಯೋರಪಿ ।
ಪಾಂಡಿತ್ಯೇ ಚ ಪಟುತ್ವೇ ಚ ಶೂರತ್ವೇಽಪಿ ಬಲೇಽಪಿ ಚ ॥ – ಮಹಾಭಾರತ(........)
ಏಕತಸ್ತ್ವೇವ ತೇ ಸರ್ವೇ ಸಮೇತಾ ಭೀಮ ಏಕತಃ । – ಮಹಾಭಾರತ (ಉ. ೫೧/೧)
ನೃತ್ಯನ್ನಿವ ಗದಾಪಾಣಿರ್ಯುಗಾಂತಂ ದರ್ಶಯಿಷ್ಯತಿ ॥ – ಮಹಾಭಾರತ(ಉ. ೫/೧೪)
ಅಸ್ತ್ರೇ ದ್ರೋಣಾರ್ಜುನಸಮಂ ವಾಯುವೇಗಸಮಂ ಜವೇ ।
ಮಹೇಶ್ವರಸಮಂ ಕ್ರೋಧೇ ಕೋ ಹನ್ಯಾದ್ಭೀಮಮಾಹವೇ ॥ – ಮಹಾಭಾರತ(ಉ. ೫೧/೧೪)
ಅಗದಸ್ಯಾಪ್ಯಧನುಷೋ ವಿರಥಸ್ಯ ವಿವರ್ಮಣಃ ।
ಬಾಹುಭ್ಯಾಂ ಯುಧ್ಯಮಾನಸ್ಯ ಕಸ್ತಿಷ್ಠೇದಗ್ರತಃ ಪುಮಾನ್ ॥ – ಮಹಾಭಾರತ (೫/೫೧/೪೭)
- ಇದು ಸಂಜಯನ ಬಳಿ ಧೃತರಾಷ್ಟ್ರನ ಉದ್ಗಾರ.

ಇಂತಹ ಭೀಮ ಈಗ ಪಾಂಡವಸೈನ್ಯದ ಪ್ರಧಾನವೀರ. ಮುಂದಿನ ದಿನಗಳಲ್ಲಿ ತನ್ನ ತೊಡೆ ಮುರಿಯುವ, ದುಃಶಾಸನನ ಎದೆ ಬಗೆದು ರಕ್ತಹೀರುವ, ಅಷ್ಟೇ ಏಕೆ, ನಮ್ಮನ್ನೆಲ್ಲ ಕೊಲ್ಲುವ ಪ್ರತಿಜ್ಞೆಯನ್ನೂ ಎಂದೋ ಮಾಡಿರುವವನು. ಯಾರಿಗೂ ಒಮ್ಮೆಯೂ ಸೋಲದ ಇಂತಹವನ ರಕ್ಷಣೆ ಇದ್ದ ಮೇಲೆ ಅರ್ಜುನಾದಿ ಇತರರೆಲ್ಲರೂ ಅಜೇಯರೇ ಸರಿ.

ಅಂತೂ ಪಾಂಡವಬಲಕ್ಕೆಲ್ಲ ಭೀಮನೇ ಮೂಲಬಲವಾಗಿದ್ದ. 'ಭೀಮಬಲ'ವೆಂಬಂತೆ ಮತ್ತೊಬ್ಬರ ಬಲ ಇತಿಹಾಸದಲ್ಲಿ ದಾಖಲಾಗಿಲ್ಲ.

ಕೌರವರಂಥವರ ರೀತಿಯೇ ಹೀಗೆ; ಅವರದು ಎಂದೂ 'ಭೀಷ್ಮಬಲ'ವೇ ಹೊರತು ಸ್ವಂತಬಲವಲ್ಲ; ಭೀಷ್ಮರು 'ದ್ಯು' ಎಂಬ ವಸುವಿನ ಅವತಾರ; ಅಂತೆಯೇ ಅವರು ಧನದ ಸಂಕೇತ; ಎಂದರೆ ದುಷ್ಟರಿಗೆ ಧನಬಲವೇ ಬಲ. ಆದರೆ ಪಾಂಡವರಿಗೆ ಹಾಗಲ್ಲ; ಅವರಿಗೆ ಭೀಮಬಲವೇ ಬಲ. ಭೀಮ ವಾಯುವಿನ ಅವತಾರ; ವಾಯು ಜ್ಞಾನದ ಸಂಕೇತ; ಎಂದರೆ ಸಜ್ಜನರಿಗೆ 'ತತ್ತ್ವಜ್ಞಾನ'ವೇ ಮುಖ್ಯಬಲ. ಮುಂದಿನದು ಇತಿಹಾಸ.

ತನ್ನ ಸೇನೆಯನ್ನು 'ಭೀಷ್ಮಾಭಿರಕ್ಷಿತಂ' ಎಂದು ದುರ್ಯೋಧನ, ಪಾಂಡವ ಸೇನೆಯನ್ನು 'ಧೃಷ್ಟದ್ಯುಮ್ನಾಭಿರಕ್ಷಿತಂ' ಎನ್ನದೆ 'ಭೀಮಾಭಿರಕ್ಷಿತಂ' ಎನ್ನುತ್ತಾನೆ; ಅವನಿಗೆ ಗೊತ್ತಿತ್ತು. ಸೇನಾಪತಿ ಧೃಷ್ಟದ್ಯುಮ್ನನಾದರೂ, ಅವನಿಗೂ ಇಡೀ ಸೇನೆಗೂ ನಿಜವಾದ ಬಲ 'ಭೀಮ'ನೇ ಆಗಿರುವವನು. ಧೃಷ್ಟದ್ಯುಮ್ನ ಅಗ್ನಿಯ ಅವತಾರ; ಭೀಮಸೇನ ವಾಯುವಿನ ಅವತಾರ; ವಾಯುವಿಲ್ಲದೆ ಅಗ್ನಿಯೆಂತು ಉರಿದೀತು? ಎಂದರೆ ಧೃಷ್ಟದ್ಯುಮ್ನನಿಗೆ ಭೀಮನೇ ಬಲ.

''ಆದ್ದರಿಂದ ನೀವೀಗ ನಿಮಗೆಂದು ನಿಶ್ಚಿತವಾದ ಸ್ಥಳಗಳಲ್ಲಿ ನಿಂತು, ಭೀಷ್ಮರನ್ನು ರಕ್ಷಿಸಿರಿ''. ಎಂದರೆ ತಮ್ಮನ್ನೆಲ್ಲ ರಕ್ಷಿಸಬೇಕಾದ ಭೀಷ್ಮರೇ ಈಗ ತಮಗೆ ರಕ್ಷಣೀಯರಾಗಿರುವರು ಎಂಬ ಅಳಲು ಅವನನ್ನು ಕಾಡುತ್ತಿದೆ. ಭೀಷ್ಮರ ರಕ್ಷಣೆಯ ಬಗ್ಗೆ ಗಮನವೀಯುವ ದುರ್ಯೋಧನನು ವಿನಾಶ ಒದಗಿದಾಗಲೂ ಹಣಕಾಸುಗಳ ರಕ್ಷಣೆಗೇ ಯತ್ನಿಸುವ ಅವಿವೇಕಿಗಳನ್ನು ಪ್ರತಿನಿಧಿಸುತ್ತಿರುವನು.

ಅಂತು ತನ್ನ ಮನದಳಲನ್ನು ಹೀಗೆ ಗುರುಗಳ ಮುಂದೆ ತೋಡಿಕೊಂಡ ದುರ್ಯೋಧನ ಅವರಿಂದ ಸಲಹೆ ಪಡೆಯುವ ಬದಲು ಅವರಿಗೇ ಸಲಹೆ ನೀಡಿದ ಭೂಪನಾದ! ಎಂದೂ ಗುರುಹಿರಿಯರ ಸಲಹೆಗೆ ಗಮನಕೊಡದ ಅವನು ಅವರಿಗೇ ಸಲಹೆ ನೀಡುವ ಹುಂಬತನಕ್ಕೂ ಕೈ ಹಾಕಿದ. ಹೊಸತಾಗಿ ಕೊಡಬಹುದಾದ ಸಲಹೆ ದ್ರೋಣರ ಬಳಿ ಇರಲೂ ಇಲ್ಲ. ಅವರು ಎಂದೋ ಹೇಳಿದ್ದರು. ''ಭೀಮನಿಂದ ರಕ್ಷಿಸುವುದು ಮಾತ್ರ ಎಂದೂ ತಮ್ಮಿಂದಾಗದು; ಅವರ ರಾಜ್ಯವನ್ನು ಅವರಿಗೆ ಹಿಂದಿರುಗಿಸುವುದೊಂದೇ ಉಪಾಯ!''

ದುರ್ಯೋಧನನ ಇಷ್ಟು ಮಾತನ್ನು ಕೇಳಿದ್ದು ದ್ರೋಣರಾದರೂ, ಅವನ ಖಿನ್ನತೆಯನ್ನು ಗುರುತಿಸಿ ಸ್ಪಂದಿಸಿದವರು ಮಾತ್ರ ಪಿತಾಮಹಭೀಷ್ಮರೇ ಆಗಿದ್ದರು. ಸುಖದುಃಖಗಳ ವಿಷಯ ಸಂಬಂಧಿಗಳಿಗೆ ತಿಳಿಯುವಂತೆ ದೂರದವರಿಗೆ ತಿಳಿಯಲಾರದು. ಸೇನಾಪತಿಯ ಜವಾಬ್ದಾರಿಯೂ ಅದಕ್ಕೆ (ಮತ್ತೊಂದು) ಕಾರಣವಾಗಿತ್ತು.

*****

## ಉಭಯಸೇನೆಗಳ ಘೋಷಯುದ್ಧ

ಮೊಮ್ಮಗನಿಗೆ ಧೈರ್ಯತುಂಬಲೆಂದು ತಾತ ಸಿಂಹನಾದ ಮಾಡಿದ; ಶಂಖವನ್ನು ಮೊಳಗಿಸಿದ. ಅದರ ನಾದದೊಂದಿಗೆ ಶಂಖ, ಭೇರಿ, ಪಣವ, ಆನಕ, ಗೋಮುಖ ಮೊದಲಾದ ವಾದ್ಯಗಳು ಮೊಳಗಿದವು. ಆ ನಾದ ಎಲ್ಲೆಡೆ ತುಂಬಿ ಹೋಯಿತು.

ಇತ್ತ ಇವರ ಘೋಷ ಮುಗಿಯುತ್ತಿದ್ದಂತೆ, ಅತ್ತ ಅವರ ಘೋಷ ಮೊದಲಾಯಿತು. ಬಿಳಿ ಕುದುರೆ[೧] ಹೂಡಲ್ಪಟ್ಟಿದ್ದ ದೊಡ್ಡ ರಥದಲ್ಲಿ ಕುಳಿತಿದ್ದ ಕೃಷ್ಣಾರ್ಜುನರು ತಮ್ಮ ದಿವ್ಯಶಂಖಗಳನ್ನು ಮೊಳಗಿಸಿದರು. ಹೃಷೀಕೇಶನಾದ ಕೃಷ್ಣ[೨] ಪಾಂಚಜನ್ಯವನ್ನು ಊದಿದರೆ, ಧನಂಜಯ[೩] ದೇವದತ್ತವನ್ನು ಊದಿದ; ಹಾಗೆಯೇ[೪] ವೃಕೋದರ ಪೌಂಡ್ರವೆಂಬ ತನ್ನ ದೊಡ್ಡ ಶಂಖವನ್ನು ಮೊಳಗಿಸಿದ[೫]; ಯುಧಿಷ್ಠಿರ 'ಅನಂತವಿಜಯ'ವನ್ನೂ,

೧. ಅವನ ರಥದ ಕುದುರೆಗಳು ಬಿಳಿಯದಾದ್ದರಿಂದಲೇ ಅರ್ಜುನನಿಗೆ 'ಶ್ವೇತವಾಹ(ನ)' ಎಂದು ಹೆಸರು.

೨. ಪಾಂಚಜನ್ಯಂ ಹೃಷೀಕೇಶೋ ದೇವದತ್ತಂ ಧನಂಜಯಃ।
ಪೌಂಡ್ರಂ ದಧ್ಮೌ ಮಹಾಶಂಖಂ ಭೀಮಕರ್ಮಾ ವೃಕೋದರಃ॥ – ಗೀತಾ (೧/೧೫)

೩. ಈ ದೇವದತ್ತವು ಅರ್ಜುನನು ಇಂದ್ರನ ಅಪೇಕ್ಷೆಯಂತೆ ನಿವಾತಕವಚರ ವಧೆಗೆ ಹೊರಟಾಗ ದೇವತೆಗಳೆಲ್ಲ ಸೇರಿ ಅವನಿಗೆ ಅರ್ಪಿಸಿದ ಶಂಖ ; ಅದಕ್ಕೇ ದೇವದತ್ತ ಎಂದು ಅದರ ಹೆಸರು.

೪. ವೃಕವೆಂಬ ಅಗ್ನಿ ಸದಾ ಉದರದಲ್ಲಿ ಪ್ರಜ್ವಲಿಸುತ್ತಿದ್ದ ಕಾರಣದಿಂದ ಭೀಮನಿಗೆ 'ವೃಕೋದರ' ಎಂದು ಹೆಸರು.

೫. ಶ್ರೀಕೃಷ್ಣ, ಭೀಮ ಮತ್ತು ಅರ್ಜುನರ ಶಂಖಘೋಷಗಳ ವೈಖರಿ ಮತ್ತು ಅದರ ಪರಿಣಾಮಗಳನ್ನು ಮಹಾಭಾರತ ಹೀಗೆ ವರ್ಣಿಸಿದೆ:

ಸ ಪಾಂಚಜನ್ಯೋಽಚ್ಯುತವಕ್ತ್ರವಾಯುನಾ ಭೃಶಂ ಸುಪೂರ್ಣೋದರನಿಃಸೃತಧ್ವನಿಃ।
ಜಗದ್ವಿರಿಂಚೇಶಸುರೇಂದ್ರಪೂರ್ವಕಂ ಪ್ರಕಂಪಯಾಮಾಸ ಯುಗಾತ್ಯಯೇ ಯಥಾ॥
– ದ್ರೋಣಪರ್ವ(೭೩/೫೨)

ಭೀಮಸ್ಯ ನಾನದತ ಏವ ಮಹಾಸ್ವನೇನ ವಿಣ್ಮೂತ್ರಶೋಣಿತಮಥೋ ಮೃತಿಮಾಪುರೇಕೇ"
–ಮ. ಭಾ. ತಾ. ನಿ. (೨೬/೧೩೮)

ತತಃ ಶಂಖಮುಪಾಧ್ಮಾಸೀತ್ ದಾರಯನ್ನಿವ ಪರ್ವತಾನ್।
ಗುಹಾ ಗಿರೀಣಾಂ ಚ ತದಾ ದಿಶಃ ಶೈಲಾಂಸ್ತಥೈವ ಚ॥ – ವಿರಾಟಪರ್ವ( ೪೫/೪೧)

ನಕುಲಸಹದೇವರು ಕ್ರಮವಾಗಿ 'ಸುಘೋಷ', 'ಮಣಿಪುಷ್ಪಕ'ಗಳನ್ನು ಊದಿದರು; ಹಾಗೆಯೇ ಬಿಲ್ಲೋಜನಾದ ಕಾಶಿರಾಜ, ಮಹಾರಥನಾದ ಶಿಖಂಡಿ, ಅಪರಾಜಿತನಾದ ಧೃಷ್ಟದ್ಯುಮ್ನ ವಿರಾಟ ಸಾತ್ಯಕಿಯರು, ದ್ರುಪದ, ದ್ರೌಪದೀಪುತ್ರರು ಮತ್ತು ಮಹಾಬಾಹುವಾದ ಅಭಿಮನ್ಯು ಪ್ರತ್ಯೇಕ ಪ್ರತ್ಯೇಕವಾಗಿ ತಮ್ಮ ಶಂಖಗಳನ್ನು ಮೊಳಗಿಸಿದರು.

ಭೂಮ್ಯಾಕಾಶಗಳಲ್ಲಿ ಪ್ರತಿಧ್ವನಿಸಿದ ಆ 'ಘೋಷ'ವು ಧೃತರಾಷ್ಟ್ರಪುತ್ರರ ಹೃದಯವನ್ನು [೧]ಸೀಳಿಹಾಕಿತು;ಎಂದರೆ ಅವರೆಲ್ಲ ಭಾವಿಸಿದರು–'ಕುರುಕುಲವು ಈಗಲೇ ಅಳಿದೇ ಹೋಯಿತು'.

ಪಾಂಡವರ ಕಡೆಯಿಂದ ಹೊಮ್ಮಿದ ಈ ನಾದವನ್ನು ಮೊದಲು ಹೊರಡಿಸಿದವನು ಶ್ರೀಕೃಷ್ಣ 'ತಾನು ಪಾಂಡವರ ಸಾರಥಿಯಲ್ಲ; ಪಾಂಡವರ ಸೂತ್ರಧಾರ; ತಾನು ಯುದ್ಧ ಮಾಡದಿದ್ದರೂ ಯುದ್ಧ ಗೆಲ್ಲಿಸುವವನು' ಎಂಬುದನ್ನು ಶ್ರೀಕೃಷ್ಣ ತನ್ನ ಶಂಖಘೋಷದಿಂದ ಸೂಚಿಸಿದ; ಪಾಂಡವಸೈನ್ಯದಲ್ಲಿ ತನ್ನನ್ನೇ ಕಾಣದೆ ಹೋಗಿದ್ದ ದುರ್ಯೋಧನನಿಗೆ ತನ್ನ ಇರವನ್ನು ಜ್ಞಾಪಿಸಿದ.

ಶ್ರೀಕೃಷ್ಣನನ್ನು ತಾನು ಆಯ್ದುಕೊಂಡದ್ದು ಸಾರಥಿಯನ್ನಾಗಿ ಅಲ್ಲ, ಸ್ವಾಮಿಯನ್ನಾಗಿ ಎಂದು ಸೂಚಿಸಲೆಂಬಂತೆ ಅರ್ಜುನ ಶ್ರೀಕೃಷ್ಣನ ನಾದಕ್ಕೆ ತನ್ನ ಶಂಖಘೋಷವನ್ನು ಸೇರಿಸಿದ; ಸ್ವಾಮಿಯಾದ ನಾರಾಯಣ, ಶಿಷ್ಯನಾದ ನರ – ಇವರಿಬ್ಬರ ಕಾರ್ಯ ಎಂದೂ ತನ್ನದು ಎಂಬಂತೆ ಭೀಮಸೇನ ತನ್ನ ಶಂಖನಾದವನ್ನು ಹೊರಡಿಸಿದ. ಈ ಮೂವರಿಂದಲೇ ತಮ್ಮ ಜೀವನ ಎಂಬುದನ್ನು ಶಂಖ ಊದುತ್ತಾ ಇತರರು ತಿಳಿಸಿಕೊಟ್ಟರು; ಶಂಖನಾದ ಮಾಡಿದ್ದು ಭಕ್ತ ಭೀಷ್ಮರಾದರೂ, ಅದರ ಉದ್ದೇಶ ದುರ್ಯೋಧನನ ಸಂತೃಪ್ತಿ ಪಡಿಸುವುದಾದ್ದರಿಂದ, ಅದಕ್ಕೆ ತನ್ನ ಪ್ರತಿಭಟನೆಯುಂಟು ಎಂದೂ ಶ್ರೀಕೃಷ್ಣನು ಆ ಮೂಲಕ ತಿಳಿಸಿದ.

---

೧. ಸ ಘೋಷೋ ಧಾರ್ತರಾಷ್ಟ್ರಾಣಾಂ ಹೃದಯಾನಿ ವ್ಯದಾರಯತ್ । –ಗೀತಾ(೧/೧೯)
ಗರ್ಭಾ ದೇವಾರಿನಾರೀಣಾಂ ವಿಶೀರ್ಯಂತೇ ಸಹಸ್ರಧಾ ।
ತವ ನಾದೇನ ಪಾತಾಲೇ ಪಾಂಚಜನ್ಯ ನಮೋಽಸ್ತುತೇ ॥
(ಪಾಂಚಜನ್ಯದ ಘೋಷಕ್ಕೆ ಪಾತಾಳದಲ್ಲಿನ ಅಸುರ ಸ್ತ್ರೀಯರ ಗರ್ಭಗಳು ಸಾವಿರಾರು ಹೋಳುಗಳಾಗಿ ಸಿಡಿದು ಹೋಗುತ್ತವೆ; ಅಂತಹ ಪಾಂಚಜನ್ಯಕ್ಕೆ ವಂದನೆ. )
ಆಗಮಾರ್ಥಂ ತು ದೇವಾನಾಂ ಗಮನಾರ್ಥಂ ತು ರಕ್ಷಸಾಂ ।
ಕುರು ಘಂಟಾರವಂ ತತ್ರ ದೇವತಾಹ್ವಾನಲಾಛನಂ ॥
(ಘಂಟಾನಾದ ದೇವತೆಗಳ ಆಗಮನ ಹಾಗು ದೈತ್ಯರ ನಿರ್ಗಮನಕ್ಕೆ ಸಂಕೇತ; ಕೌರವರು ದೈತ್ಯರಾದ್ದರಿಂದ ಅವರಿಗೆ ಮಂಗಲಘೋಷ ದುಃಖಕ್ಕೆ ಕಾರಣವಾಯಿತು ಎಂದು ಭಾವ.)

ಭೀಷ್ಮರು ಮಾಡಬಯಸಿದ್ದು ಒಂದಾದರೆ, ಆಗಿದ್ದು ಬೇರೊಂದೇ ಆಯಿತು. ದುರ್ಯೋಧನನಿಗೆ ಧೈರ್ಯತುಂಬಲು ಅವರು ಶಂಖವನ್ನು ಊದಿದರೆ, ಅದಕ್ಕೆ ಉತ್ತರವಾಗಿ ಬಂದ ಪಾಂಡವಘೋಷ ಅವನ ಇದ್ದ ಧೈರ್ಯವನ್ನೂ ಉಡುಗಿಸಿಬಿಟ್ಟಿತು; ಅವರ ಧೈರ್ಯವನ್ನೂ ಸಹ. ಅದಕ್ಕೇ ಶಾಸ್ತ್ರ ಹೇಳುತ್ತದೆ. 'ದುಷ್ಟರಿಗೆ ಮಾಡಿದ ಒಳಿತು ಸಹ ಕೆಟ್ಟದ್ದೇ ಆಗುತ್ತದೆ; ಮಾಡ ಹೊರಟವರಿಗೂ'. ಭೀಷ್ಮರು ಕೃಷ್ಣನ ಕೈಯಲ್ಲಿ ಚಕ್ರ ಹಿಡಿಸುವುದಾಗಿ ಶಪಥ ತೊಟ್ಟಿದ್ದಕ್ಕೆ ಭಗವಂತ 'ಶಂಖ' ಹಿಡಿದು ಅದನ್ನು ನಡೆಸುವ ಸೂಚನೆ ಕೊಟ್ಟಂತೆಯೂ ಆಯಿತು.

ಇನ್ನೇನು ಸಮರವು ಆರಂಭವಾಗಬೇಕು[೧] ಎನ್ನುವ ಸಮಯ; ಆಗ ಯುದ್ಧಕ್ಕೆ ಅಣಿಯಾದ ಕೌರವರನ್ನು ಕಂಡು ಅರ್ಜುನನು ಧನುಸ್ಸನ್ನು ಕೈಗೆತ್ತಿಕೊಳ್ಳುತ್ತ ಶ್ರೀಕೃಷ್ಣನನ್ನು ಕೇಳಿಕೊಂಡನು; ಅವನಿಗೆ ಗೊತ್ತಿತ್ತು. "ಅವನು ಬರೀ ರಥ ಓಡಿಸುವ ಸಾರಥಿಯಲ್ಲ; ಸಕಲರ ಇಂದ್ರಿಯಗಳನ್ನು ಪ್ರೇರಿಸುವ ಭಗವನ್ಮೂರ್ತಿ".

*****

## 'ಸೇನೆಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ'

"ಅಚ್ಯುತ ! ನಾನೀಗ ಯುದ್ಧಕ್ಕೆಂದು ಇಲ್ಲಿ ನೆರೆದ ಜನಗಳನ್ನೆಲ್ಲ ನೋಡಬೇಕಾಗಿದೆ; ಯಾರೊಂದಿಗೆ ನಾನು ಕಾದಬೇಕು ಎಂದು ತಿಳಿಯಬೇಕಿದೆ; ಈ ಸಮರದಲ್ಲಿ ದುಷ್ಟ ಬುದ್ಧಿಯ ದುರ್ಯೋಧನನ ಪ್ರೀತಿಗೆಂದು ಕಾದ ಬಂದ ಜನರನ್ನು ಕಾಣಬೇಕಿದೆ. ಅದಕ್ಕೆಲ್ಲ ಅನುವಾಗುವಂತೆ ನನ್ನ ರಥವನ್ನು ಎರಡೂ ಸೇನೆಗಳ ಮಧ್ಯದಲ್ಲಿ ನಿಲ್ಲಿಸು !"[೨]

ಅರ್ಜುನನು ಅಲ್ಲಿ ನೆರೆದವರ ಬಗ್ಗೆ ಕೇಳಿ ಬಲ್ಲವನಾದರೂ, ಅವನಿಗೀಗ ಅವರನ್ನೆಲ್ಲ ಕಣ್ಣಾರೆ ಕಾಣುವ ತವಕ ತುಂಬಿದೆ, ಅದರಂತೆ ದುರ್ಯೋಧನನಂತಹ ಪರಮದುಷ್ಟನ ಸಹಾಯಕ್ಕೆಂದು ಸೇರಿದ ಜನಗಳನ್ನು ತಿಳಿಯುವ ಕುತೂಹಲವೂ; ಕೇಳುವುದೆಂದೂ ನೋಡುವುದಕ್ಕೆ ಸಮನಾಗದು ಎಂಬುದೇ ಅದರ ಹಿನ್ನೆಲೆ.

*****

---

೧. ಕೆಲವರು ಕೇಳುವುದುಂಟು. ಅಂಥ ಘೋರ ಸಮರ ನಡೆಯುತ್ತಿದ್ದಾಗ ಅಂತಹ ಉಪದೇಶ ನಡೆದುದೆಂತು? ಅವರು ಗೀತೆಯ ಈ ಮಾತನ್ನು ತಿಳಿದುಕೊಳ್ಳಬೇಕು; ಆಗಿನ್ನೂ ಯುದ್ಧ ಆರಂಭವಾಗಿರಲಿಲ್ಲ ; ಇನ್ನೇನು ಆರಂಭವಾಗಲಿತ್ತು ಮಾತ್ರ; ಗೀತೋಪದೇಶ ಮುಗಿದ ತಕ್ಷಣವೂ ಯುದ್ಧ ಪ್ರಾರಂಭವಾಗಲಿಲ್ಲ ; ಅನಂತರ ಯುಧಿಷ್ಠಿರನು ಭೀಷ್ಮಾದಿಗಳ ಅನುಮತಿ ಪಡೆದುಕೊಳ್ಳುವ ಪ್ರಸಂಗ ನಡೆಯಿತು; ಅನಂತರವೇ ಯುದ್ಧ ಪ್ರಾರಂಭವಾದದ್ದು.

೨. ಹೃಷೀಕೇಶಂ ತದಾ ವಾಕ್ಯಮಿದಮಾಹ ಮಹೀಪತೇ । — ಗೀತಾ(೧/೨೧)
ಸೇನಯೋರುಭಯೋರ್ಮಧ್ಯೇ ಸ್ಥಾಪಯಿತ್ವಾ ರಥೋತ್ತಮಂ।. . .
ಉವಾಚ ಪಾರ್ಥ ಪಶ್ಯೈತಾನ್ ಸಮವೇತಾನ್ ಕುರೂನಿತಿ ॥ — ಗೀತಾ (೧/೨೪-೨೫)

## ಶತ್ರುಗಳಲ್ಲ ; ಬಂಧುಗಳು !

ಜಗತ್ತಿನ ಎಲ್ಲವನ್ನೂ ಪ್ರೇರಿಸುವ ಕೃಷ್ಣ ರಥವನ್ನು ಓಡಿಸಿದ. ಭೀಷ್ಮದ್ರೋಣರಂತಹ ಪ್ರಮುಖರ ಎದುರೇ ಸೇನೆಗಳ ಮಧ್ಯದಲ್ಲಿ ಅದನ್ನು ನಿಲ್ಲಿಸಿದ. ಹೀಗೆ ಅರ್ಜುನನ ಕೋರಿಕೆಯನ್ನು ನೆರವೇರಿಸಿಯೇ ಅರ್ಜುನನಿಗೆ ಹೇಳಿದ : ''ಅರ್ಜುನ! ಇಲ್ಲಿ ನೆರೆದಿರುವ ಕೌರವರನ್ನು ನೋಡು !''. ದೊಡ್ಡವರ ರೀತಿಯೇ ಹಾಗೆ. ಮೊದಲು ಕೆಲಸ; ಅನಂತರ ಮಾತು. ಇತರರು ಹಾಗಲ್ಲ, ಮೊದಲಿಗೂ ಮಾತು, ಅನಂತರವೂ ಮಾತೇ; ಕಾರ್ಯ ಮಾತ್ರ ಎಂದೂ ಇಲ್ಲವೇ ಇಲ್ಲ!

ಅರ್ಜುನನು ಅಲ್ಲಿ ಕಂಡದ್ದೇನು? ಪಿತೃಗಳು, ಪಿತಾಮಹರು, ಆಚಾರ್ಯರು, ಸೋದರಮಾವಂದಿರು, ಸೋದರರು, ಪುತ್ರರು, ಪೌತ್ರರು, ಗೆಳೆಯರು, ಹೆಣ್ಣು ಕೊಟ್ಟ ಮಾವಂದಿರು ಮೊದಲಾದವರು. ಎಲ್ಲರೂ ತನ್ನವರೇ! ಎಲ್ಲರೂ ಬಂಧುಗಳೇ!

ಭೀಷ್ಮರ ತಂದೆ ಶಂತನು; ಶಂತನುವಿನ ಸೋದರ ಬಾಹ್ಲೀಕ; ಅವನ ಮಗ ಸೋಮದತ್ತ; ಅವನ ಮೂವರು ಪುತ್ರರು ಭೂರಿ, ಭೂರಿಶ್ರವಸ್ ಮತ್ತು ಶಲರು. ಭೀಷ್ಮರು ಪಾಂಡವರ ಪಿತಾಮಹ; ಎಂದರೆ ಭೂರಿ, ಭೂರಿಶ್ರವ ಮತ್ತು ಶಲರು ಇವರಿಗೆ ಪಿತೃಸಮಾನರು. ಭೀಷ್ಮರಂತೆ ಸೋಮದತ್ತ ಪಿತಾಮಹ; ದ್ರೋಣರಂತೂ ಅವರಿಗೆ ಅಸ್ತ್ರವಿದ್ಯೆ ಕಲಿಸಿದ ಆಚಾರ್ಯರು. ಕೃಪರು ದ್ರೋಣರಿಗಿಂತ ಮುಂಚೆ ಆ ಕೆಲಸ ಮಾಡಿದವರು. ಅಶ್ವತ್ಥಾಮರು ಗುರುಪುತ್ರರಾಗಿ ಆಚಾರ್ಯರೆನ್ನಿಸಿದವರು. ಶಲ್ಯನಂತೂ ಮಾದ್ರಿಯ ತಂದೆಯಾಗಿ ಸೋದರಮಾವ. ಶಕುನಿಯೂ ಗಾಂಧಾರಿಯ ಸೋದರ; ಅಂದರೆ ಅವನೂ ಸೋದರಮಾವನೇ. ತುಂಬಾ ನೀಚರಾದರೂ, ಕೌರವರೆಲ್ಲ ಸೋದರರು. ಅಭಿಮನ್ಯು, ಘಟೋತ್ಕಚ, ದ್ರೌಪದೇಯರು, ಶರ್ವತ್ರಾತ, ಇರಾವಾನ್, ಸುಹೋತ್ರ ಇವರೆಲ್ಲ ಮಕ್ಕಳು; ಹಾಗೆಯೇ ಕೌರವರ ಮಕ್ಕಳಾದ ಲಕ್ಷಣಾದಿಗಳು ಸಹ. ಅಂಜನವರ್ಮ ಘಟೋತ್ಕಚನ ಮಗ; ಇವರಿಗೆಲ್ಲ ಮೊಮ್ಮಗ. ದ್ರುಪದ, ಕಾಶೀರಾಜ ವೀರಸೇನ, ಶಲ್ಯ ಇವರೆಲ್ಲ ಹೆಣ್ಣು ಕೊಟ್ಟ ಮಾವಂದಿರೂ ಆಗಿದ್ದರು. ಅದರೊಂದಿಗೆ ಅಲ್ಲಿದ್ದ ಬಾಹ್ಲೀಕರಾಜ ಇವರೆಲ್ಲರಿಗೂ ಪ್ರಪಿತಾಮಹ. ಧೃಷ್ಟಕೇತು, ಸಹದೇವ - ಮೊದಲಾದವರೆಲ್ಲ ಶ್ಯಾಲರು (ಪತ್ನಿಯರ ಸಹೋದರರು) ಜಯದ್ರಥ ಮೈದುನ. ಇವರೂ ಅವನು ಕಂಡವರಲ್ಲಿ ಸೇರಿದ್ದರು. ಕೃತವರ್ಮ, ಚೇಕಿತಾನ, ಭಗದತ್ತ ಮೊದಲಾದ ಮಿತ್ರವರ್ಗದವರಂತೂ ಅಲ್ಲಿ ಸಾಕಷ್ಟು ಜನ ಸೇರಿದ್ದರು.

ಅರ್ಜುನನು ಇವರನ್ನೆಲ್ಲ ಕಂಡ; ಆದರೆ ಶ್ರೀಕೃಷ್ಣನು ತಿಳಿಸಿದ್ದ ಶತ್ರುಗಳಾದ ಕೌರವರನ್ನು ಮಾತ್ರ ಕಾಣಲೇ ಇಲ್ಲ. ದುರ್ಯೋಧನನು ಪಾಂಡವಸೈನ್ಯದಲ್ಲಿ ಶ್ರೀಕೃಷ್ಣನನ್ನು ಮಾತ್ರ ಕಾಣಲಿಲ್ಲ ; ಅರ್ಜುನನು ಆ ರಣರಂಗದಲ್ಲಿ ಶತ್ರುಗಳನ್ನೇ ಕಾಣಲಿಲ್ಲ ; ಅವನು

ಹತಾಶನಾಗಿ ವಿಷಣ್ಣನಾದರೆ, ಇವನು ಕೃಪೆಯಿಂದ ವಿಷಣ್ಣನಾದ. ಹೀಗೆ ಕಾಣಬಾರದವರನ್ನು ಕಂಡು, ಕಾಣಬೇಕಾದವರನ್ನು ಕಾಣದ್ದರಿಂದಲೇ ಆಗಬಾರದ್ದು ಆಯಿತು. ಶತ್ರುಗಳನ್ನು ಕಂಡು ಸಿಡಿದೇಳುವ ಬದಲು ಬಂಧುಗಳನ್ನು ಕಂಡು ಕರಗಿಹೋದ. ಉಕ್ಕಿದ್ದು ಕರುಣೆಯಾದ್ದರಿಂದಲೇ ಒದಗಿದ್ದು ವಿಷಾದವಾಯಿತು.

ಮಹಾಭಾರತ ಯುದ್ಧ ಅನೇಕ ಬಗೆಯಲ್ಲಿ ವಿಚಿತ್ರ; ಅದರಲ್ಲಿ ಪಾಲ್ಗೊಂಡ ಜನರೂ ಹಾಗೆಯೇ; ಅಲ್ಲಿಯ ಉಭಯಪಕ್ಷದವರಲ್ಲಿ ಬಂಧುಜನರು ತುಂಬಿಹೋಗಿದ್ದಾರೆ. ಕೆಲವು ಬಂಧುಗಳು ಒಂದೇ ಪಕ್ಷದಲ್ಲಿದ್ದರು; ಕೆಲವರು ಎರಡರಲ್ಲೂ ಹಂಚಿಹೋಗಿದ್ದರು; ಭೀಷ್ಮರಿಗೂ ಪಿತೃಸದೃಶನಾಗಿ ಬಾಹ್ಲೀಕರಾಜ ಉಭಯಸೈನ್ಯಗಳಲ್ಲಿದ್ದ ಅತ್ಯಂತಹಿರಿಯ; ಎಂಟುನೂರು ವಯಸ್ಸಿನ ಭೀಷ್ಮ ಅನಂತರ ತಲೆಮಾರಿನವರು; ದ್ರುಪದ, ವಿರಾಟ, ಸೋಮದತ್ತ, ದ್ರೋಣ ಮತ್ತು ಕೃಪ ಇವರೆಲ್ಲ ಭೀಷ್ಮರ ಸಮವಯಸ್ಕರು. ಭೂರಿ, ಭೂರಿಶ್ರವಸ್ಸು, ಶಲ, ಶಲ್ಯ, ಕಾಶೀರಾಜ ಮೊದಲಾದವರು ಮೂರನೆಯ ತಲೆಮಾರಿನವರು. ಪಾಂಡವ ಕೌರವರು ನಾಲ್ಕನೆಯ ತಲೆಮಾರಿನವರು ಮತ್ತು ಹೆಚ್ಚಿನವರು ಇದಕ್ಕೆ ಸೇರಿದವರು. ಪಾಂಡವರ ಕೌರವರ ಪುತ್ರರು ಎಂದರೆ ಘಟೋತ್ಕಚ, ಅಭಿಮನ್ಯು, ಲಕ್ಷಣ ಮೊದಲಾದವರು ಐದನೆಯ ತಲೆಮಾರಿನವರು ಹಾಗು ಘಟೋತ್ಕಚನ ಮಗ ಅಂಜನವರ್ಮ ಮತ್ತು ಅವನ ಓರಗೆಯವರು ಆರನೆಯ ಹಾಗೂ ಕೊನೆಯ ತಲೆಮಾರಿನವರು; ದ್ರೌಪದೀಪುತ್ರರು, ಅಭಿಮನ್ಯು ಇವರೆಲ್ಲ ಮೂವತ್ತರ ಆಸುಪಾಸಿನ ತರುಣರು. ಎಂದರೆ ಅರ್ಜುನ ಉಭಯಸೇನೆಗಳಲ್ಲಿ ಹೀಗೆ ಬಂಧು–ಜನಗಳನ್ನು ಕಂಡದ್ದರಲ್ಲಿ ಆಶ್ಚರ್ಯವಿಲ್ಲ. ಇಷ್ಟು ಅಪಾರಸಂಖ್ಯೆಯಲ್ಲಿ ಬಾಂಧವರೇ ಪಾಲ್ಗೊಂಡ ಯುದ್ಧ ಮತ್ತೊಂದು ನಡೆದಿಲ್ಲ. ಅದಕ್ಕೆಂದೇ ಅರ್ಜುನನಿಗೆ ಇಂತಹ ಕಾತರ.

ಅದರಲ್ಲೂ ಪಾಂಡವರ ಕಡೆ ಇರಬೇಕಾದ ಶಲ್ಯ ಕೌರವರ ಕಡೆ ಇದ್ದಾನೆ; ಹಾಗೆಯೇ ಕರ್ಣ, ತಮ್ಮ ಅಣ್ಣನೆಂದು ಅವರಿಗೆ ತಿಳಿಯದಿದ್ದರೂ, ಅವರು ತನ್ನ ತಮ್ಮಂದಿರೆಂಬುದು ಅವನಿಗೆ ತಿಳಿದಿತ್ತು. ಧೃತರಾಷ್ಟ್ರನ ಮತ್ತೊಬ್ಬ ಮಗ ಯುಯುತ್ಸು ಪಾಂಡವರ ಕಡೆ ಸೇರುವನು. ಇವರೊಂದಿಗೆ ಉಭಯಪಕ್ಷದಲ್ಲೂ ರಾಕ್ಷಸರೂ ಪಾಲ್ಗೊಂಡಿದ್ದರು. ಸ್ವತಃ ಕೌರವರೇ ಮಹಾದೈತ್ಯರಾಗಿದ್ದರು; ಘಟೋತ್ಕಚ ಮತ್ತು ಅವನ ಪರಿವಾರ ಪಾಂಡವರ ಕಡೆಯ ರಾಕ್ಷಸವರ್ಗದವರಾದರೆ, ಅಲಂಬುಸ, ಅಲಾಯುಧ, ಅಲಂಬಲ ಮೊದಲಾದ ರಾಕ್ಷಸರ ದೊಡ್ಡ ಹಿಂಡೇ ಕೌರವರ ಪಕ್ಷದಲ್ಲಿದ್ದಿತು.

ಒಬ್ಬ ಅಯೋಗ್ಯನೂ ಪಾಂಡವರ ಪಕ್ಷದಲ್ಲಿರಲಿಲ್ಲ; ಆದರೆ ಕೌರವರ ಪಕ್ಷದಲ್ಲಿ ಕ್ರಮವಾಗಿ ಸೇನಾನಿಗಳಾದ ಭೀಷ್ಮ, ದ್ರೋಣ, ಕರ್ಣ, ಶಲ್ಯ, ಅಶ್ವತ್ಥಾಮರು, ಕೃಪ, ಬಾಹ್ಲೀಕ, ಸೋಮದತ್ತ, ಭೂರಿ, ಭೂರಿಶ್ರವಸ್, ಶಲ, ಕೃತವರ್ಮ, ಭಗದತ್ತ ಮೊದಲಾದ ಕೆಲವರನ್ನು ಬಿಟ್ಟರೆ ಉಳಿದವರೆಲ್ಲ ಅಯೋಗ್ಯರೇ.

ಶ್ರೀಕೃಷ್ಣನಿಂದ ದುರ್ಯೋಧನ ಪಡೆದಿದ್ದ ಹತ್ತುಲಕ್ಷ ನಾರಾಯಣೀ ಸೇನೆಯೂ ಇದಕ್ಕೆ ಅಪವಾದ. ಕೌರವರ ಕಡೆ ದ್ರೋಣ, ಕೃಪ, ಅಶ್ವತ್ಥಾಮರೆಂಬ ಮೂವರು ಬ್ರಾಹ್ಮಣರು. ಆದರೆ ಪಾಂಡವರ ಕಡೆ ಒಬ್ಬ ಬ್ರಾಹ್ಮಣನೂ ಇರಲಿಲ್ಲ. ಅಲ್ಲಿದ್ದ ಕೃಷ್ಣ ಪರಬ್ರಹ್ಮ; ಭೀಮ ಭಾವಿಬ್ರಹ್ಮ ಎಂಬ ಮಾತು ಬೇರೆ.

ಕೌರವರ ಸೇನಾಪತ್ಯ ವಹಿಸಿದವರಲ್ಲಿ ಮೊದಲ ಮೂವರು ಭೀಷ್ಮ ದ್ರೋಣ ಮತ್ತು ಕರ್ಣ. ಈ ಮೂವರು ಪರಶುರಾಮರ ಶಿಷ್ಯರು; ಕ್ರಮವಾಗಿ ಅವರಲ್ಲಿ ಓದಿದವರು; ಪಾಂಡವರ ಕಡೆಯ ಸಾತ್ಯಕಿ ಮತ್ತು ಚೇಕಿತಾನ ಮತ್ತು ಕೌರವರ ಕಡೆಯ ಕೃತವರ್ಮ ಈ ಮೂವರು ಯಾದವವೀರರು.

ಇವರಲ್ಲಿ ಭೀಷ್ಮ – ಶಿಖಂಡಿ, ಸಾತ್ಯಕೀ – ಭೂರಿಶ್ರವಸ್, ದ್ರೋಣ– ದ್ರುಪದ, ವಿರಾಟ – ಸುಶರ್ಮ, ಕರ್ಣ – ಅರ್ಜುನ, ಹೀಗೆ ಅನೇಕ ಪ್ರಮುಖರಿಗೆ ಪ್ರತ್ಯೇಕ ವೈರವೂ ಇದ್ದಿತು.

ಕೆಟ್ಟವರ ದರ್ಶನವು ಸಹ ಮನಸ್ಸಿಗೆ ಮಂಕು ಕವಿಸುವುದು; ಕೌರವರಂತಹವರ ಮತ್ತು ಅವರ ಸಂಬಂಧಿಗಳಾದವರ ಮುಖದರ್ಶನ ಅರ್ಜುನನ ಮನಸ್ಸಿಗೆ ಮೋಹ ಕವಿಸಿತು. ಅದಕ್ಕೆಂದೇ ಶಾಸ್ತ್ರ ಎಚ್ಚರಿಸಿದೆ. 'ಅಯೋಗ್ಯರ ದರ್ಶನಾದಿ ಸಕಲವೂ ಕೆಡುಕಿಗೇ ಕಾರಣ!' **'ತಮೋದ್ವಾರಂ ಯೋಷಿತಾಂ ಸಂಗಿಸಂಗಮ್'**.[1]

ಶ್ರೀಕೃಷ್ಣ ಮುಂದೆ ಕೂತಿದ್ದರೂ ಅರ್ಜುನನ ಇದಿರು ನಿಂತವರು ಕೌರವಾದಿಗಳೇ; ಅರ್ಜುನ ಪ್ರಶ್ನೆ ಕೇಳಿದಾಗ ಶ್ರೀಕೃಷ್ಣ ಅವನತ್ತ ಮುಖ ಮಾಡಿದ; ಅವನ ಮುಖಪದ್ಮದಿಂದ ಹೊರಟ ಮಾತು ಅರ್ಜುನನ ಅಜ್ಞಾನವನ್ನು ಪರಿಹರಿಸಿತು; ಮತ್ತೆ ತತ್ತ್ವಜ್ಞಾನದ ಬೆಳಕು ಅವನಲ್ಲಿ ಮೂಡಿತು; **'ಮಹತ್ಸೇವಾಂ ದ್ವಾರಮಾಹುರ್ವಿಮುಕ್ತೇಃ'**.

*****

## ಅರ್ಜುನವಿಷಾದ

ಅರ್ಜುನ ವಿಷಾದ ಪಡುತ್ತಲೇ ನುಡಿಯತೊಡಗಿದ :

''ಕೃಷ್ಣ! ಸಮರೇಚ್ಛುಗಳಾಗಿ ನಿಂತಿರುವ ಈ ಬಂಧುಜನರನ್ನು ಕಂಡು ನನ್ನ ಕೈಕಾಲು ಸೇದುತ್ತಿವೆ; ಮುಖವು ಬಾಡಿಹೋಗುತ್ತಿದೆ; ನನ್ನ ಶರೀರದಲ್ಲಿ ನಡುಕವೂ ರೋಮಹರ್ಷವೂ ಉಂಟಾಗುತ್ತಿದೆ; ಕೈಯಿಂದ ಗಾಂಡೀವ ಜಾರುತ್ತಿದೆ; ಚರ್ಮವು ಬೇಯುತ್ತಿದೆ; ನನಗೆ ನಿಲ್ಲಲೂ ಆಗುತ್ತಿಲ್ಲ; ನನ್ನ ಮನಸ್ಸು ಗೊಂದಲಗೊಳ್ಳುತ್ತಿದೆ. ಕೇಶವ! ದುಃಶಕುನಗಳನ್ನು ಸಹ ನಾನು ಕಾಣುತ್ತಿರುವೆನು''.

---

೧. ಭಾಗವತಪುರಾಣ (೫/೫/೨)

"ನನ್ನ ಜನಗಳನ್ನು ಕೊಲ್ಲುವುದರಿಂದ ಆಗುವ ಒಳಿತಾದರೂ ಯಾವುದು ? ಎಷ್ಟು ಯೋಚಿಸಿದರೂ ನನಗದು [೧]ಕಾಣುತ್ತಿಲ್ಲ ; ಕೃಷ್ಣ ! ನನಗೆ ರಾಜ್ಯ ಬೇಕಿಲ್ಲ, ವಿಜಯ ಬೇಕಿಲ್ಲ, ಸುಖವೂ ಬೇಕಿಲ್ಲ, ಗೋವಿಂದ ! ರಾಜ್ಯದಿಂದಾಗಲೀ, ಭೋಗದಿಂದಾಗಲೀ, ಕೊನೆಗೆ ಬದುಕಿನಿಂದಾಗಲೀ ನಮಗೆ ಆಗುವುದೇನು! ಯಾರಿಗೋಸ್ಕರ ನಮಗೆ ರಾಜ್ಯ, ಭೋಗ ಮತ್ತು ಸುಖಗಳು ಬೇಕಿವೆಯೋ ಅಂತಹ ಆಚಾರ್ಯರು, ಪಿತೃಗಳು, ಪುತ್ರರು, ಪಿತಾಮಹರು, ಸೋದರಮಾವಂದಿರು, ಹೆಣ್ಣುಕೊಟ್ಟ ಮಾವಂದಿರು, ಶ್ಯಾಲರು ಮೊದಲಾದವರೆಲ್ಲ ಇಲ್ಲಿ ಪ್ರಾಣಗಳು, ಧನಗಳನ್ನೆಲ್ಲ ತೊರೆದು ಈ ಯುದ್ಧದಲ್ಲಿ [೨]ತೊಡಗಿರುವರು.

ದುರ್ಯೋಧನ ತಿಳಿದಿದ್ದ – 'ಎಲ್ಲರೂ ನನಗಾಗಿ'. ಆದರೆ ಅರ್ಜುನನು ತಿಳಿದಿರುವನು – 'ಎಲ್ಲರಿಗಾಗಿ ನಾನು'. ದುರ್ಯೋಧನನಿಗೆ ರಾಜ್ಯಸುಖಗಳು ಬೇಕಿದ್ದುದು ತನ್ನ ಸ್ವಂತಸುಖಕ್ಕೆ. ಆದರೆ ಅರ್ಜುನನಿಗೆ ಇವೆಲ್ಲ ಬೇಕಿರುವುದು ಗುರುಹಿರಿಯರಿಗಾಗಿ, ಬಂಧುಬಾಂಧವರಿಗಾಗಿ. ಎಲ್ಲಿಯ ಅರ್ಜುನ! ಎಲ್ಲಿಯ ದುರ್ಯೋಧನ!

ಇವೆಲ್ಲ ಬೇಕೆಂದು ಯುದ್ಧ ಮಾಡಿದ ದುರ್ಯೋಧನನು ಸತ್ತ; ಬೇಡವೆಂದು ನುಡಿದ ಅರ್ಜುನನಿಗೆ ಎಲ್ಲವೂ ದೊರಕಿದವು. ಭೋಗಭಾಗ್ಯಗಳ ರೀತಿಯೇ ಹಾಗೆ! ಅವು ನೆರಳಿದ್ದಂತೆ. ಹಿಂದೆ ಹೊರಟರೆ ಸಿಕ್ಕುವುದಿಲ್ಲ; ಬೇಡವೆಂದು ಬೆನ್ನು ಮಾಡಿದರೆ ಹಿಂಬಾಲಿಸದೆ ಬಿಡುವುದಿಲ್ಲ.

ಇಲ್ಲಿ ಅರ್ಜುನನು ಒಳಿತನ್ನು 'ಶ್ರೇಯಸ್' ಎಂದು ಕರೆದಿರುವನು, ಕಠೋಪನಿಷತ್ತಿನಲ್ಲಿ ನಚಿಕೇತನ ಆಯ್ಕೆಯೂ ಅದೇ. ಇಹಲೋಕದ ಒಳಿತು 'ಪ್ರೇಯಸ್'; ಇಹಪರಗಳೆರಡಲ್ಲೂ ಲಭಿಸುವ ಒಳಿತು 'ಶ್ರೇಯಸ್'.

"ಮಧುಸೂದನ! ಇವರು ಬೇಕಾದರೆ ನನ್ನನ್ನು ಕೊಲ್ಲಲಿ, ನಾನಂತೂ ಇವರನ್ನು ಕೊಲ್ಲಲಾರೆ. ಈ ಭೂಮಿಗಾಗಿ ಇರಲಿ, ಮೂರುಲೋಕದ ರಾಜ್ಯಕ್ಕಾಗಿಯೂ ಇದು ನನ್ನಿಂದಾಗದು". ಅರ್ಜುನನಿಗೆ ಜನ ಮುಖ್ಯ; ಅವರ ಸುಖ ಸಂತೋಷ ಮುಖ್ಯ. ತಾನು ಸತ್ತರೂ ಸರಿ ಅವರು ಸುಖವಾಗಿರಬೇಕು, ಅವರ ಸಂತೋಷಗಳು ಭೂಮಂಡಲ ಚಕ್ರಾಧಿಪತ್ಯಕ್ಕಿಂತ, ಸ್ವರ್ಗಾಧಿಪತ್ಯಕ್ಕಿಂತ ಮಿಗಿಲು. ದೊಡ್ಡವರ ರೀತಿಯೇ ಹೀಗೆ. ಅವರಿಗೆ ಜನ ಬೇಕು, ಜನಾರ್ದನ ಬೇಕು. ದುರ್ಜನರು ಹಾಗಲ್ಲ; ಅವರಿಗೆ ಜನ ಬೇಡ,

---

೧. ನ ಚ ಶ್ರೇಯೋಽನುಪಶ್ಯಾಮಿ ಹತ್ವಾ ಸ್ವಜನಮಾಹವೇ।
ನ ಕಾಂಕ್ಷೇ ವಿಜಯಂ ಕೃಷ್ಣ ನ ಚ ರಾಜ್ಯಂ ಸುಖಾನಿ ಚ॥ – ಗೀತಾ (೧/೩೧)

೨. ಯೇಷಾಮರ್ಥೇ ಕಾಂಕ್ಷಿತಂ ನೋ ರಾಜ್ಯಂ ಭೋಗಾಃ ಸುಖಾನಿ ಚ।
ತ ಇಮೇ ಽವಸ್ಥಿತಾ ಯುದ್ಧೇ ಪ್ರಾಣಾಂಸ್ತ್ಯಕ್ತ್ವಾ ಧನಾನಿ ಚ॥ – ಗೀತಾ(೧/೩೩)

ಜನಾರ್ದನ ಬೇಡ; ಧನ ಬೇಕು , ಧನ ಮಾತ್ರವೇ ಬೇಕು; ಧನಕ್ಕಾಗಿ ಮಾತ್ರವೇ ಇತರರು ಬೇಕು; ಧನ ಸಿಕ್ಕರೆ ಯಾರೂ ಬೇಡ. 'ದುರ್ಯೋಧನ', 'ಸುಯೋಧನ' ಅಂತಹವನು. ಅವನ ಹೆಸರಿನಲ್ಲಿದ್ದುದಕ್ಕಿಂತಲೂ ಹೆಚ್ಚಾಗಿ ಅವನ ಮನಸ್ಸಿನಲ್ಲಿ 'ಧನ 'ದ ಚಿಂತೆ ತುಂಬಿತ್ತು .

''ಇನ್ನು ಧೃತರಾಷ್ಟ್ರ ಪುತ್ರರನ್ನು ಕೊಲ್ಲುವುದು; ಅದಾದರೂ ಯಾರ ಪ್ರೀತಿಗಾಗಿ? [೧]ಆತತಾಯಿಗಳಾದ ಇವರನ್ನು ಕೊಂದರೆ ನಮಗೂ ಪಾಪವೇ ಬಂದೀತಲ್ಲವೇ? ಅಲ್ಲದೆ ನಮ್ಮ ಬಂಧು ಜನರನ್ನು ಕೊಂದು ನಾವು ಹೇಗೆ ತಾನೇ ಸುಖಿಯಾದೇವು ?''

ಪಾಪಿಗಳಾದ ಕೌರವರನ್ನು ಕೊಂದರೆ ತನಗೂ ಪಾಪ ಒದಗೀತೆಂಬ ಭೀತಿ ಅರ್ಜುನ-ನಿಗೆ; ಆದರೆ ಪಾಂಡವರಂತಹ ಪುಣ್ಯಶೀಲರನ್ನು ಕೊಲ್ಲುವ ವಿಚಾರ ದುರ್ಯೋಧನನಿಗೆ. ಸಜ್ಜನರು ಪಾಪಭೀರುಗಳು; ದುರ್ಜನರು ಪುಣ್ಯಭೀರುಗಳು!

''ದುರಾಸೆ ಇವರ ಮನಸ್ಸನ್ನು ಮಲಿನಗೊಳಿಸಿದೆ, ಕುಲನಾಶದಿಂದಾಗುವ ಕೆಡುಕಾಗಲೀ, ಮಿತ್ರದ್ರೋಹದಿಂದಾಗುವ ಪಾತಕವಾಗಲೀ ಇವರಿಗೆ ಕಾಣುತ್ತಿಲ್ಲ, ಅಂದರೆ ನಾವು ಹಾಗಲ್ಲ ; ಕುಲನಾಶದಿಂದಾಗುವ ಕೆಡುಕನ್ನು ಚೆನ್ನಾಗಿ ಬಲ್ಲವರು; ಇಂತಹ ಪಾಪಕಾರ್ಯಕ್ಕೆ ಕೈ ಹಾಕುವುದು ನಮ್ಮಿಂದ ಸಾಧ್ಯವೇ ಇಲ್ಲ''.

ಅರ್ಜುನನಿಗೆ ಗೊತ್ತು ; ದುರ್ಯೋಧನಾದಿಗಳು ಮಾಡುತ್ತಿರುವುದೇನೂ ಸರಿಯಲ್ಲ; ದುರಾಸೆ ಕವಿದ ಅವರಿಂದ ಸರಿಯಾಗಿ ನಡೆದುಕೊಳ್ಳುವುದು ಸಾಧ್ಯವೂ ಅಲ್ಲ; ಆದರೆ ಅವರು ತಪ್ಪು ಮಾಡುತ್ತಿರುವವರು ಎಂಬುದು ನಾವು ತಪ್ಪು ಮಾಡುವುದಕ್ಕೆ ಕಾರಣವಾಗಬಾರದು. ಅವಿವೇಕಿಗಳು ಮಾಡಿದಂತೆ ಮಾಡುವುದು ವಿವೇಕಿಗೆ ಸಾಧ್ಯವೂ ಆಗಲಾರದು. ಉಗ್ರಗಾಮಿಗಳು ಅಧಿಕಾರಿಗಳನ್ನು ಸೆರೆಹಿಡಿಯುವರು; ತಮ್ಮವರನ್ನು ಬಿಡದಿದ್ದರೆ ಅವರನ್ನು ಕೊಲ್ಲುವುದಾಗಿ ಸರಕಾರವನ್ನು ಬೆದರಿಸುವರು. ಆದರೆ ಸೆರೆ ಹಿಡಿದ ಅಧಿಕಾರಿಗಳನ್ನು ಬಿಡದಿದ್ದಲ್ಲಿ ಸೆರೆಯಲ್ಲಿನ ಉಗ್ರಗಾಮಿಗಳನ್ನು ಕೊಲ್ಲಲಾಗು- ವುದೆಂದು ಸರಕಾರ ಹೇಳಲು ಸಾಧ್ಯವೇ !

---

೧. ಅಗ್ನಿದೋ ಗರದಶ್ಚೈವ ಶಸ್ತ್ರಪಾಣಿರ್ಧನಾಪಹಃ।
ಕ್ಷೇತ್ರದಾರಾಪಹಾರೀ ಚ ಷಡೇತೇ ಹ್ಯಾತತಾಯಿನಃ॥ – ಭೀಷ್ಮಪರ್ವ (ಅ. ೧೦೭ ಶ್ಲೋ. ೧೧೦)
ಬೆಂಕಿ ಇಡುವವನು, ವಿಷಹಾಕುವವನು, ಶಸ್ತ್ರ ಎತ್ತುವವನು, ಧನವನ್ನು ಕದಿಯುವವನು, ಸ್ಥಳವನ್ನು ಅಪಹರಿಸುವವನು, ಪತ್ನಿಯ ಮೇಲೆ ಕೈ ಮಾಡುವವನು – ಈ ಆರು ಜನರಿಗೆ ಆತತಾಯಿಗಳೆಂದು ಹೆಸರು. ಅರಗಿನ ಮನೆಯಲ್ಲಿ ಸುಡುವ ಪ್ರಯತ್ನ, ಭೀಮನಿಗೆ ವಿಷ ಹಾಕಿದ್ದು, ಅನೇಕ ಬಾರಿ ಯುದ್ಧಕ್ಕೆ ಯತ್ನಿಸಿದ್ದು, ಸಂಪತ್ತನ್ನು ಜೂಜಿನಲ್ಲಿ ಅಪಹರಿಸಿದ್ದು, ರಾಜ್ಯವನ್ನು ಕಪಟದಿಂದ ಅಪಹರಿಸಿದ್ದು ಮತ್ತು ದ್ರೌಪದಿಯನ್ನು ಕೆಣಕಿದ್ದು – ಇವುಗಳಿಂದಾಗಿ ಕೌರವರು ಈ ಆರೂ ರೀತಿಯಲ್ಲಿ ಆತತಾಯಿಗಳಾಗಿರುವರು.

"ಯುದ್ಧದಿಂದ ಕುಲಗಳು [೧]ಅಳಿಯುತ್ತವೆ; ಅದರೊಂದಿಗೆ ಕುಲಧರ್ಮಗಳು ನಾಶವಾಗುತ್ತವೆ; ಧರ್ಮವನ್ನು ತೊರೆದ ಕುಲವನ್ನು ಅಧರ್ಮಗಳು ಮುತ್ತುತ್ತವೆ. ಅಧರ್ಮದ ತುಳಿತಕ್ಕೆ ಸಿಕ್ಕು ಕುಲಸ್ತ್ರೀಯರು ಪತಿತೆಯರಾಗುತ್ತಾರೆ. ಪತಿತೆಯಾದ ಸ್ತ್ರೀಯರಿಂದ ವರ್ಣಸಂಕರ ಹುಟ್ಟುತ್ತದೆ. ಅದರಿಂದ ಕುಲಕ್ಕೂ, ಕುಲವನ್ನು ಕೆಡಿಸಿದವನಿಗೂ ನರಕ ಪ್ರಾಪ್ತಿಯಾಗುತ್ತದೆ. ಅಲ್ಲದೆ ಅವರೆಲ್ಲರ ಪಿತೃಗಳಿಗೂ ತರ್ಪಣ ಶ್ರಾದ್ಧಗಳು ಲೋಪವಾಗಿ ಅವರೂ ನರಕದಲ್ಲಿ ಬೀಳುತ್ತಾರೆ. ಜೊತೆಗೆ ವರ್ಣಸಂಕರಕ್ಕೆ ಕಾರಣವಾಗುವ ಕುಲನಾಶಕರ ಇಂತಹ ತಪ್ಪಿನಿಂದ ಸನಾತನವಾದ ಜಾತಿಧರ್ಮ, ಕುಲಧರ್ಮಗಳೂ ಅಳಿಯುತ್ತವೆ. ಧರ್ಮ ತೊರೆದ ಇಂತಹ ಜನಕ್ಕೆ ನರಕವಾಸ ತಪ್ಪದೆಂದು ನಾವು ಮತ್ತೆ ಮತ್ತೆ ವೇದಗಳಲ್ಲಿ ಕೇಳಿದ್ದೇವೆ".

"ತಮಗೆ ಮಾತ್ರವಲ್ಲ, ಯುದ್ಧದಿಂದ ಸಮಾಜಕ್ಕೂ ಅಪಾರ ಹಾನಿ ತಪ್ಪಿದ್ದಲ್ಲ. ಯುದ್ಧದಲ್ಲಿ ಸಾಯುವ ಜನರ ನೋವು ಒಂದು ತೆರನಾದರೆ, ಉಳಿಯುವ ಜನರ ನೋವು ಮತ್ತೊಂದು ತೆರ. ಅದರಲ್ಲೂ ಇಹಲೋಕದ ಬವಣೆ ಒಂದು ತೆರನಾದರೆ, ಪರಲೋಕದ ಬವಣೆ ಮತ್ತೊಂದು ತೆರ. ಜನದೊಂದಿಗೆ ಕುಲ, ಕುಲಧರ್ಮಗಳ ಅಳಿವು, ಅದರಿಂದ ಅಧರ್ಮದ ಪ್ರವೇಶ, ಅದಕ್ಕೆ ಕುಲಸ್ತ್ರೀಯರ ಬಲಿ, ಅವರಲ್ಲಿ ವರ್ಣಸಂಕರ, ಅದರಿಂದ ಕುಲ ಮತ್ತು ಕುಲನಾಶಕರಿಗೆ ನರಕ, ಅವರೆಲ್ಲರ ಪಿತೃಗಳಿಗೆ ಶ್ರಾದ್ಧ ತರ್ಪಣಗಳ ಲೋಪ, ಜಾತಿಧರ್ಮ ಕುಲಧರ್ಮಗಳ ವಿನಾಶ, ಇದಕ್ಕೆ ಕಾರಣವಾದವರಿಗೆಲ್ಲ ನರಕ ವಾಸ."

ಯುದ್ಧ ಮಾಡಿದ ಜನರು ಅಪಾರ; ಅರ್ಜುನನಂತೆ ಹೀಗೆ ಯುದ್ಧದ ದುಷ್ಪರಿಣಾಮಗಳನ್ನು ವಿವೇಚಿಸಿದವರು ಮಾತ್ರ ವಿರಳ; ಯುದ್ಧಕ್ಕಿಂತಲೂ ಅದರ ದುಷ್ಪರಿಣಾಮಗಳು ಹೆಚ್ಚು ಘೋರ, ಹಣಕಾಸುಗಳ ನಷ್ಟವನ್ನು ತುಂಬಬಹುದು. ಇಂತಹ ಧರ್ಮನಾಶದ ಅನರ್ಥವನ್ನು ಮಾತ್ರ ಎಂದೂ ತುಂಬಲಾಗದು. ಅದಕ್ಕೆಂದೇ ಯುದ್ಧಮಾಡಬಲ್ಲ ಸಮರ್ಥನೂ ಸಾಧ್ಯವಾದಷ್ಟು ಅದರಿಂದ ದೂರವಿರಲು ಪ್ರಯತ್ನಿಸಬೇಕು.

---

೧. ಕುಲಕ್ಷಯೇ ಪ್ರಣಶ್ಯಂತಿ ಕುಲಧರ್ಮಾಃ ಸನಾತನಾಃ।
ಧರ್ಮೇ ನಷ್ಟೇ ಕುಲಂ ಕೃತ್ಸ್ನಮಧರ್ಮೋಽಭಿಭವತ್ಯುತ॥
ಅಧರ್ಮಾಭಿಭವಾತ್ ಕೃಷ್ಣ ಪ್ರದುಷ್ಯಂತಿ ಕುಲಸ್ತ್ರಿಯಃ।
ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಂಕರಃ॥
ಸಂಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯ ಚ।
ಪತಂತಿ ಪಿತರೋ ಹ್ಯೇಷಾಂ ಲುಪ್ತಪಿಂಡೋದಕಕ್ರಿಯಾಃ॥
ದೋಷೇರೇತೈಃ ಕುಲಘ್ನಾನಾಂ ವರ್ಣಸಂಕರಕಾರಕೈಃ।
ಉತ್ಸಾದ್ಯಂತೇ ಜಾತಿಧರ್ಮಾಃ ಕುಲಧರ್ಮಾಶ್ಚ ಶಾಶ್ವತಾಃ॥
ಉತ್ಸನ್ನಕುಲಧರ್ಮಾಣಾಂ ಮನುಷ್ಯಾಣಾಂ ಜನಾರ್ದನ।
ನರಕೇ ನಿಯತಂ ವಾಸೋ ಭವತೀತ್ಯನುಶುಶ್ರುಮ॥ –ಗೀತಾ(೧/೪೦-೪೪)

ಅರ್ಜುನನ ಇಂತಹ ಧಾರ್ಮಿಕ ಕಳಕಳಿ, ಸಾಮಾಜಿಕ ಕಳಕಳಿಯಲ್ಲೇ ನಿಜವಾದ ಅವನ ಹಿರಿಮೆ ಅಡಗಿದೆ. ಅವನು ಯುದ್ಧವನ್ನು ಬಲ್ಲ, ಅದರ ದುಷ್ಪರಿಣಾಮಗಳನ್ನೂ ಬಲ್ಲ, ಆದರೆ ದುರ್ಯೋಧನನಿಗೆ ಒಳ್ಳೆಯ ಯುದ್ಧವೂ ತಿಳಿಯದು; ಅದರ ದುಷ್ಪರಿಣಾಮವೂ ತಿಳಿಯದು.

ಯುದ್ಧ ಅನಿವಾರ್ಯ. ಎಂದರೆ ತಮ್ಮ ಅಥವಾ ಶತ್ರುಗಳ ವಿನಾಶ ಖಚಿತ, ತಾವು ಉಳಿದು ಅವರು ಸಾಯುವುದು; ಅವರು ಉಳಿದು ನಾವು ಸಾಯುವುದು, ಇದರಲ್ಲಿ ಅರ್ಜುನ ಎರಡನೆಯದನ್ನೇ ಹಿತ ಎಂದು ಭಾವಿಸಿದ್ದಾನೆ, ತಾವು ಸಾಯುವುದು ಎಂದರೆ ಶತ್ರುಗಳನ್ನು ಕೊಲ್ಲದಿರುವುದು, ಕೊಲ್ಲುವ ಪಾಪ ತಮಗೆ ತಟ್ಟದು, ಯುದ್ಧದಲ್ಲಿ ಸಾಯುವುದರಿಂದ ಸದ್ಗತಿಯೂ ದೊರೆಯುವುದು.

ಅಸಮರ್ಥನು ಸೋಲನ್ನೂ, ಸಾವನ್ನೂ ಆಹ್ವಾನಿಸಬಲ್ಲ; ಆದರೆ ಅರ್ಜುನ ಇಲ್ಲಿ ಸುಸಮರ್ಥನಾಗಿಯೂ ಈ ಮಾತನಾಡಿದ್ದಾನೆ; ಅದಕ್ಕೆ ಕಾರಣ ಬಂಧು ಬಾಂಧವರ ಮೇಲಿನ ಅಪಾರ ಕರುಣೆ, ಸಾಮಾಜಿಕ ಕಳಕಳಿ; ಧಾರ್ಮಿಕ ಪ್ರಜ್ಞೆ;

ಅಸಮರ್ಥನಾಗಿಯೂ ಯುದ್ಧವನ್ನು ಆಯ್ದುಕೊಳ್ಳುವ ದುರ್ಯೋಧನ; ಸುಸಮರ್ಥನಾಗಿಯೂ ಯುದ್ಧವನ್ನು ತೊರೆಯುವ ಯೋಚನೆಯ ಅರ್ಜುನ; ಅವನು ಹಾಗೆ ಮಾಡಲು ದುರಾಸೆ ಕಾರಣ, ಇವನು ಹೀಗೆ ಮಾಡಲು ಕರುಣೆ ಕಾರಣ. ತನಗಾಗಿ ಏನನ್ನೂ ಮಾಡಲು ಹಿಂಜರಿಯದ ದುರ್ಯೋಧನ; ಪರರಿಗಾಗಿ ಪ್ರಾಣತೊರೆಯಲೂ ಸಿದ್ಧನಾಗಿರುವ ಅರ್ಜುನ, ಅವನದು ಆಸುರೀ ಸಂಪತ್ತು; ಇವನದು ದೈವೀಸಂಪತ್ತು .

ಶಸ್ತ್ರತೊರೆಯುವ ಮಾತನ್ನು ಆಡಿದ ಅರ್ಜುನ, ಹಾಗೆ ಮಾಡಿಯೂ ಬಿಟ್ಟ; ಬಿಲ್ಲುಬಾಣಗಳನ್ನು ತೊರೆದು ಆ ಯುದ್ಧರಂಗದಲ್ಲಿ ರಥದ ಮಧ್ಯದಲ್ಲಿ ಕುಳಿತೇ ಬಿಟ್ಟನು. ಅವನ ಮನಸ್ಸು ಶೋಕದಿಂದ ಖಿನ್ನವಾಗಿತ್ತು.

ಅರ್ಜುನನ ಯುದ್ಧತ್ಯಾಗದ ಮಾತು ಬಾಯಿಂದ ಬರದೆ ಹೃದಯದಿಂದ ಬಂದಿತ್ತು. ಆ ಹೃದಯಕ್ಕೆ ಮೋಹ ಕವಿದಿತು; ಅದಕ್ಕೆ ಬಾಯಿಂದ ಆಡಿದ್ದನ್ನು ಕೃತಿಯಲ್ಲಿ ನಡೆಸಿಯೇಬಿಟ್ಟನು. ಯಾರು ಹೇಳಿದರೂ ಯುದ್ಧ ತೊರೆಯದ ದುರ್ಯೋಧನ; ಯಾರು ಹೇಳದೆಯೂ ಯುದ್ಧ ತೊರೆಯುವ ಅರ್ಜುನ; ಅದು ಅವನ ಸ್ವಭಾವ; ಇದು ಇವನಿಗೆ ಕವಿದ ಮೋಹ, ಅದು ಸ್ವಭಾವವಾದ್ದರಿಂದ ಹಾಗೆಯೇ ಉಳಿಯಿತು, ಇದು ಆಕಸ್ಮಿಕವಾದ್ದರಿಂದ ಭಗವಂತ ತನ್ನ ಉಪದೇಶದಿಂದ ಕಳೆದ; ಅರ್ಜುನನನ್ನು ಮತ್ತೆ ಯುದ್ಧಕ್ಕೆ[೧] ಅಣಿಗೊಳಿಸಿದ.

---

೧. ಅರ್ಜುನನು ರಥದಲ್ಲೇ ಕುಳಿತು ಬಿಲ್ಲುಬಾಣಗಳನ್ನು ಹಾಕಿದ; ತಾನೂ ಅದರ ಮಧ್ಯದಲ್ಲೇ ಕುಳಿತ; ಗೀತೋಪದೇಶದ ಹೆಚ್ಚಿನ ಚಿತ್ರಗಳಲ್ಲಿ ಅರ್ಜುನ ರಥದಿಂದ ಕೆಳಗೆ ಕುಳಿತಿರುತ್ತಾನೆ. ಶ್ರೀಕೃಷ್ಣನು ಉಪದೇಶಿಸುತ್ತ ಅವನ ಮುಂದೆ ನಿಂತಿರುತ್ತಾನೆ; ಅಂಥ ಚಿತ್ರಕಾರರಿಗೆ ಚಿತ್ರ ಬರೆಯುವುದು ಗೊತ್ತು ;

# ಅರ್ಜುನ ವಿಷಾದ ಯೋಗ

ಸಾವುನೋವುಗಳು, ಗುರುಹಿರಿಯರ ವಿರಹ ಮೊದಲಾದವುಗಳಿಗೆ ಕಾರಣವಾಗುವ ಯುದ್ಧದಿಂದ ಇಹಲೋಕದ ಪ್ರಯೋಜನವಂತೂ ಇಲ್ಲ; ಬಂಧುಹನನದಿಂದ ಒದಗಬಹುದಾದ ಪಾಪದಿಂದಾಗಿ ಪರಲೋಕದ ಸುಖವೂ ಇಲ್ಲ; ಮಾತ್ರವಲ್ಲದೆ ಯುದ್ಧದಲ್ಲಿ ಪುರುಷರು ಮಡಿದು, ಧರ್ಮವು ಅಳಿದು, ಅಧರ್ಮವು ಹೆಚ್ಚಿ, ಕುಲೀನಸ್ತ್ರೀಯರು ಚಾರಿತ್ರ್ಯಭ್ರಷ್ಟರಾಗಿ ವರ್ಣಸಂಕರವು ಕಾಲಿಡುತ್ತದೆ; ಅದರಿಂದ ಅವರಿಗೂ, ಅವರ ಪಿತೃಗಳಿಗೂ ಮತ್ತು ಅದಕ್ಕೆಲ್ಲ ಒಂದು ರೀತಿಯಲ್ಲಿ ಕಾರಣವಾಗುವ ತಮಗೂ ನರಕವಾಸವು ತಪ್ಪಿದ್ದಲ್ಲ; ಹೀಗೆ ಇಹಪರಗಳೆರಡರಲ್ಲೂ ಅನರ್ಥಕ್ಕೆ ಕಾರಣವಾಗುವ ಇಂತಹ ಯುದ್ಧ ತ್ಯಾಜ್ಯ ಎಂಬುದು ಅರ್ಜುನನ ಮಾತುಗಳ ತಾತ್ಪರ್ಯ.

ತಾನು ಯುದ್ಧವನ್ನು ತೊರೆದಲ್ಲಿ ಜನರು ಸಾಯುವುದಿಲ್ಲ; ಅಧರ್ಮವು ಅಳಿಯುವುದಿಲ್ಲ; ಅಧರ್ಮವು ಕಾಲಿಡುವುದಿಲ್ಲ; ಕುಲೀನ ಸ್ತ್ರೀಯರು ಕೆಡುವುದಿಲ್ಲ; ವರ್ಣಸಂಕರವು ಹುಟ್ಟುವುದಿಲ್ಲ; ಪಿತೃಗಳು ನರಕಕ್ಕೆ ಬೀಳುವುದಿಲ್ಲ; ತನಗೂ ನರಕವು ಒದಗುವುದಿಲ್ಲ; ಆದ್ದರಿಂದ ಯುದ್ಧವು ಬೇಡ ಎಂಬುದು ಇದರ ಸಾರ.

ಮೇಲ್ನೋಟಕ್ಕೆ ಸರಿ ಎಂದು ಕಾಣುವ ಇಂತಹ ಮಾತುಗಳಿಗೆಲ್ಲ ಸಮರ್ಪಕವಾದ ಉತ್ತರವನ್ನು ನೀಡಿ ಅವನನ್ನು ಪುನಃ ಅವನ ಸ್ವಧರ್ಮವಾದ ಯುದ್ಧದಲ್ಲಿ ತೊಡಗಿಸುವುದೇ ಗೀತೆಯ ತಿರುಳು.

ಅರ್ಜುನನ ಈ ಮಾತುಗಳು ಒಟ್ಟಾಗಿ ಅಗ್ರಾಹ್ಯವಾಗಿದ್ದರೂ, ಸ್ವಜನರ ಉಳಿವಿಗಾಗಿ ತಾನು ರಾಜ್ಯಭೋಗಗಳನ್ನು ತೊರೆಯಬಲ್ಲೆ ಎಂಬಲ್ಲಿನ ಭಾವ; ಲೋಕನಾಶ, ಧರ್ಮನಾಶಗಳ ಬಗ್ಗೆ ತೋರುವ [೧]ಆತಂಕ, ತಾನು ಮಾಡುವ ಕಾರ್ಯ

---

ಆದರೆ ಭಗವದ್ಗೀತೆ ಗೊತ್ತಿಲ್ಲ, ಇದನ್ನು ತಿಳಿಯದ ಜನ ಪ್ರಶ್ನಿಸುವುದುಂಟು; ರಣರಂಗದಲ್ಲಿ ಅರ್ಜುನ ಹೇಗೆ ಕುಳಿತಿದ್ದ ಕೃಷ್ಣ ಹೇಗೆ ನಿಂತು ಉಪದೇಶಿಸಿದ?. ಇವರೂ ಅಷ್ಟೇ ! ಓದಿರುವುದು ಗೀತೆಯನ್ನಲ್ಲ; ನೋಡಿರುವುದು ಗೀತೋಪದೇಶದ ಅಂತಹ ಚಿತ್ರವನ್ನು ಮಾತ್ರ! ಅದಕ್ಕೆಂದೇ ಅಂತಹ ಅವಿವೇಕದ ಪ್ರಶ್ನೆ.

೧. ಲೋಕನಾಶವಾದೀತೆಂಬ ಅರ್ಜುನನ ಮಾತು ಮೇಲ್ನೋಟಕ್ಕೆ ನಿಜವೇ ಆಗಿಬಿಡುತ್ತದೆ ಎಂಬುದೂ ಗಮನಾರ್ಹ; ಕೌರವರ ಹನ್ನೊಂದು ಅಕ್ಷೋಹಿಣಿ ಸೇನೆಯಲ್ಲಿ ಅಶ್ವತ್ಥಾಮ ಕೃಪ ಮತ್ತು ಕೃತವರ್ಮ ಈ ಮೂವರನ್ನು ಹೊರತು ಇತರ ಎಲ್ಲರೂ ಯುದ್ಧದಲ್ಲಿ ಹತರಾಗುತ್ತಾರೆ. ಪಾಂಡವರ ಏಳು ಅಕ್ಷೋಹಿಣಿಸೇನೆಯಲ್ಲಿ ಶ್ರೀಕೃಷ್ಣ ಪಂಚಪಾಂಡವರು ಮತ್ತು ಸಾತ್ಯಕಿ ಈ ಏಳು ಜನರ ಹೊರತು ಇತರರೆಲ್ಲ ಹತರಾಗುತ್ತಾರೆ; ಬಹುಜನರು ಯುದ್ಧದಲ್ಲಿ; ಉಳಿದವರು ಹದಿನೆಂಟನೆಯ ದಿನದ ರಾತ್ರಿ ಅಶ್ವತ್ಥಾಮರು ನಡೆಸಿದ ಆ ಮಾರಣ ಹೋಮದಲ್ಲಿ. ಕೌರವರ ಸೇನೆಯಲ್ಲಿನ ಯುಯುತ್ಸು ಮಾತ್ರ ಪಾಂಡವರ ಕಡೆಗೆ ಸೇರಿ ಯುದ್ಧದಲ್ಲಿ ಉಳಿದರೆ, ಅನಂತರ ಶ್ರೀಕೃಷ್ಣನ ಅಪ್ಪಣೆಯಂತೆ ಹಸ್ತಿನಾಪುರಕ್ಕೆ ತೆರಳಿದ ಕಾರಣ ಅಶ್ವತ್ಥಾಮರ ಕೈಯಿಂದಲೂ ಉಳಿಯುತ್ತಾನೆ.

ಶ್ರೇಯಸ್ಕರವಾಗಿರಬೇಕು ಎಂಬಲ್ಲಿನ ಉದಾತ್ತ ಜೀವನದೃಷ್ಟಿ ಇತರರು ಅನ್ಯಾಯ ಮಾಡಿದರೂ ತಾವು ಮಾತ್ರ ಧರ್ಮದ ಹಾದಿಯನ್ನು ತೊರೆಯಬಾರದು ಎಂಬಲ್ಲಿನ ಧರ್ಮವಿವೇಕ, ಯುದ್ಧದಿಂದಾಗುವ ಅನರ್ಥಗಳನ್ನು ವಿವೇಚಿಸುವಲ್ಲಿ ತೋರುವ ವಿಚಾರ ಕೌಶಲ ಮತ್ತು ದೂರದೃಷ್ಟಿ ಸ್ವರ್ಗನರಕಗಳನ್ನು ಒಪ್ಪುವ ಆಸ್ತಿಕ್ಯ ಬುದ್ಧಿ, ಸ್ತ್ರೀಯರು ಕೆಟ್ಟು ವರ್ಣ ಸಂಕರವಾದೀತು ಎಂಬಲ್ಲಿ ತೋರುವ ಸಾಮಾಜಿಕ ಪ್ರಜ್ಞೆ, ಶ್ರಾದ್ಧತರ್ಪಣಾದಿ ಪಿತೃಕಾರ್ಯಗಳಲ್ಲಿ ತೋರುವ ಆದರ ಸ್ವಭಾವ; ಲೋಕದ ಒಳಿತಿಗಾಗಿ ತನ್ನ ಬಲಿದಾನಕ್ಕೂ ಸಿದ್ಧನಾಗುವ ಉದಾರತೆ; ಮತ್ತು ತನ್ನ ಮನಸ್ಸಿನ ಅಳಲನ್ನು ಶ್ರೀಕೃಷ್ಣನಂತಹ ಪರಮಪುರುಷನ ಬಳಿ ತೋಡಿಕೊಳ್ಳುವ ಸಮರ್ಪಣಭಾವ ಇವುಗಳಲ್ಲಿ ಅರ್ಜುನನ ಯೋಗ್ಯತೆಯ ಎತ್ತರ ಗೋಚರಿಸುತ್ತದೆ.

ಇಂತಹ ಸದ್ಗುಣಗಳು ಅವನಿಗೆ ಭಗವದ್ಗೀತೆಯನ್ನು ಕೇಳುವ ಅರ್ಹತೆಗೆ ಕಾರಣವಾಗುತ್ತವೆ. ಭಗವದ್ಗೀತೆಯನ್ನು ಓದಲು ಮತ್ತು ತಿಳಿಯಲು ಸಹ ಸಾಧ್ಯವಾಗುವುದು ಇಂತಹ ಗುಣಗಳನ್ನು ಅಳವಡಿಸಿಕೊಂಡವರಿಗೆ ಮಾತ್ರ.

ಗೀತೆಯ ಮೊದಲ ಅಧ್ಯಾಯದಲ್ಲಿ ದುರ್ಯೋಧನವಿಷಾದ ಮತ್ತು ಅರ್ಜುನವಿಷಾದ ಎರಡೂ ನಿರೂಪಿತವಾಗಿವೆ; ಶ್ರೀಕೃಷ್ಣನನ್ನೇ ಕಾಣದ ಕುರುಡುತನ; ತನಗೋಸ್ಕರ ಇತರ ಎಲ್ಲರೂ ಎಂಬ ಸ್ವಾರ್ಥಭಾವ, ಸೇನೆಗಳ ಬಲಾಬಲಗಳ ತುಲನೆಯ ಅನಂತರವೂ, ಯುದ್ಧಮಾಡುವ ಛಲವನ್ನು ಕೈ ಬಿಡದ ಹುಂಬತನ; 'ಪಶ್ಯ'(ನೋಡು), 'ನಿಬೋಧ'(ತಿಳಿ) ಮೊದಲಾಗಿ ಆಚಾರ್ಯ ದ್ರೋಣರೊಂದಿಗೆ ವ್ಯವಹರಿಸುವ ಉದ್ಧಟತನ, ದ್ರೋಣರ ಸಲಹೆಯನ್ನು ನಿರೀಕ್ಷಿಸದೆ ತನಗೆ ತೋಚಿದ್ದನ್ನೇ ನುಡಿಯುವ ಆತ್ಮಪ್ರತ್ಯಯ; ಇಂತಹ ಪ್ರಬಲ ದೋಷಗಳು ದುರ್ಯೋಧನನ ವಿಷಾದವನ್ನು ವಿಷಾದವನ್ನಾಗಿಯೇ ಉಳಿಸುತ್ತವೆ; ಮತ್ತು ಅವನ ಬದುಕಿಗೇ ಸಂಚಕಾರ ತಂದ ರೋಗವಾಗುತ್ತವೆ.

ಪ್ರತಿ ಹಂತದಲ್ಲೂ ಶ್ರೀಕೃಷ್ಣನ ಮಾರ್ಗದರ್ಶನ ಅಪೇಕ್ಷಿಸುವ ಸಾತ್ತ್ವಿಕಪ್ರವೃತ್ತಿ, ಬಂಧುಬಾಂಧವರನ್ನು ಅಂತಹ ಸನ್ನಿವೇಶದಲ್ಲೂ ಗುರುತಿಸಿ ಗೌರವಿಸುವ ಆದರ ಭಾವ, ಇತರರಿಗೋಸ್ಕರ ತಾನು ಎಂಬ ನಿಸ್ವಾರ್ಥಭಾವ; ಕೃಷ್ಣನ ಮುಂದೆ ತನ್ನ ಭಾವನೆಗಳನ್ನು ತೋಡಿಕೊಳ್ಳುವ ಸಮರ್ಪಣಭಾವ; ಮೊದಲಾದ ಸದ್ಗುಣಗಳು ಅರ್ಜುನನ ವಿಷಾದವನ್ನು ಗೀತೆಯನ್ನು ಕೇಳುವ ಯೋಗ(ವಿಷಾದಯೋಗ)ವನ್ನಾಗಿ ಮಾಡಿವೆ.

ಅಚ್ಯುತ, ಕೃಷ್ಣ, ಗೋವಿಂದ, ಜನಾರ್ದನ, ಮಾಧವ, ಮಧುಸೂದನ, ಕೇಶವ, ವಾರ್ಷ್ಣೇಯ ಮೊದಲಾಗಿ ತನ್ನ ಮಾತಿನುದ್ದಕ್ಕೂ ಶ್ರೀಕೃಷ್ಣನ ಅನೇಕ ಪುಣ್ಯನಾಮಗಳನ್ನು ಅರ್ಜುನನು ಉಚ್ಚರಿಸಿದ್ದಾನೆ; ಮುಂದೆಯೂ ಉಚ್ಚರಿಸುತ್ತಾನೆ; ಹಾಗೆ ಉಚ್ಚರಿಸುತ್ತಲೇ ಶ್ರೀಕೃಷ್ಣನಿಗೆ ಪ್ರಿಯನಾಗುತ್ತಾನೆ; ಹತ್ತಿರನಾಗುತ್ತಾನೆ; ಕಾಲಕಾಲಕ್ಕೆ ಮಾಡುವ

ಭಗವನ್ನಾಮೋಚ್ಚಾರಣೆಯ ಮಹಿಮೆಯೇ ಅಂತಹುದು; ಅದು ಮನಸ್ಸಿನ ಮೋಹ-ವನ್ನು ಕಳೆಯುತ್ತದೆ, ತತ್ತ್ವಜ್ಞಾನದ ಹಾದಿಯನ್ನು ತೋರುತ್ತದೆ. ದುರ್ಯೋಧನನಿಗೆ ಕೃಷ್ಣನೂ ಕಾಣಲಿಲ್ಲ, ಅವನ ನಾಮವೂ ಗೋಚರಿಸಲಿಲ್ಲ; ಆದರಿಂದಾಗಿಯೇ ಅವನಿಗೆ ಜಯವೂ ಸಿಕ್ಕಲಿಲ್ಲ; ಪ್ರಾಣವೂ ಉಳಿಯಲಿಲ್ಲ.

ಅರ್ಜುನನು ತೊರೆದಿದ್ದು ಬರೀ ಶಸ್ತ್ರವನ್ನಲ್ಲ; ಕರ್ತವ್ಯವನ್ನು; ಆದಕ್ಕೇ ಶ್ರೀಕೃಷ್ಣನು ಉಪದೇಶಿಸಿದ್ದು ಬರೀ ಶಸ್ತ್ರಗ್ರಹಣವನ್ನಲ್ಲ; ಕರ್ತವ್ಯಕರಣವನ್ನು; ಹೀಗೆ ಕರ್ತವ್ಯವಿಮುಖರನ್ನು ಕರ್ತವ್ಯಸುಮುಖರನ್ನಾಗಿಸಲೆಂದೇ ಗೀತೆಯ ಪ್ರವೃತ್ತಿ ; ಅದಕ್ಕೆಂದೇ ಅದು ಇಂದಿಗೆ ಮಾತ್ರವಲ್ಲ; ಎಂದೆಂದಿಗೂ ಪ್ರಸ್ತುತವಾಗುವ ಅಮರ ಕೃತಿ; ಅನನ್ಯ ಕೃತಿ.

ನರನು ಕರ್ತವ್ಯಪರಾಯಣನಾಗಲು ಹೀಗೆ ನಾರಾಯಣನನ್ನು ಶರಣು ಹೊಂದಬೇಕು; ಗೀತಾಮೃತವನ್ನು ಶ್ರವಣ ಮಾಡಬೇಕು; ಜೀವನ ಕುರುಕ್ಷೇತ್ರದಲ್ಲಿ ಕಾಮಾದಿ ಶತ್ರುಗಳನ್ನು ಎದುರಿಸಬೇಕು; ಯೋಗಿಯಾಗಬೇಕು, ಭವರೋಗದಿಂದ ಮುಕ್ತಿ ಪಡೆಯಬೇಕು.

*****

# ಅಧ್ಯಾಯ - ೨

## (ಸಾಂಖ್ಯ ಯೋಗ)

ಅರ್ಜುನನಲ್ಲಿ ಹುಟ್ಟಿದ ಕೃಪೆ ಹೀಗೆ ಅವನ ವಿಷಾದಕ್ಕೆ ಕಾರಣವಾಯಿತು. ಅವನ ಕಣ್ಣುಗಳಲ್ಲಿ ನೀರು ತುಂಬಿತು. ಹಾಗೆ ಖಿನ್ನನಾದ ಅವನನ್ನು ಕುರಿತು ಮಧುಸೂದನ ನುಡಿದ : "ಪಾರ್ಥ! ಇಂತಹ ವಿಷಮಸನ್ನಿವೇಶದಲ್ಲಿ ಈ ಮೋಹ ನಿನಗೆ ಎಲ್ಲಿಂದ [೧]ಕವಿಯಿತು? ಇದು ತಿಳಿದವರ ರೀತಿಯಲ್ಲ; ಸ್ವರ್ಗಸಾಧನವಲ್ಲ; ಕೀರ್ತಿಕರವೂ ಅಲ್ಲ; ಇಂತಹ ಕಾತರವನ್ನು ಹೊಂದದಿರು; ನಿನಗಿದು ತರವಲ್ಲ ; ನಿನ್ನನ್ನು ಕೀಳಾಗಿಸುವ ಈ ಮನೋದೌರ್ಬಲ್ಯವನ್ನು ತೊರೆದು ಮೇಲೇಳು."

ಅರ್ಜುನನು ತಿಳಿದಿದ್ದ; ತನ್ನ ವಿಚಾರ ತಿಳಿದವರಿಗೆ ಮೆಚ್ಚುಗೆಯಾದೀತು; ಕೃಷ್ಣನಿಗೂ ಸಹ. ಆದರೆ ಕೃಷ್ಣನು ಹೇಳಿದ್ದೇನು? ತನ್ನದು ವಿವೇಕವಲ್ಲ; ಮೋಹ; ತಿಳಿದವರ ಹಾದಿಯಲ್ಲ; ತಿಳಿಯದವರ ಹಾದಿ; ಸ್ವರ್ಗಸಾಧನವಲ್ಲ, ನರಕಸಾಧನ; ಕೀರ್ತಿಕರವಲ್ಲ ಅಕೀರ್ತಿಕರ; ಅವನದು ಧೈರ್ಯವಲ್ಲ, ಕಾತರ(ದೌರ್ಬಲ್ಯ); ಅವನ ನಿರೀಕ್ಷೆ ಸುಳ್ಳಾಯಿತು. ಆಘಾತಕ್ಕೆ ಕಾರಣವಾಯಿತು; ಅವನ ವಿಚಾರವನ್ನು ಮತ್ತೊಮ್ಮೆ ವಿಮರ್ಶಿಸುವಂತೆ ಮಾಡಿತು. ಅವನು ಪುನಃ ನುಡಿದನು.

### ಯುದ್ಧಕ್ಕಿಂತ ಭಿಕ್ಷೆ ಲೇಸು

"ಮಧುಸೂದನ! ಭೀಷ್ಮ ದ್ರೋಣರು ಪೂಜ್ಯರು; ಇಂಥವರನ್ನು ನಾನೆಂತು ಬಾಣಗಳಿಂದ ಎದುರಿಸಲಿ? ಮಹಾನುಭಾವರಾದ ಇವರನ್ನು ಕೊಂದು ಮೆರೆಯುವುದಕ್ಕಿಂತ ತಿರಿದು [೨]ತಿನ್ನುವುದು ಲೇಸಲ್ಲವೆ? ಇವರೂ ಅರ್ಥಕಾಮರೇ ! ಇವರನ್ನು ಕೊಂದ ಮೇಲೆ ದೊರೆಯುವ ಭೋಗಭಾಗ್ಯಗಳಿಗೆ ಇವರ ರಕ್ತ ಮೆತ್ತಿರುವುದಿಲ್ಲವೇ? ಅಂಥವನ್ನು ನಾವು ಭೋಗಿಸುವುದೆಂತು! ಇನ್ನು ಇದರಲ್ಲಿ ಗೆಲ್ಲುವುದು ನಾವೋ? ಅವರೋ? ಯಾರೇ ಗೆದ್ದರೂ ಸೋಲು ಮಾತ್ರ ನಮ್ಮದೇ; ಏಕೆಂದರೆ ನಾವು ಕೊಲ್ಲುವುದು ಯಾರನ್ನೋ ಅಲ್ಲ ಧೃತರಾಷ್ಟ್ರ ಪುತ್ರರನ್ನು ಅವರನ್ನು ಕೊಂದು ನಾವು ಬದುಕುವುದೆಂತು?"

---

೧. ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಮ್ ।
ಅನಾರ್ಯಜುಷ್ಟಮಸ್ವರ್ಗ್ಯಮಕೀರ್ತಿಕರಮರ್ಜುನ ॥
ಕ್ಲೈಬ್ಯಂ ಮಾ ಸ್ಮ ಗಮಃ ಪಾರ್ಥ ನೈತತ್ ತ್ವಯ್ಯುಪಪದ್ಯತೇ ।
ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ ॥ -ಗೀತಾ(೨/೨, ೩)

೨. ಗುರೂನಹತ್ವಾ ಹಿ ಮಹಾನುಭಾವಾನ್ ಶ್ರೇಯೋ ಭೋಕ್ತುಂ ಭೈಕ್ಷಮಪೀಹ ಲೋಕೇ ॥
-ಗೀತಾ(೨/೫)

ಅರ್ಜುನನ ಅಂತರಾಳದ ಅಳುಕು ಅವನ ಮಾತುಗಳಲ್ಲಿ ಇನ್ನೂ ಸ್ಫುಟವಾಗಿದೆ; ಇದು ಯಾರದೋ ಮೇಲಿನ ಯುದ್ಧವಲ್ಲ; ಕೌರವರ ಮೇಲಿನದು; ಬರೀ ಕೌರವರ ಮೇಲೂ ಅಲ್ಲ, ಮುಖ್ಯವಾಗಿ ಭೀಷ್ಮ ದ್ರೋಣರಂತಹ ಗುರುಹಿರಿಯರ ಮೇಲೆ; ಏಕೆಂದರೆ ಅವನ ಪರವಾಗಿ ನಿಜವಾಗಿಯೂ ಯುದ್ಧ ಮಾಡುವವರು ಇವರೇ; ಅವರನ್ನು ಕೊಲ್ಲುವ ಮುನ್ನ ಇವರನ್ನು ಕೊಲ್ಲಲೇ ಬೇಕು. ಇವರು ಬರೀ ವೃದ್ಧರಲ್ಲ; ಬರೀ ಸಂಬಂಧಿಗಳಲ್ಲ; ಪೂಜ್ಯರು. ಭೀಷ್ಮರು ಕುರುಕುಲಕ್ಕೆ ಪಿತಾಮಹರಾಗಿ ಪೂಜ್ಯರು; ಬಾಲ್ಯದಿಂದ ಮಮತೆಯಿಂದ ಎತ್ತಿ ಲಾಲಿಸಿಯೂ ಪೂಜ್ಯರು; ದ್ರೋಣರೂ ಹಾಗೆಯೇ! ತನಗಾಗಿ ತಮ್ಮ ವಿದ್ಯೆಯನ್ನೆಲ್ಲ ಧಾರೆಯೆರೆದವರು; ತನ್ನನ್ನು ಅಪ್ರತಿಮ ಧನುರ್ಧರನನ್ನಾಗಿ ರೂಪಿಸಿದವರು. ಇಂತಹವರನ್ನು ಬಾಣಗಳಿಂದ ಎದುರಿಸುವುದೆಂತು? ಈಗಂತೂ ಬರೀ ಎದುರಿಸುವುದಲ್ಲ; ಕೊಲ್ಲಲೇಬೇಕು ತಾನು ಅಥವಾ ನಮ್ಮವರು; ಇದೆಂತು ಸಾಧ್ಯ! ಭೀಷ್ಮದ್ರೋಣರಂತೆ ಗುರುಪುತ್ರ ಅಶ್ವತ್ಥಾಮರು, ಇನ್ನೊಬ್ಬ ಗುರು ಕೃಪಾಚಾರ್ಯರು, ಮುತ್ತಜ್ಜ ಬಾಹ್ಲೀಕ, ಇನ್ನೊಬ್ಬ ಅಜ್ಜ ಸೋಮದತ್ತ, ಪಿತೃಸದೃಶರಾದ ಭೂರಿ, ಭೂರಿಶ್ರವಸ್, ಶಲ ಮತ್ತು ಸೋದರಮಾವ ಶಲ್ಯ ಇವರೆಲ್ಲರೂ ಪೂಜ್ಯರು ಎಂಬ ಭಾವವೂ ಇಲ್ಲಿಯ [೧]'ಚ'ಕಾರದಲ್ಲಿ ಧ್ವನಿತವಾಗಿದೆ.

ಅರ್ಜುನನಿಗೆ ಯುದ್ಧ ಹೊಸತಲ್ಲ. ರಾಜಸೂಯಯಾಗ ಕಾಲಕ್ಕೆ ಉತ್ತರದಿಕ್ಕಿನ ರಾಜರನ್ನು ಗೆದ್ದವನು; ಸ್ವರ್ಗಲೋಕಕ್ಕೆ ಹೋಗಿದ್ದಾಗ ಇಂದ್ರನಿಗಾಗಿ ನಿವಾತಕವಚರು ಮತ್ತು ಕಾಲಕೇಯರೆಂಬ ರಾಕ್ಷಸರನ್ನು ಕೊಂದವನು; ಆದರೆ ಅವರೆಲ್ಲ ಗುರುಹಿರಿಯ-ರಾಗಿರಲಿಲ್ಲ; ಅಯೋಗ್ಯರಾಗಿದ್ದರು, ಸಾಯಬೇಕಾದವರಾಗಿದ್ದರು. ಅವನಿಗೆ ಈ ಗುರುಹಿರಿಯರ ಮೇಲಿನ ಯುದ್ಧವೂ ಹೊಸತಲ್ಲ; ಉತ್ತರ ಗೋಗ್ರಹಣಕಾಲದಲ್ಲಿ ಈ ಎಲ್ಲರನ್ನೂ ಒಟ್ಟಾಗಿಯೇ ಎದುರಿಸಿದವನು; ಎದುರಿಸಿ ಗೆದ್ದವನು.

ಆದರೆ ಆ ಸನ್ನಿವೇಶ ಬೇರೆ; ಅದರ ಗುರಿ ರಾಜ್ಯಭೋಗಗಳಾಗಿರಲಿಲ್ಲ; ಗೋಮೋಚನೆಯಾಗಿತ್ತು, ಸ್ವಂತ ಹಿತದ ಕಾರ್ಯವಾಗಿರಲಿಲ್ಲ; ಮತ್ತೊಬ್ಬರ ಹಿತದ ಉದಾತ್ತ ಕಾರ್ಯವಾಗಿತ್ತು; ಅಲ್ಲಿ ಅವರನ್ನು ಕೊಲ್ಲಬೇಕಾಗಿರಲಿಲ್ಲ, ಗೆದ್ದರೆ ಸಾಕಿತ್ತು; ತನ್ನ ಕಡೆಯಲ್ಲಂತೂ ತಾನೊಬ್ಬನೇ, ಪುತ್ರಪೌತ್ರಾದಿಗಳು ಯಾವ ಬಾಂಧವರೂ ಜೊತೆ ಇರಲಿಲ್ಲ.

ಪ್ರಕೃತ ಸನ್ನಿವೇಶ ಹಾಗಲ್ಲ, ಇವರನ್ನು ಕೊಲ್ಲದೆ ರಾಜ್ಯವಿಲ್ಲ; ರಾಜ್ಯದೊರೆತಾಗ ಇವರಿರುವುದಿಲ್ಲ. ಅವರನ್ನು ಕೊಂದ ನೆನಪು ಮಾತ್ರ ಕಾಡುತ್ತಿರುತ್ತದೆ.

---

೧. ಕಥಂ ಭೀಷ್ಮಮಹಂ ಸಂಖ್ಯೇ ದ್ರೋಣಂ ಚ ಮಧುಸೂದನ।
ಇಷುಭಿಃ ಪ್ರತಿಯೋತ್ಸ್ಯಾಮಿ ಪೂಜಾರ್ಹಾವರಿಸೂದನ॥ - ಗೀತಾ (೨/೪)

ಇವರನ್ನು ಕೊಲ್ಲದಿದ್ದರೆ ತಮಗೆ ರಾಜ್ಯ ತಪ್ಪುತ್ತದೆ; ಆದರೆ ಇವರನ್ನು ಕೊಲ್ಲುವ ನೋವು ತಪ್ಪುತ್ತದೆ; ಇನ್ನು ಹೊಟ್ಟೆ ಪಾಡು, ಅದಕ್ಕೆ ರಾಜ್ಯವೇ ಆಗಬೇಕಿಲ್ಲ, ತಿರಿದು ತಿಂದರೂ ನಡೆಯುತ್ತದೆ.

ಇನ್ನು ಕೌರವರನ್ನು ಕೊಲ್ಲುವುದು; ಅವರು ಬರೀ ದುಷ್ಟರಲ್ಲ; ಧೃತರಾಷ್ಟ್ರನ ಮಕ್ಕಳು, ಧೃತರಾಷ್ಟ್ರಗಾಂಧಾರಿಯರು ಪಿತೃಸದೃಶರು, ವೃದ್ಧರು, ಧೃತರಾಷ್ಟ್ರ ಕಣ್ಣಿಲ್ಲದವನು, ಗಾಂಧಾರಿ ಕಣ್ಣಿದ್ದೂ ಕಾಣಲಾಗದವಳು; ಅವರಿಬ್ಬರನ್ನೂ ಅವರ ದುಃಖವನ್ನೂ ಕಾಣುವ ಕಣ್ಣು ಇರುವ ತಾವು ಅವರ ಮಕ್ಕಳನ್ನೆಲ್ಲ ಕೊಂದು ಅವರ ಮುಂದೆ ನಿಲ್ಲುವುದೆಂತು ? ನಿಜ ಅವರಿಗೆ ತಮ್ಮ ಮುಖ ಕಾಣುವುದಿಲ್ಲ; ಅದಕ್ಕೆಂದೇ ತಮಗೆ ಅವರ ಮುಖವನ್ನು ಕಾಣಲು ಸಾಧ್ಯವಾಗುವುದಿಲ್ಲ.

ಅರ್ಜುನನ ಈ ಮಾತುಗಳಲ್ಲಿ ಅವನ ವಿಶಾಲದೃಷ್ಟಿ ಮತ್ತೊಮ್ಮೆ ಮೆರೆದಿದೆ; ವಿಚಾರದಲ್ಲಿ ದೋಷವಿದ್ದರೂ ಸಹ. ಅವನಿಗೆ ಯುದ್ಧದ ಬಗ್ಗೆ ಭಯವಿಲ್ಲ; ಆದರೆ ಗುರುಹಿರಿಯರನ್ನು ಕೊಲ್ಲುವ ಭಯವಿದೆ. ಅವನಿಗೆ ರಾಜ್ಯ ಭೋಗಗಳು ಬೇಡವಲ್ಲ-ದಿದ್ದರೂ, ಗುರುಹಿರಿಯರನ್ನು ಕೊಂದು ಅವುಗಳನ್ನು ಪಡೆಯುವುದು ಮಾತ್ರ ಖಂಡಿತ ಬೇಡವಾಗಿದೆ; ಶತ್ರುಗಳ ತಂದೆ ತಾಯಿಗಳ ಭಾವನೆಗಳನ್ನೂ ಗೌರವಿಸುವ ಉದಾರ ಹೃದಯವಿದೆ; ಅವನಿಗೆ ಯುದ್ಧದಲ್ಲಿನ ಗೆಲುವಿಗಿಂತಲೂ ಜೀವನದಲ್ಲಿ ನಲಿವು ಮುಖ್ಯವಾಗಿದೆ.

## ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್[೧]

ಅರ್ಜುನನು ತಾನು ಯುದ್ಧ ತೊರೆಯಲು ಕೊಡಬಹುದಾದ ಕಾರಣವನ್ನೆಲ್ಲ ಕೊಟ್ಟಾಗಿತ್ತು; ಆದರೆ ಅವು ಯಾವೂ ಕೃಷ್ಣನಿಗೆ ಒಪ್ಪಿತವಾಗಿಲ್ಲ ಎನ್ನುವುದು ತಿಳಿಯಿತು. ಶ್ರೀಕೃಷ್ಣನು ಹಾಗೆಂದು ಮತ್ತೊಮ್ಮೆ ಬಾಯಿತೆರೆದು ಹೇಳದಿದ್ದರೂ, ಎದುರೇ ಇದ್ದ ಅವನ ಮುಖ ಅದನ್ನು ಸ್ಪಷ್ಟವಾಗಿ ತಿಳಿಸುತ್ತಿತ್ತು. ಅವನ ಮನಸ್ಸು ಗೊಂದಲಕ್ಕೆ ಸಿಲುಕಿತು; 'ತನ್ನ ಮಾತುಗಳಲ್ಲಿ ತಪ್ಪು ಕಾಣುತ್ತಿಲ್ಲ; ಆದರೆ ಅವು ಸರಿಯಲ್ಲ ಎಂದು ಹೇಳುವ ಶ್ರೀಕೃಷ್ಣನ ವಿಚಾರವನ್ನು ಒಪ್ಪದಿರಲೂ ಸಾಧ್ಯವಿಲ್ಲ'.

ಅವನು ನಿಶ್ಚಯಿಸಿದ; ಅವನಿಗೆ ಕರ್ತವ್ಯದ ಬಗ್ಗೆ ಗೊಂದಲ ಉಂಟಾಗಿದ್ದರೂ, ಅದರ ಪರಿಹಾರದ ಉಪಾಯದ ಬಗ್ಗೆ ಗೊಂದಲವಿರಲಿಲ್ಲ; ಅವನು ಹೇಳುವುದನ್ನು ನಿಲ್ಲಿಸಿ, ಕೇಳಿಕೊಳ್ಳಲು ತೊಡಗಿದ: "ಶ್ರೀಕೃಷ್ಣ ! ನನ್ನ ಚೈತನ್ಯಕ್ಕೆ ಈಗ ಕಾತರತೆಯ ದೋಷ

---

೧. ಕಾರ್ಪಣ್ಯದೋಷೋಪಹತಸ್ವಭಾವಃ ಪೃಚ್ಛಾಮಿ ತ್ವಾಂ ಧರ್ಮಸಂಮೂಢಚೇತಾಃ।
ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್ ॥ ಗೀತಾ(೨/೭)

ಕವಿದಿದೆ; ಆದ್ದರಿಂದ ನನ್ನ ಮನಸ್ಸು ಕರ್ತವ್ಯದ ವಿಚಾರದಲ್ಲಿ ಗೊಂದಲಕ್ಕೆ ಸಿಲುಕಿದೆ; ನನಗೀಗ ಖಚಿತವಾಗಿ ಶ್ರೇಯಸ್ಸು ಯಾವುದರಿಂದ ಲಭಿಸೀತು ಎಂಬುದನ್ನು ನೀನೇ ತಿಳಿಸಬೇಕು. ನಾನು ನಿನ್ನ ಶಿಷ್ಯನಾಗಿ ನಿನ್ನ ಆಸರೆಯನ್ನು ಬಯಸಿರುವೆನು; ನನಗೀಗ ನೀನು (ತತ್ತ್ವವನ್ನು)ಬೋಧಿಸು. ಶೋಕವು ನನ್ನ ಇಂದ್ರಿಯಗಳನ್ನೆಲ್ಲ ಉಡುಗಿಸಿದೆ. ಭೂಮಂಡಲದ ಚಕ್ರಾಧಿಪತ್ಯವಿರಲಿ, ದೇವಲೋಕದ ಒಡೆತನವೇ ಲಭಿಸಿದರೂ ಇದು ತೊಲಗಲಾರದು''.

ಅರ್ಜುನನಿಗೆ ತಿಳಿದಿತ್ತು. ಜಗತ್ತಿನ ಯಾವ ಭೋಗಭಾಗ್ಯಗಳೂ ತನ್ನ ದುಃಖವನ್ನು ಪೂರ್ಣವಾಗಿ ಪರಿಹರಿಸಲಾರವು; ಅದಕ್ಕೆ ತತ್ತ್ವಜ್ಞಾನವೇ ಬೇಕು; ಅದು ಶ್ರೀಕೃಷ್ಣನಿಂದಲೇ ಲಭಿಸಬೇಕು. ಅವನು ತನ್ನ ರಥದ ಕುದುರೆಗಳನ್ನು ಓಡಿಸುವವನಲ್ಲ; ಇಡೀ ಜಗತ್ತಿನ ಎಲ್ಲ ಜನರ ಬುದ್ಧಿಗಳನ್ನು ಪ್ರೇರಿಸುವವನು. ಅವನಿಗೆ ತತ್ತ್ವಜ್ಞಾನದ ಮಹತ್ತ್ವದೊಂದಿಗೆ ಅದನ್ನು ಪಡೆಯುವ ರೀತಿಯೂ ಗೊತ್ತಿತ್ತು; ಶಿಷ್ಯನಾಗಿ ಗುರುಗಳ ಬಳಿ ತನ್ನನ್ನು ಹೀಗೆ ತೆರೆದುಕೊಂಡವನಿಗೆ ಮಾತ್ರವೇ, ತತ್ತ್ವಜ್ಞಾನದ ಬಾಗಿಲು ತೆರೆಯುತ್ತದೆ. ಅವನು ಹಾಗೆ ತನ್ನನ್ನು ಕೃಷ್ಣನ ಮುಂದೆ ತೆರೆದುಕೊಂಡ; ಶಿಷ್ಯ ಎಂದು ಒಪ್ಪಿಕೊಂಡ, ಗುರುವಾಗಿ ಭಗವಂತ ಅವನಿಗೆ ತತ್ತ್ವವನ್ನೇ ಒರೆದ. ಯೋಗ್ಯರೀತಿಯಲ್ಲಿ ಹೀಗೆ ಶಿಷ್ಯತ್ವ ವಹಿಸದ ಯಾರಿಗೂ ಭಗವದ್ಗೀತೆಯಂತಹ ಶಾಸ್ತ್ರ ತಿಳಿಯಲಾರದು.

ನಿದ್ರೆಯನ್ನು ಗೆದ್ದಿದ್ದ ಅರ್ಜುನ ಈಗ ಅಜ್ಞಾನದ ನಿದ್ರೆಗೆ ಸಿಲುಕಿದ್ದ; ಎಲ್ಲವನ್ನೂ ಗೆದ್ದ ಶ್ರೀಕೃಷ್ಣನನ್ನು ಮೊರೆ ಹೊಕ್ಕಿದ್ದ 'ನೀನು ಉಪದೇಶಿಸದ ಹೊರತು ನಾನು ಯುದ್ಧ ಮಾಡಲಾರೆ' ಎಂದು ನುಡಿದು ಕುಳಿತೇ ಬಿಟ್ಟ; ಪ್ರಶ್ನೆ ಕೇಳಿದ ಮೇಲೆ ಹಾಗೆ ಸುಮ್ಮನೆ ಕೂಡುವುದು ಸಹ ಜಿಜ್ಞಾಸುವಿನ ಮತ್ತೊಂದು ಲಕ್ಷಣವೇ ಸರಿ.

ಅಂತಹ ಅರ್ಜುನನನ್ನು ಕುರಿತು ಮಂದಹಾಸ ಬೀರುತ್ತಲೇ ಭಗವಂತ ನುಡಿಯತೊಡಗಿದ; ಅಳುತ್ತ ಕುಳಿತ ಅವನಿಗೆ ನಗುತ್ತ ಹೇಳಿದ; ಅವನು ಹೀಗೆ ಮಾಡುವುದು ತನಗೆ ಗೊತ್ತಿತ್ತು ಎಂಬ ಸೂಚನೆಯೂ ಆ ನಗೆಯಲ್ಲಿತ್ತು. ಅಳುವನ್ನು ಕಳೆದು ನಗುವನ್ನು ನೀಡುವ ಆಶ್ವಾಸನೆಯೂ ಸಹ; ಅದೇಕೆ ಅವನ ಮಂದಹಾಸವೇ ಒಂದು ರೀತಿಯಲ್ಲಿ ಗೀತೆಯಾಗಿತ್ತು; ದುಃಖತಪ್ತನಾದ ಅರ್ಜುನನಿಗೆ ಅದು ಒಂದು ರೀತಿಯ ಅಮೃತಸೇಚನವೂ ಆಗಿತ್ತು.

ಭಕ್ತನನ್ನು ಕುರಿತು ಭಗವಂತ ನುಡಿದ; ನರನನ್ನು ಕುರಿತು ನಾರಾಯಣ ನುಡಿದ, ಜಗತ್ತಿನ ನರರಿಗೆಲ್ಲ ಅದು ಶಾಸ್ತ್ರವಾಯಿತು, ಶೋಕವನ್ನು ತೊರೆಯುವ ಸಾಧನ ಸರ್ವಸ್ವವಾಯಿತು.

*****

## ¹ಅಶೋಚ್ಯಾನನ್ವಶೋಚಸ್ತ್ವಂ

"ಅರ್ಜುನ ! ನೀನು ಅಳಬಾರದವರಿಗಾಗಿ ಅಳುತ್ತಿರುವಿ; ತಿಳಿದವರು ಆಡಬಾರದ ಮಾತುಗಳನ್ನು ಆಡುತ್ತಿರುವಿ, ತಿಳಿದವರು ಸಾಯದಿರುವವರ ಬಗ್ಗೆ ಅಳುವುದಿಲ್ಲ, ಸಾಯಲು ಹೊರಟವರ ಬಗ್ಗೆಯೂ ಸಹ".

ಅಳಬೇಕಾದವರ ಬಗ್ಗೆ ಅಳುವುದು ಗುಣವಾಗುವಂತೆ, ಅಳಬಾರದವರ ಬಗ್ಗೆ ಅಳುವುದು ದೋಷವಾಗುತ್ತದೆ; ಪೂರ್ಣಪ್ರಜ್ಞರಿಗೆ ಸಂಮತವಾದ ಮಾತುಗಳನ್ನು ಆಡುವುದು ಗುಣವಾಗುವಂತೆ; ಅಸಂಮತವಾದ ಮಾತುಗಳನ್ನು ಆಡುವುದು ದೋಷವಾಗುತ್ತದೆ; ಅರ್ಜುನನು ಈಗ ಎರಡನ್ನೂ ಒಟ್ಟಾಗಿಯೇ ಮಾಡಿದ್ದಾನೆ; ಈಗ ಅವನು ಅಳುತ್ತಿರುವುದು ಅಳಬಾರದವರಿಗಾಗಿ, ಆಡುತ್ತಿರುವ ಮಾತುಗಳೂ ಅಂತಹವೇ; ಅವನ ಬುದ್ಧಿಗೆ ಮಾತ್ರ ತೋಚಿದ ಮಾತುಗಳು; ತಿಳಿದವರು ಆಡುವ ಮಾತುಗಳಲ್ಲ.

ಇಲ್ಲಿ ಸಾಯುವುದು ಯಾರು? ದುರ್ಯೋಧನಾದಿಗಳು, ಭೀಷ್ಮಾದಿಗಳು; ದುರ್ಯೋಧನಾದಿಗಳ ಸಾವಿನ ಬಗ್ಗೆ ಅಳಬೇಕಿಲ್ಲ; ಅವರು ದುಷ್ಟರು ದೈವದ್ರೋಹಿಗಳು, ಧರ್ಮದ್ರೋಹಿಗಳು; ಅಂತಹವರು ಸಾಯದಿದ್ದರೆ ಅಳಬೇಕು; ಸತ್ತರೆ ಅಲ್ಲ ಎಂದರೆ ಅವರ ಸಾವು ಸಂತೋಷದ ವಿಷಯವಾಗಬೇಕೇ ಹೊರತು ದುಃಖದ ವಿಷಯವಲ್ಲ; ತನ್ನ ತಂದೆ ಹಿರಣ್ಯಕಶಿಪುವು ನರಸಿಂಹನಿಂದ ಹತನಾದಾಗ ಪ್ರಹ್ಲಾದ ನುಡಿದಿದ್ದ; 'ಹಾವು, ಚೇಳುಗಳ ಸಾವಿಗೆ ಸಜ್ಜನರೂ ಹರ್ಷ ಪಡಬೇಕು; ತನ್ನ ತಂದೆ ಅಂಥವನು, ಅವನ ಸಾವಿಗಾಗಿ ನಾನು ²ಅಳಲಾರೆ."

ಇನ್ನು ಭೀಷ್ಮಾದಿಗಳು, ಅವರ ಸಾವಿಗೂ ಅಳಬೇಕಿಲ್ಲ, ನಿಜ ಅವರು ಕೌರವರಂತೆ ದುಷ್ಟರಲ್ಲ, ಶಿಷ್ಟರು; ತ್ಯಾಗ ಪರೋಪಕಾರಗಳಿಗೆ ಹೆಸರಾದವರು; ಅರ್ಜುನ ಹೇಳಿದಂತೆ 'ಪೂಜ್ಯರು'. ಆದರೆ ಅವರ ಸಾವಿಗೂ ಅಳಬೇಕಿಲ್ಲ. ಅವರು ಹಿಡಿದಿರುವ ಪಕ್ಷ ಅಂತಹುದು; ಅವರೀಗ ಕೌರವರ ಪಕ್ಷದಲ್ಲಿ ನಿಂತಿದ್ದಾರೆ, ಅವರಿಗಾಗಿ ಹೋರಾಡುತ್ತಿದ್ದಾರೆ. ಎಂದರೆ ಅವರ ಹೋರಾಟ ಅಧರ್ಮದ ವಿರುದ್ಧವಲ್ಲ, ಧರ್ಮದ ವಿರುದ್ಧ. ಈ ಮೊದಲು ಅಂತಹ ತಪ್ಪನ್ನು ಅವರು ಮಾಡಿದ್ದಾರೆ. ದ್ರೌಪದೀ ವಸ್ತ್ರಾಪಹರಣದಂತಹ ಜಗತ್ತು ಕಂಡ ಅತ್ಯಂತ ಹೀನಕೃತ್ಯಕ್ಕೆ ಪ್ರಯತ್ನಮಾಡಿದವರು ದುರ್ಯೋಧನ, ದುಃಶಾಸನರು; ಅದನ್ನು ಕಣ್ಣಾರೆ ಕಂಡರೂ, ವಿದುರನಂತೆ ಪ್ರತಿಭಟಿಸದೆ ಹೋದವರು ಭೀಷ್ಮದ್ರೋಣಾದಿಗಳು. ಅದನ್ನು ಅವರು ಒಪ್ಪದವರು ನಿಜ; ತಪ್ಪಿಸುವ ಸಾಮರ್ಥ್ಯ ಅವರಿಗಿರಲಿಲ್ಲವೆಂಬುದೂ ನಿಜ; ಆದರೆ ಅದನ್ನು ಪ್ರತಿಭಟಿಸುವ ಹೊಣೆ ಅವರದಾಗಿತ್ತು;

---

೧. ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ।
ಗತಾಸೂನಗತಾಸೂಂಶ್ಚ ನಾನುಶೋಚಂತಿ ಪಂಡಿತಾಃ॥ - ಗೀತಾ(೨/೧೧)

೨. ಮೋದೇತ ಸಾಧುರಪಿ ವೃಶ್ಚಿಕಸರ್ಪಹತ್ಯಾ। - ಭಾಗವತ (೭/೯/೧೪)

ಅಂದು ಹಾಗೆ ಮಾಡಿದ ಅವರು ಇಂದು ಅವನ ಯುದ್ಧಕಾರ್ಯಕ್ಕೆ ಸಹಕಾರ ನೀಡಲೆಂದು ಸೇನಾನಾಯಕರೇ ಆಗಿರುವರು.

ದೈವದ್ರೋಹಿಗಳಂತೆ, ಅವರಿಗೆ ಸಹಕಾರ ನೀಡುವವರು ಸಹ ವಧ್ಯರೇ [೧]ಸರಿ; ವಿಷವನ್ನು ಮಾತ್ರವಲ್ಲ; ವಿಷಬೆರೆತ ಹಾಲನ್ನೂ ತೊರೆಯಲೇಬೇಕಲ್ಲವೇ!

ಇವರೊಂದಿಗೆ, ಸಾಯುವ ಮತ್ತೊಂದು ವರ್ಗವೂ ಇದೆ; ಅಭಿಮನ್ಯು ಮೊದಲಾದ ಪಾಂಡವರ ಕಡೆಯವರು; ಅವರು ಸಜ್ಜನರು; ಸಜ್ಜನರ ಕಡೆಯೇ ಇರುವವರು; ಯುದ್ಧದಲ್ಲಿ ಬದುಕಿಗಿಂತ ಸಾವೇ ಹೆಚ್ಚು ಸಂಭಾವ್ಯ. ಈ ಯುದ್ಧದಲ್ಲಂತೂ ಅದೇ ಸಂಭಾವ್ಯ. ಎಂದರೆ ಅವರೂ ಸಾಯುವವರೇ, ಆದರೆ ಅವರ ಬಗ್ಗೆಯೂ ಶೋಕಿಸಬೇಕಿಲ್ಲ; ಏಕೆಂದರೆ ಅವರ ಸಾವು ಸಾವಲ್ಲ; ನಿಜವಾದ ಬದುಕು; ಅದಕ್ಕಿಂತ ಮಿಗಿಲಾದ ಸಾರ್ಥಕ್ಯವೇ ಕ್ಷತ್ರಿಯನ ಬದುಕಿಗೆ ಬೇರೊಂದು ಇರದು; ಕರ್ತವ್ಯ ಪೂರೈಸಿ ಸಾಯುವ ಯಾರೂ ನಿಜವಾಗಿ ಸಾಯುವುದಿಲ್ಲ; ಆದ್ದರಿಂದಲೇ ಅವರ ಬಗ್ಗೆ ಸತ್ತರೆಂದು ತಪ್ಪಾಗಿ ತಿಳಿದು ಯಾರೂ ಅಳಬೇಕಿಲ್ಲ.

ಹೀಗೆ ಅಳಬಾರದ್ದಕ್ಕೆ ಅಳದವನೇ ನಿಜವಾದ ಪಂಡಿತ. ಮಹಾಭಾರತದ ಭೀಮಸೇನ ಇಂತಹ ಶ್ರೇಷ್ಠ ಪಂಡಿತ. ಘಟೋತ್ಕಚ ಅವನ ಮಗ; ಪಾಂಡವ ಸಂತಾನದಲ್ಲೇ ಹಿರಿಯ, ಗುಣಶಾಲಿ, ಪರಾಕ್ರಮಶಾಲಿ, ಹಲವು ಪ್ರಸಂಗಗಳಲ್ಲಿ ಧರ್ಮರಾಜಾದಿಗಳಿಗೆ ನೆರವಾದವನು. ಯುದ್ಧದ ಮೊದಲ ಹದಿನಾಲ್ಕು ದಿನಗಳ ಯುದ್ಧದಲ್ಲಿ ಶತ್ರುಗಳಿಗೆ ಸಿಂಹಸ್ವಪ್ನವಾಗಿ ಕಾದಿದವನು. ಅಂತಹವನು ಹದಿನಾಲ್ಕನೆಯ ದಿನ ಮಧ್ಯರಾತ್ರಿ ಕರ್ಣನ ಶಕ್ತ್ಯಾಯುಧಕ್ಕೆ ಬಲಿಯಾದ. ಆಗ ಅತ್ತದ್ದು ಧರ್ಮರಾಜ ಮೊದಲಾದ ಇತರರೇ ಹೊರತು; ಅವನ ತಂದೆ ಭೀಮನಲ್ಲ, ಆಗ ಮಾತ್ರವಲ್ಲ, ಎಂದೂ ಭೀಮ ಅತ್ತವನೇ ಅಲ್ಲ. ಅದಕ್ಕೆ ಅವನು ನಿಜವಾದ ಪಂಡಿತನಾಗಿದ್ದೇ ಕಾರಣ.

ಇನ್ನು ಅರ್ಜುನನ ಮಾತುಗಳು, ಅವೂ ಅಷ್ಟೆ! ಪೂರ್ಣಪ್ರಜ್ಞನು ಆಡುವಂತಹುವಲ್ಲ. ಅವನ ಬುದ್ಧಿಗೆ ಮಾತ್ರ ತೋಚಿದಂತಹವು; ಭಗವದ್ದ್ವೇಷಿಗಳನ್ನಾಗಲೀ, ಅವರ ಸಹಕಾರಿಗಳನ್ನಾಗಲೀ ಕೊಲ್ಲುವುದು ತಪ್ಪು ಎಂದು ಯಾವ ವಿದ್ವಾಂಸ ಹೇಳುತ್ತಾನೆ!

*****

---

೧. ತತ್ರ ಸಾಕ್ಷಾದಿಂದ್ರಾವತಾರಮುತ್ತಮಾಧಿಕಾರಿಣಮಾತ್ಮನಃ ಪ್ರಿಯತಮಮರ್ಜುನಂ ಕ್ಷತ್ರಿಯಾಣಾಂ ವಿಶೇಷತೋಽಪಿ ಪರಮಧರ್ಮಂ ನಾರಾಯಣದ್ವಿಟ್‌ತದನುಬಂಧಿನಿಗ್ರಹಂ ಬಂಧುಸ್ನೇಹಾದಧರ್ಮತ್ವೇನಾಶಂಕ್ಯ ತತೋ ನಿವೃತ್ತಪ್ರಾಯಂ ಸ್ವವಿಹಿತವೃತ್ತ್ಯಾ ಭಕ್ತ್ಯಾ ಭಗವದಾರಾಧನಮೇವ ಪರಮೋ ಧರ್ಮಸ್ತದ್ವಿರುದ್ಧಃಸರ್ವೋಽಪ್ಯಧರ್ಮೋಭಗವದಧೀನತ್ವಾತ್ಸರ್ವಸ್ಯೇತಿ ಬೋಧಯತಿ ಭಗವಾನ್ನಾರಾಯಣಃ — ಗೀತಾತಾತ್ಪರ್ಯನಿರ್ಣಯ

## ಸಾವಿನ ಪೂರ್ವಾಪರ

ಸಾವಿನ ವಿಶ್ಲೇಷಣೆ ಕೃಷ್ಣೋಪದೇಶದ ಮುಂದಿನ ಘಟ್ಟ:

ಸಾವು ಎಂದರೇನು? ಒಬ್ಬನು ಸತ್ತ ಎಂದರೆ ಆ ಮಾತಿನಿಂದ ತಿಳಿದುಕೊಳ್ಳುವುದೇನು, ಎಲ್ಲರೂ ಸಾಯುವವರೇ. ಆದರೆ ಅದರ ಅರ್ಥ ತಿಳಿದವರು ಮಾತ್ರ ದುರ್ಲಭ, ಅದರ ಅರ್ಥವನ್ನು ಭಗವಂತ ತಿಳಿಸುತ್ತಿದ್ದಾನೆ. ಹಾಗೆ ತಿಳಿಸುವ ಅವನು ಮಾತ್ರ ಎಂದೂ ಯಾವ ರೀತಿಯಲ್ಲೂ ಸಾಯದವನು.

ದೇಹ ಮತ್ತು ಅದರೊಳಗಿನ ಆತ್ಮ ಮತ್ತು ಅವನೊಳಗಿನ ಪರಮಾತ್ಮ ಈ ಮೂವರಲ್ಲಿ ಸಾವು ಯಾರಿಗೆ?

ಪರಮಾತ್ಮ ಹೇಳುತ್ತಾನೆ : "ತನಗೆ ಸಾವಿಲ್ಲ, ಅದರಂತೆ ಇತರ ಎಲ್ಲ ಚೇತನರಿಗೂ; ಅವರೆಲ್ಲ(ಇಂದಿನಂತೆ) ಹಿಂದೂ ಇದ್ದವರೇ ; ಮುಂದೂ ಇರುವವರೇ."

ಭಗವದ್ಗೀತೆಯು ಸಾರಿರುವ ಮಹೋನ್ನತ ತತ್ತ್ವಗಳಲ್ಲಿ ಆತ್ಮ ನಿತ್ಯತ್ವವೂ ಒಂದು; ಅದು ಹೇಳುತ್ತದೆ : "ಜಗತ್ತಿನಲ್ಲಿ ಯಾವ ಆತ್ಮಕ್ಕೂ ಸಾವಿಲ್ಲ; ಯಾತರಿಂದಲೂ, ಏತಕ್ಕೂ ಸಹ: ಯಾವ ಶಸ್ತ್ರಾಸ್ತ್ರಗಳೂ ಅವನನ್ನು ಕತ್ತರಿಸಲಾರವು, ಅಗ್ನಿ ಸುಡಲಾರದು, ನೀರು ನೆನೆಸಲಾರದು, ಗಾಳಿ ಒಣಗಿಸಲಾರದು; ಅವನು ಕತ್ತರಿಸಲಾಗದವನು, ಸುಡಲಾಗದವನು, ನೆನೆಸಲಾಗದವನು, ಒಣಗಿಸಲಾಗದವನು.

'ಇಮೇ ಜನಾಧಿಪಾಃ'[೧], 'ಭವಿಷ್ಯಾಮಃ' ಎಂಬ ಇಲ್ಲಿಯ (ಬಹು ವಚನದ) ಮಾತುಗಳಲ್ಲಿ ಆತ್ಮದ್ವೈವಿಧ್ಯದೊಂದಿಗೆ ಆತ್ಮವೈವಿಧ್ಯವೂ ಪ್ರತಿಪಾದಿತವಾಗಿದೆ. ಈ ರೀತಿ ಆತ್ಮನಿತ್ಯತ್ವವನ್ನು ಅರ್ಥಮಾಡಿಕೊಂಡ ಮೇಲೆ ಅದರ ಸಾವಿಗೋಸ್ಕರ ಶೋಕಿಸುವುದೆಂತು?

ಹಾಗಿದ್ದರೆ ಸಾವು ದೇಹಕ್ಕೆ ಎಂದು ಶೋಕಿಸಬಹುದೇ? ಅದಕ್ಕೆ ಗೀತೆಯ ಉತ್ತರ ಹೀಗಿದೆ; "ಹುಟ್ಟಿದ ಪ್ರಾಣಿಗೆ ದೇಹದಲ್ಲಿ ಬಾಲ್ಯ, ಕೌಮಾರ, ತಾರುಣ್ಯ ಮತ್ತು ಮುಪ್ಪು ಹೇಗೋ ಹಾಗೆ ಒಂದು ದೇಹವನ್ನು ತೊರೆದು ಮತ್ತೊಂದು ದೇಹವನ್ನು ಪಡೆಯುವ ಸಾವೂ ಸಹ".

ಹುಟ್ಟಿದ ಮಗು ಬೆಳೆದು ತರುಣನಾಗುತ್ತಾನೆ; ತರುಣ ಮುದುಕನಾಗುತ್ತಾನೆ; ಮುಂದೊಂದು ದಿನ ಸತ್ತೂ ಹೋಗುತ್ತಾನೆ. ಸತ್ತವನು ಮತ್ತೆ ಹುಟ್ಟಿಯೇ ಹುಟ್ಟುತ್ತಾನೆ; ಮತ್ತೆ ಹುಟ್ಟು ಮತ್ತೆ ಸಾವು; ಪ್ರತಿಸಾವಿನ ಮುಂದೆ ಹುಟ್ಟು;ಪ್ರತಿಹುಟ್ಟಿನ ಹಿಂದೆ ಸಾವು. ಆದ್ದರಿಂದ ಎಂದೂ ಅದಕ್ಕೋಸ್ಕರ ಅಳಬೇಕಿಲ್ಲ.

*****

---

೧. ನ ತ್ವೇವಾಹಂ ಜಾತು ನಾಸಂ ನ ತ್ವಂ ನೇಮೇ ಜನಾಧಿಪಾಃ।
ನ ಚೈವ ನ ಭವಿಷ್ಯಾಮಃ ಸರ್ವೇ ವಯಮತಃ ಪರಮ್ ॥ – ಗೀತಾ(೨/೧೨)

# ದೇಹ ಬೇರೆ; ಆತ್ಮ ಬೇರೆ

'ದೇಹವೇ ಜೀವ; ದೇಹದಿಂದ ಬೇರೆಯಾದ ಚೇತನವೇ ಇಲ್ಲ' ಎಂದು ಕೆಲವರು ವಾದಿಸುವುದುಂಟು, ಕಣ್ಣಿಗೆ ಕಾಣುವ ದೇಹವನ್ನು ಮಾತ್ರ ಒಪ್ಪಿದರೆ ಸಾಕು, ಕಾಣದ ಚೇತನವನ್ನು ಏಕೆ ಒಪ್ಪಬೇಕು ' ಎಂಬುದು ಅವರ ವಿಚಾರ; ಆದರೆ ದೇಹವನ್ನು ಹೊಂದಿದ ಯಾರಿಗೂ 'ತಾನೇ ದೇಹ, ದೇಹದಿಂದ ತಾನು ಬೇರೆಯಲ್ಲ' ಎಂಬ ಅನುಭವ ಬಂದಿಲ್ಲ, ದೇಹವನ್ನೇ ಆತ್ಮ ಎಂದು ಹೇಳುವವರಿಗೂ ಬದಲಾಗಿ 'ತನ್ನ ದೇಹ' ಎಂಬುದಾಗಿ 'ದೇಹದಿಂದ ತಾನು ಬೇರೆ' ಎಂದೇ ಸಕಲರ ಅನುಭವವೂ ಇದೆ. ಅದರೊಂದಿಗೆ ಮತ್ತೊಬ್ಬರೊಂದಿಗೆ ವ್ಯವಹರಿಸುವ ಪ್ರತಿಯೊಬ್ಬನಿಗೂ ಗೊತ್ತಿರುತ್ತದೆ, 'ತಾವು ವ್ಯವಹರಿಸುತ್ತಿರುವುದು ದೇಹದ ಒಳಗಿನ ಆತ್ಮದೊಂದಿಗೇ ಹೊರತು ಜಡವಾದ ದೇಹದೊಂದಿಗೆ ಅಲ್ಲ'.

ಮಲಗಿದವನೊಂದಿಗೆ ಅನ್ಯತ್ರ ಗಮನಕೊಟ್ಟವನೊಂದಿಗೆ ವ್ಯವಹರಿಸದಿರುವುದು ಸಹ ಇದಕ್ಕೆ ಪೋಷಕವಾಗಿದೆ; ಹುಚ್ಚುಹಿಡಿದವನ ಬಗ್ಗೆಯೂ ಹಾಗೆಯೇ; ಒಬ್ಬ ಚೇತನನಿಗೆ ಹುಚ್ಚು ಎನ್ನುವರೇ ಹೊರತು ಅವನ ದೇಹಕ್ಕೆ ಎಂದಲ್ಲ.

ಬಾಲ್ಯ, ಕೌಮಾರ, ಯೌವನ, ಮುಪ್ಪು ಮೊದಲಾದ ಅವಸ್ಥೆಗಳು ದೇಹಕ್ಕೆ ಉಂಟಾಗುವಾಗಲೂ, ಅವೆಲ್ಲವುಗಳ ಹಿಂದೆ ಬದಲಾಗದ ಒಂದು ಚೇತನ ಇದ್ದೇ ಇರುವುದು ಸಹ ಎಲ್ಲರ ಅನುಭವಕ್ಕೂ ಬಂದಿದೆ.

ಜ್ಞಾನ, ಅಜ್ಞಾನ, ಸುಖ, ದುಃಖ ಮೊದಲಾದವುಗಳು ಎಂದೂ ದೇಹಕ್ಕೆ ಬರುವ ಅನುಭವಗಳಲ್ಲ; ಅಷ್ಟೇ ಏತಕ್ಕೆ ಯಾವುದೇ ಅನುಭವವೂ ಸಹ ಜಡದೇಹಕ್ಕೆ ಬರುವುದೇ ಇಲ್ಲ, ಕಣ್ಣು, ಕೈ, ಕಾಲು, ಕಿವಿ ಮೊದಲಾದ ಯಾವ ಅಂಗಗಳು ಊನವಾಗಿದ್ದರೂ, ಅಂತಹವನನ್ನು 'ಶವ' ಎನ್ನುವುದಿಲ್ಲ, ಆದರೆ ಅವೆಲ್ಲ ಇದ್ದೂ ಒಳಗೆ ಚೇತನವಿಲ್ಲವಾದಾಗ ಅದನ್ನು ಬರೀ 'ದೇಹ' ಎನ್ನುತ್ತಾರೆ. 'ಶವ' ಎನ್ನುತ್ತಾರೆ; ಎಂದರೆ ಶವ ದೇಹ ಮಾತ್ರ, ಒಳಗೆ ಚೇತನವಿರುವುದಿಲ್ಲ.

ಅಂತ್ಯಸಂಸ್ಕಾರವನ್ನು ದೇಹಕ್ಕೆ ಎನ್ನುವರೇ ಹೊರತು ಜೀವಕ್ಕೆ ಅಲ್ಲ, ದೇಹವೇ ಜೀವವಾಗಿದ್ದಲ್ಲಿ ಮೃತದೇಹವನ್ನು ಯಾರೂ ಸುಡುತ್ತಿರಲಿಲ್ಲ, ಹೂಳುತ್ತಿರಲಿಲ್ಲ, ಶವ ಕೆಡುತ್ತದೆ, ಕೊಳೆಯುತ್ತದೆ, ಬೆಳೆಯುವ ಪ್ರಶ್ನೆಯಂತೂ ಇಲ್ಲವೇ ಇಲ್ಲ, ಆ ದೇಹವೇ ಜೀವವಾಗಿದ್ದಲ್ಲಿ ಚಿಕ್ಕ ಮಗು ಸತ್ತಾಗ ಅದರ ದೇಹವನ್ನು ಸುರಕ್ಷಿತವಾಗಿರಿಸಿದಲ್ಲಿ ಅದು ಸಹ ಬೆಳೆದು ತಾರುಣ್ಯ, ವೃದ್ಧಾಪ್ಯಗಳನ್ನು ಹೊಂದಬೇಕಿತ್ತು.

ಇಂತಹ ಅನೇಕ ವಿಚಾರಗಳನ್ನು ಮುಂದಿಟ್ಟು ಶಾಸ್ತ್ರಗಳು ದೇಹದಿಂದ ಭಿನ್ನವಾದ ಆತ್ಮನ ಅಸ್ತಿತ್ವವನ್ನು ಸಾಧಿಸಿವೆ.

ಅಂತೂ ದೇಹ ಬೇರೆ, ಜೀವ ಬೇರೆ, ಆತ್ಮಕ್ಕೆ ಸಾವಿಲ್ಲ, ದೇಹಕ್ಕೆ ಸಾವು ತಪ್ಪಿದ್ದಲ್ಲ, ಯುದ್ಧವಾಗದಿದ್ದರೂ, ರೋಗರುಜಿನಗಳು ಬಾರದಿದ್ದರೂ, ಯಾರೂ ಕೊಲ್ಲದಿದ್ದರೂ ಸಾವು ಮಾತ್ರ ತಪ್ಪಿದ್ದಲ್ಲ.

ಕೆಲವರು ತಿಳಿದಿರುತ್ತಾರೆ, ಇವನಿಗೆ ಕ್ಯಾನ್ಸರ್, ಬದುಕುವುದಿಲ್ಲ, ಇವನಿಗೆ ಕ್ಷಯ ಬದುಕುವುದಿಲ್ಲ ಎಂದು; ಆದರೆ ಗೀತೆ ಹೇಳುತ್ತದೆ; ಸಾಯಲು ಇವಾವೂ ಬೇಕಿಲ್ಲ, ಇವಾವೂ ಇಲ್ಲದೆಯೂ ಮನುಷ್ಯನು ಸತ್ತೇ ಸಾಯುತ್ತಾನೆ; ಹುಟ್ಟಿರುವ ಒಂದೇ ಕಾರಣಕ್ಕೆ ಸಾಯುತ್ತಾನೆ ಸಹ[೧].

ಹೇಗೂ ಸಾಯುತ್ತಾರೆ ಎಂಬ ಕಾರಣದಿಂದ ಎಂದೋ ಸಾಯುವವರನ್ನು ಇಂದೇ ಕೊಲ್ಲುವುದೇ? ಹಾಗಲ್ಲ, ಇವರು ಎಂದೋ ಸಾಯಬೇಕಾಗಿದ್ದರೂ, ಈಗಲೇ ಸಾಯಬೇಕಾದ ಪಾತಕವನ್ನು ಮಾಡಿರುವುದರಿಂದ ಇನ್ನು ಬದುಕಿರಬಾರದು. ಹೇಗೂ ನಿವೃತ್ತನಾಗುತ್ತಾನೆ ಎಂಬ ಕಾರಣದಿಂದ ಭ್ರಷ್ಟ ಅಧಿಕಾರಿಯ ಮೇಲೆ ಕ್ರಮ ಕೈಗೊಳ್ಳದಿರಲು, ಕಡ್ಡಾಯವಾಗಿ ನಿವೃತ್ತಿಗೊಳಿಸದಿರಲು ಸಾಧ್ಯವೇ?

ಇವರಿಗೆ ಬದುಕುವ ಹಕ್ಕು ಇಲ್ಲದಿರಬಹುದು, ಸಾವು ಈಗಲೇ ಇವರಿಗೆ ಅನಿವಾರ್ಯವಾಗಿರಬಹುದು; ಆದರೆ ತಾವೇ ಏತಕ್ಕೆ ಇವರನ್ನು ಕೊಲ್ಲಬೇಕು ? ಎಂಬ ಅರ್ಜುನನ ಪ್ರಶ್ನೆಗೂ ಭಗವಂತ ಉತ್ತರಿಸುತ್ತಾನೆ.

'ಹೌದು; ಇದು ಪಾಂಡವಗೇ ಮಾಡಬೇಕಾದ ಕೆಲಸ, ಏಕೆಂದರೆ ಅವರು ಬೇರೆ ಯಾರೋ ಅಲ್ಲ; ಕ್ಷತ್ರಿಯರು, ರಾಜಮನೆತನದವರು, ಕುರುವಂಶದವರು; ಭರತ, ಪುರು ಮೊದಲಾದ ಚಕ್ರವರ್ತಿಗಳ ಮನೆತನದಲ್ಲಿ ಬಂದವರು ದುಷ್ಟರನ್ನು ಶಿಕ್ಷಿಸುವ ಹೊಣೆ ಹೊತ್ತವರು. ಕಳ್ಳ, ಕೊಲೆಗಡುಕರನ್ನು ಬೇರೆ ಯಾರಾದರೂ ಹಿಡಿಯಲಿ ಎಂದು ಪೊಲೀಸರೇ ದೂರ ಸರಿಯಬಹುದೇ?

ದುರ್ಯೋಧನಾದಿಗಳು ಬರೀ ದುಷ್ಟರಲ್ಲ, ಜಗತ್ತು ಕಂಡ ಮಹಾದುಷ್ಟರು; ದ್ರೌಪದೀ ವಸ್ತ್ರಾಪಹರಣದಂತಹ ಹೀನ ಕೃತ್ಯಕ್ಕೆ ಪ್ರಯತ್ನಿಸಿದ ಮಹಾಪಾತಕಿಗಳು; ಬಂಧುಗಳೆಂಬ ಒಂದೇ ಕಾರಣ ಅವರನ್ನು ಶಿಕ್ಷಿಸದಿರಲು ಕಾರಣವಾಗುವುದಾದಲ್ಲಿ, ಬಂಧುಗಳಲ್ಲವೆಂಬ ಒಂದೇ ಕಾರಣ ಇತರ ದುಷ್ಟರನ್ನು ಶಿಕ್ಷಿಸಲು ಕಾರಣವಾಗಬೇಕೆ?

*****

---

೧. ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ।
ತಸ್ಮಾದಪರಿಹಾರ್ಯೇऽರ್ಥೇ ನ ತ್ವಂ ಶೋಚಿತುಮರ್ಹಸಿ॥ (ಗೀತಾ ೨/೨೭)

## ಅಭಿಮಾನವೇ ದುಃಖದ ಮೂಲ

ಜೀವ ಮತ್ತು ದೇಹಗಳು ಭಿನ್ನವಾಗಿರಬಹುದು; ಜೀವ ನಿತ್ಯನೂ ಇರಬಹುದು; ಅವನಿಗೆ ಒಂದು ದೇಹವು ಹೋಗಿ ಮತ್ತೊಂದು ದೇಹವು ಬರಲೂಬಹುದು. ಆದರೆ ಸಾವು ಸಂಭವಿಸಿದಾಗ ಆಯಾ ಜೀವರ ಜೊತೆ ವ್ಯವಹರಿಸಲು ಮುಖ್ಯ ಮಾಧ್ಯಮವಾದ ದೇಹವೇ ನಾಶವಾಗಿರುವುದರಿಂದ ನಮಗೆ ಅವರ ಸಂಪರ್ಕವು ತಪ್ಪಿಹೋಗುತ್ತದೆ. ಅವರ ದರ್ಶನ, ಸ್ಪರ್ಶನ ಮೊದಲಾದ ಯಾವ ವ್ಯವಹಾರಗಳೂ ನಮಗೆ ಇಲ್ಲವಾಗುತ್ತವೆ. ಆದ್ದರಿಂದ ಅದಕ್ಕಾಗಿ ದುಃಖಿಸಬಹುದಲ್ಲ ಎಂದು ಕೇಳಬಹುದು. ಅದಕ್ಕೆ ಭಗವಂತನ ಉತ್ತರ ಹೀಗಿದೆ.

"ಅರ್ಜುನ! ಇಂದ್ರಿಯ ಮತ್ತು ಅವುಗಳ ವಿಷಯಗಳ ಸಂಪರ್ಕವಷ್ಟೇ ಎಂದಿಗೂ ಸುಖದುಃಖಾದಿಗಳಿಗೆ ಕಾರಣವಾಗುವುದಿಲ್ಲ. ಅವಕ್ಕೆಲ್ಲ ಮುಖ್ಯಕಾರಣ ಅವುಗಳ ಮೇಲಿರುವ ಅಭಿಮಾನವೇ ಆಗಿದೆ"[೧].

ಇಂದ್ರಿಯ ಮತ್ತು ಅವುಗಳ ಸಂಪರ್ಕವೇ ಸುಖದುಃಖಗಳಿಗೆ ಕಾರಣವಾಗಿದ್ದಲ್ಲಿ ಪ್ರತಿಯೊಬ್ಬರಿಗೂ ಅವುಗಳ ಪರಿಣಾಮ ಒಂದೇ ತೆರನಾಗಬೇಕಿತ್ತು. ಪ್ರತಿವಸ್ತುವಿನ ಸಂಪರ್ಕವೂ ಪ್ರತಿಯೊಬ್ಬರಿಗೂ ಒಂದೇ ತೆರನಾದ ಅನುಭವವನ್ನು ಉಂಟುಮಾಡಬೇಕಿತ್ತು. ಆದರೆ ಲೋಕದಲ್ಲಿ ಎಲ್ಲೂ ಹಾಗೆ ಕಂಡಿಲ್ಲ. ಒಂದೇ ಸಾವು ಕೆಲವರಿಗೆ ಅಪ್ರಿಯವೆನ್ನಿಸಿದರೆ ಮತ್ತೆ ಕೆಲವರಿಗೆ ಅದು ಪ್ರಿಯವೆನ್ನಿಸಬಹುದು. ಮತ್ತೆ ಕೆಲವರಿಗೆ ಯಾವುದೇ ಭಾವನೆಯನ್ನು ತಂದು ಕೊಡದಿರಬಹುದು. ಇದರ ರಹಸ್ಯವೇನು? ಇದು ಜಗತ್ತಿನಲ್ಲಿ ನಿತ್ಯ ನಡೆಯುತ್ತಿರುವ ಸಂಗತಿಯಾದರೂ ಇದನ್ನು ಸಮರ್ಪಕವಾಗಿ ವಿವರಿಸಿದ ಶ್ರೇಯಸ್ಸು ಮಾತ್ರ ಭಗವದ್ಗೀತೆಯದೇ ಆಗಿದೆ.

ಯಾವುದೇ ರೀತಿಯ ಸುಖ ದುಃಖಗಳು ಸಂಭವಿಸಿದಾಗಲೂ ಅವುಗಳಿಗೆ ಸಂಬಂಧಿಸಿದ ವಸ್ತುಗಳ ಪಾತ್ರಗಳಿಗಿಂತ ಮಿಗಿಲಾಗಿ ಅವುಗಳ ಬಗ್ಗೆ ಆಯಾ ವ್ಯಕ್ತಿಗೆ ಇರುವ ಅಭಿಮಾನವು ಅದಕ್ಕೆ ಮುಖ್ಯಕಾರಣವಾಗಿರುತ್ತದೆ.

ಸಾವು ಮೊದಲಾದ ಯಾವುದೇ ಕಾರ್ಯ ಸಹ ಎಂದೂ ತನ್ನಷ್ಟಕ್ಕೇ ಸುಖವನ್ನಾಗಲೀ ದುಃಖವನ್ನಾಗಲೀ ಉಂಟುಮಾಡಲಾರದು. ಸತ್ತ ವ್ಯಕ್ತಿಯ ಬಗ್ಗೆ ಪ್ರೀತಿಯಿದ್ದಲ್ಲಿ ಆ ಸಾವು

೧. ಮಾತ್ರಾಸ್ಪರ್ಶಾಸ್ತು ಕೌಂತೇಯ ಶೀತೋಷ್ಣಸುಖದುಃಖದಾಃ।
ಆಗಮಾಪಾಯಿನೋಽನಿತ್ಯಾಸ್ತಾಂಸ್ತಿತಿಕ್ಷಸ್ವ ಭಾರತ॥ -ಗೀತಾ (೨/೧೪)
ಅತಶ್ಚ ದೇಹಾದ್ಯಾತ್ಮಭ್ರಮ ಏವ ಸುಖದುಃಖಕಾರಣಂ। ಅನ್ವಯವ್ಯತಿರೇಕಾಭ್ಯಾಂ ಅಭಿಮಾನಸಹಿತಾ ಏವ ಮಾತ್ರಾಸ್ಪರ್ಶಾಃ ಸ್ವಸ್ವವಿಷಯಧೀದ್ವಾರಾ ಅಭಿಮಾನಹೀನಮಾತ್ರಾಸ್ಪರ್ಶಾನಾಂ ಸುಖಾದಿದತ್ವಾಭಾವಾತ್। ಅಭಿಮಾನತ್ಯಾಗೇನ ತಾನ್ ಮಾತ್ರಾಸ್ಪರ್ಶಾನ್ ತಿತಿಕ್ಷಸ್ವ ವಿಫಲೀಕುರು। ಸುಖದುಃಖಾದಿದಾ ಯಥಾ ನ ಭವಂತಿ ತಥಾ ಕುರು॥ -ಗೀತಾವಿವೃತಿ

ದುಃಖಕರವಾಗುತ್ತದೆ; ದ್ವೇಷವಿದ್ದಲ್ಲಿ ಅದೇ ಸಾವು ಸುಖಕರವೆನಿಸುತ್ತದೆ. ಎರಡೂ ಇಲ್ಲದವನ ಬಗ್ಗೆ ಸಾವು ಒಂದು ಸಾಮಾನ್ಯ ಕ್ರಿಯೆ ಮಾತ್ರವೇ ಆಗಿ ಬಿಟ್ಟು ಸುಖ ಮತ್ತು ದುಃಖಗಳಲ್ಲಿ ಯಾವುದನ್ನೂ ಉಂಟುಮಾಡುವುದಿಲ್ಲ.

ಅದೇ ರೀತಿ ಕೆಲವೊಮ್ಮೆ ಸುಖಕರವಾಗಬಹುದಾಗಿದ್ದ ವಿಷಯವು ಬೇರೆ ಪ್ರಸಂಗದಲ್ಲಿ ದುಃಖಕರವಾಗಬಹುದು. ಅದರಂತೆ ಕೆಲವು ಸನ್ನಿವೇಶದಲ್ಲಿ ದುಃಖಕರವಾಗಬಹುದಾಗಿದ್ದ ವಿಷಯವು ಕೆಲವೊಮ್ಮೆ ಸುಖಕರವಾಗಬಹುದು. ಅದೇ ರೀತಿ ಕೆಲವೊಮ್ಮೆ ಎರಡಕ್ಕೂ ಕಾರಣವಾಗದೆ ತಟಸ್ಥ ಮನೋಭಾವವೇ ಉಳಿಯಬಹುದು. ಉದಾಹರಣೆಗೆ ತನ್ನದಾಗಿರುವ ವಾಹನವೊಂದಕ್ಕೆ ಅಪಘಾತವಾದಾಗ ದುಃಖ ಉಂಟಾಗುತ್ತದೆ. ಆದರೆ ಅದೇ ವಾಹನವನ್ನು ಮತ್ತೊಬ್ಬರಿಗೆ ಮಾರಿಯಾದಮೇಲೆ ಅಪಘಾತ ಸಂಭವಿಸಿದಾಗ ಅದು ಈಗ ತನ್ನದಾಗಿಲ್ಲ ಎಂಬ ಭಾವವೇ ಸುಖಕ್ಕೆ ಕಾರಣವಾಗಬಹುದು.

ಯಾರದೋ ಮಗು ಬಾವಿಯಲ್ಲಿ ಬಿತ್ತು ಎಂದು ತಿಳಿದಾಗ ಉಂಟಾಗುವ ಕಾತರ ಅದು ತನ್ನದೇ ಮಗು ಎಂದು ಅನಂತರ ತಿಳಿದಾಗ ಅಪಾರ ದುಃಖಕ್ಕೆ ಕಾರಣವಾಗುತ್ತದೆ. ಅದೇ ರೀತಿ ಮನೆಗೆ ಬೆಂಕಿ ಬಿದ್ದಾಗ ತನ್ನವರಾರೂ ಅದರೊಳಗೆ ಸಿಲುಕಿಕೊಳ್ಳದೆ ಇದ್ದಾಗ ದುಃಖದ ಒತ್ತಡ ಕಡಿಮೆಯಾಗುತ್ತದೆ; ಮಾತ್ರವಲ್ಲದೆ ಆ ಮನೆ ಮತ್ತು ಅದರೊಳಗಿನ ಪದಾರ್ಥಗಳಿಗೆಲ್ಲ ವಿಮೆ ಮಾಡಿಸಿದ್ದಲ್ಲಿ, ದುಃಖ ಎಷ್ಟೂ ಆಗದೆ ಹೋಗಬಹುದು. ಹೆಚ್ಚು ಹಣಕ್ಕೆ ವಿಮೆ ಮಾಡಿಸಿದ್ದರಂತೂ ಹೆಚ್ಚಿನ ಸುಖವೇ ಆಗಿಬಿಡುತ್ತದೆ.

ಇವನ್ನೆಲ್ಲ ಪರಿಶೀಲಿಸಿದಾಗ ವಸ್ತುಗಳ ಸಂಪರ್ಕ ಮಾತ್ರವೇ ಸುಖ ದುಃಖಗಳಿಗೆ ಕಾರಣವಾಗದೆ ಅವುಗಳ ಬಗೆಗಿನ ಅಭಿಮಾನವೇ ಅವಕ್ಕೆಲ್ಲ ಮುಖ್ಯ ಕಾರಣವಾಗುತ್ತದೆ. ಮೇಲ್ನೋಟಕ್ಕೆ ತಂತಿಯಿಂದ 'ಶಾಕ್' ಹೊಡೆದಂತೆ ಕಂಡರೂ ನಿಜಕ್ಕೂ ಆ ಆಘಾತಕ್ಕೆ ಕಾರಣ ಒಳಗಿನ ವಿದ್ಯುತ್ತೇ ಹೊರತು ಬರೀ ತಂತಿಯಲ್ಲ.

ಹೀಗೆ ಅಭಿಮಾನವೇ ಸುಖದುಃಖಗಳ ಮೂಲಕಾರಣವಾಗಿರುವುದರಿಂದ ಅದನ್ನು ತ್ಯಜಿಸಿದವರಿಗೆ ಅದು ಎಂದೂ ಆಘಾತಕ್ಕೆ ಕಾರಣವಾಗಬೇಕಿಲ್ಲ. ವಿದ್ಯುತ್ ಇಲ್ಲದ ತಂತಿಯು ಎಂದೂ ಆಘಾತಕ್ಕೆ ಕಾರಣವಾಗಲಾರದಷ್ಟೇ.

*****

## ಅಭಿಮಾನ ತ್ಯಾಗಕ್ಕೆ ತತ್ತ್ವಜ್ಞಾನವೇ ಉಪಾಯ

ಇಂತಹ ಅಭಿಮಾನವನ್ನು ಗೆಲ್ಲುವುದು ಸುಖದುಃಖಗಳನ್ನು ಗೆಲ್ಲುವ ಸಾಧನವೆಂದಂತಾಯಿತು. ಹಾಗಿದ್ದಲ್ಲಿ ಈ ಅಭಿಮಾನವನ್ನು ಗೆಲ್ಲುವುದೆಂತು? ಇದಕ್ಕೆ ಭಗವಂತ ಉತ್ತರಿಸುತ್ತಾನೆ : 'ತಾನ್ ತಿತಿಕ್ಷಸ್ವ ಭಾರತ' – (೨/೧೪)

ಈ ಮಾತನ್ನು ಕೆಲವರು ಇಂದ್ರಿಯ ಮತ್ತು ವಿಷಯಗಳ ಸಂಪರ್ಕವನ್ನು ಸಹಿಸಿ-ಕೊಳ್ಳಬೇಕು ಎಂಬುದಾಗಿ ಅರ್ಥೈಸಿರುವರುಂಟು. ಆದರೆ ಅದು ತಲೆನೋವು, ಹೊಟ್ಟೆ-ನೋವು ಎಂದು ತನ್ನ ಬಳಿಬರುವ ರೋಗಿಗೆ ವೈದ್ಯನು ಅದನ್ನು ಸಹಿಸಿಕೊಳ್ಳುವು-ದೊಂದೇ ಪರಿಹಾರ ಎಂದು ಉಪದೇಶಿಸಿದಂತೆ ಆಗುತ್ತದೆ; ಆದ್ದರಿಂದ ಅದು ಗ್ರಾಹ್ಯವೆನ್ನಿಸದು.

ಶ್ರೀಮಧ್ವಾಚಾರ್ಯರು ಇದಕ್ಕೆ ನೀಡಿರುವ ಅಪೂರ್ವ ವ್ಯಾಖ್ಯೆ ಹೀಗಿದೆ : ''ವಿಫಲೀಕುರು'' ಎಂದರೆ ಇಂತಹ ಅಭಿಮಾನವನ್ನು ತೊರೆಯುವುದೇ ಅದಕ್ಕೆ ನಿಜವಾದ ಪರಿಹಾರ.

ಅಭಿಮಾನವನ್ನು ತೊರೆಯಲು ಸಹ ತತ್ತ್ವಜ್ಞಾನದ ಹೊರತು ಬೇರಾವ ಮಾರ್ಗವೂ ಇಲ್ಲ. ವಸ್ತುಗಳ ಬಗ್ಗೆ ಸರಿಯಾದ ತಿಳುವಳಿಕೆ ಇಲ್ಲದಿರುವುದೇ ಅವುಗಳ ಬಗ್ಗೆ ಅಭಿಮಾನ ಮೂಡಲು ಕಾರಣವಾಗಿ ಕೊನೆಗೆ ದುಃಖದಲ್ಲಿ ಪರ್ಯಾವಸಾನವಾಗುವುದು.

ಮಗುವಿನ ಕೈಯಲ್ಲಿನ ವಿಷದ ಸೀಸೆಯನ್ನು ತಾಯಿಯು ಕಿತ್ತಿಕೊಂಡಾಗ ಅದರ ಹಿನ್ನೆಲೆಯನ್ನು ಅರಿಯದ ಮಗು ದುಃಖದಿಂದ ಅಳತೊಡಗುತ್ತದೆ. ಹಾಗೆ ಕಿತ್ತುಕೊಂಡ ತಾಯಿಯ ಮೇಲೆ ಕೋಪಿಸಿಕೊಳ್ಳುವುದು. ಇದಕ್ಕೆ ಆ ಸೀಸೆಯಲ್ಲಿನ ವಿಷ ಅನರ್ಥಕ್ಕೆ ಕಾರಣ ಎಂಬ ಅರಿವಿನ ಅಭಾವವೇ ಆಗಿದೆ. ಅದು ಅದರ ಮೇಲಿನ ಅಭಿಮಾನಕ್ಕೆ ಕಾರಣವಾಗಿ ಇಂತಹ ದುಃಖ ಮತ್ತು ಕೋಪಗಳಿಗೆ ಕಾರಣವಾಗುವುದು. ಅದು ಮಾರಕವೆಂದು ತಿಳಿದಾಗ ಮಾತ್ರ ಇಂಥ ಅಭಿಮಾನವು ಮಾಯವಾಗಿ ದುಃಖವು ದೂರವಾಗುವುದು. ನೋವಿನ ಜಾಗದಲ್ಲಿ ನಲಿವು ಮೂಡುವುದು.

ಆದ್ದರಿಂದ ಅರ್ಜುನನು ಸುಖದುಃಖಗಳನ್ನು ಗೆಲ್ಲಲಿಕ್ಕಾಗಿ ಕರ್ತವ್ಯ ಕರ್ಮವಾದ ಯುದ್ಧವನ್ನು ತೊರೆಯಬೇಕಿಲ್ಲ. ಭೀಷ್ಮದ್ರೋಣಾದಿಗಳ ಮೇಲಿನ ಅಭಿಮಾನವನ್ನು ತೊರೆದರೆ ಸಾಕು. ಅದನ್ನು ತೊರೆಯಲು ಅವರು 'ಅಶೋಚ್ಯರು' ಎಂದು ಹಿಂದೆ ನಿರೂಪಿಸಿದ್ದನ್ನು ಅರಿಯಲೇ ಬೇಕು.

ಜೀವನಿತ್ಯತ್ವವನ್ನು ಅರಿತರೆ ಜೀವನಾಶ ನಿಮಿತ್ತವಾದ ಶೋಕ ಇರುವುದಿಲ್ಲ; ಸಾವು ಎಂದರೆ ದೇಹಾಂತರ ಪ್ರಾಪ್ತಿ ಎಂದು ತಿಳಿದರೆ ದೇಹನಾಶ ನಿಮಿತ್ತ ಶೋಕ ಇರುವುದಿಲ್ಲ; ಹೀಗೆ ಅಭಿಮಾನ ತೊರೆದವನಿಗೆ ಯಾವ ರೀತಿಯಲ್ಲೂ ಶೋಕಕ್ಕೆ ಅವಕಾಶವೇ ಇರುವುದಿಲ್ಲ ಎಂದು ಭಾವ.

ವಿದ್ಯುತ್ತಿನ ಆಘಾತವನ್ನು ತಪ್ಪಿಸಿಕೊಳ್ಳಲು ತಂತಿಯನ್ನು ಕತ್ತರಿಸಿಹಾಕಬೇಕಾಗಿಲ್ಲ. ಅದರ ಬಳಕೆಯನ್ನು ನಿಲ್ಲಿಸಬೇಕಾಗಿಲ್ಲ; ಅದರೊಳಗೆ ಹರಿಯುವ ವಿದ್ಯುತ್ ಪ್ರವಾಹವನ್ನು ನಿಲ್ಲಿಸಿದರೆ ಸಾಕು; ಹೀಗೆ ಸುಖದುಃಖಗಳಿಗೆ ಮುಖ್ಯಕಾರಣವು ವಸ್ತುಗಳ

ಮೇಲಿನ ಅಭಿಮಾನವೇ ಆಗಿದೆ[1] ಎಂದು ತಿಳಿಸಿದ ಭಗವದ್ಗೀತೆಯೇ ತತ್ತ್ವಜ್ಞಾನದ ಮೂಲಕ ಅಂತಹ ಅಭಿಮಾನವನ್ನು ಗೆದ್ದು ಸುಖಿಯಾಗಬೇಕು ಎಂಬ ಮೂಲಭೂತ ಉಪಾಯವನ್ನು ತಿಳಿಸಿ ಸಾಧಕರ ಜೀವನಕ್ಕೆ ಹೊಸ ಬೆಳಕನ್ನೇ ನೀಡಿದೆ.

*****

## ಸದಭಿಮಾನವು ದುಃಖಹೇತುವಲ್ಲ

ಇಲ್ಲಿ ಒಂದು ಮಾತನ್ನು ಗಮನಿಸಬೇಕು; ಯಾವುದೇ ಅಭಿಮಾನವನ್ನು ಹೊಂದದ ಮನುಷ್ಯನಿಗೆ ಯಾವ ರೀತಿಯಲ್ಲೂ ಜೀವನವನ್ನು ನಿರ್ವಹಿಸಲು ಸಾಧ್ಯವಾಗುವುದಿಲ್ಲ; ಅಭಿಮಾನವನ್ನು ತೊರೆದ ಜೀವನ ನಿರ್ಜೀವ ವ್ಯವಹಾರವೆನ್ನಿಸಿ ಬದುಕಿಗೆ ಅರ್ಥವೇ ಇಲ್ಲದಂತಾಗಿಸುತ್ತದೆ; ಎಂದ ಮೇಲೆ ಅಭಿಮಾನ ತ್ಯಾಗವು ಎಷ್ಟರ ಮಟ್ಟಿಗೆ ವ್ಯವಹಾರ್ಯ ಎಂಬ ಪ್ರಶ್ನೆ ಉದ್ಭವಿಸಬಹುದು. ಅದಕ್ಕೂ ಭಗವದ್ಗೀತೆ ಸೂಕ್ತ ಉತ್ತರವನ್ನಿತ್ತಿದೆ.

ಅಭಿಮಾನವು ಸದಭಿಮಾನ, ದುರಭಿಮಾನ ಎಂಬುದಾಗಿ ಎರಡು ಬಗೆ. ಪ್ರತಿಯೊಂದು ವಸ್ತುವನ್ನೂ ಸರಿಯಾಗಿ ಅರ್ಥಮಾಡಿಕೊಂಡು ಅದರ ಇತಿಮಿತಿಗೆ ತಕ್ಕಂತೆ ಅವುಗಳ ಬಗ್ಗೆ ತೋರುವ ಅಭಿಮಾನವು ಸದಭಿಮಾನವೆನ್ನಿಸುತ್ತದೆ. ನಮ್ಮ ಜನ, ನಮ್ಮ ದೇಶ ಎಂಬುದಾಗಿ ದೇಶ ಮತ್ತು ಜನಗಳ ಬಗ್ಗೆ ಇರುವ ಅಭಿಮಾನ ಇಂತಹ ಸದಭಿಮಾನವಾಗಿದೆ. ಇದನ್ನು ಎಂದೂ ತೊರೆಯಬೇಕಿಲ್ಲ; ಇದು ವಸ್ತುಗಳ ಬಗೆಗಿನ ಸರಿಯಾದ ತಿಳುವಳಿಕೆಯೊಂದಿಗೆ ವಿಶಾಲ ದೃಷ್ಟಿಯನ್ನೂ ಸಹ ಹೊಂದಿಸಿ ವ್ಯಕ್ತಿಯ ನಿಜವಾದ ವಿಕಾಸಕ್ಕೆ ಕಾರಣವಾಗುವ ಅಪೂರ್ವ ಸಾಧನವೇ ಆಗಿದೆ.

ಆದರೆ 'ನಾನು, ನನ್ನದು' ಎಂಬ ಸಂಕುಚಿತ ದೃಷ್ಟಿಯಿಂದ ವಸ್ತುವಿಗೆ ಸಲ್ಲದ ಬೆಲೆಯನ್ನು ಕೊಟ್ಟು ಲೋಕವಂಚನೆ ಮತ್ತು ಆತ್ಮವಂಚನೆಗಳಿಗೆ ಕಾರಣವಾಗುವ ಅಭಿಮಾನವು ದುರಭಿಮಾನವೆನ್ನಿಸುತ್ತದೆ. ಸರಿಯಾಗಿ ಬರೆಯದಿದ್ದರೂ ತನ್ನ ಮಗ ಉತ್ತೀರ್ಣನಾಗಲೇಬೇಕು; ತಪ್ಪು ಮಾಡಿದ್ದರೂ ತನ್ನವರಿಗೆ ಶಿಕ್ಷೆಯಾಗಲೇಬಾರದು. ತನಗಾಗದ ಜನಗಳು ಎಷ್ಟು ಉತ್ತಮರಾಗಿದ್ದರೂ ಅವರಿಗೆ ಒಳಿತಾಗಬಾರದು; ಎಂಬ ಅಭಿಮಾನ ಇದಕ್ಕೆ ನಿದರ್ಶನ. ಇಂಥ ದುರಭಿಮಾನವನ್ನು ಮಾತ್ರ ಸದಾ ತ್ಯಜಿಸಲೇಬೇಕು ಎಂಬುದೇ ಭಗವದ್ಗೀತೆಯ ಆಶಯ.

*****

## ಸತ್ಕಾರ್ಯದಿಂದ ಎಂದೂ ಕೆಡುಕಾಗದು

ದರ್ಶನ ಸ್ಪರ್ಶನಾದಿಗಳಿಗೆ ಮಾಧ್ಯಮವಾದ ದೇಹವು ಅಳಿದರೂ ಅಭಿಮಾನವನ್ನು ತ್ಯಜಿಸಿದವರಿಗೆ ದುಃಖವಾಗಬೇಕಿಲ್ಲ ಎಂದು ಒಪ್ಪಿದರೂ ಇನ್ನೊಂದು ರೀತಿಯಿಂದ

೧. ಮಾತ್ರಾಸ್ಪರ್ಶಾಸ್ತು ಕೌಂತೇಯ ಶೀತೋಷ್ಣಸುಖದುಃಖದಾಃ।
ಆಗಮಾಪಾಯಿನೋಽನಿತ್ಯಾಸ್ತಾಂಸ್ತಿತಿಕ್ಷಸ್ವ ಭಾರತ॥ -ಗೀತಾ (೨/೧೪)

ಯೋಚಿಸಿದಾಗ ಮತ್ತೊಂದು ಸಂಶಯ ಉದ್ಭವಿಸಬಹುದು. ಇವರೆಲ್ಲ ತಾವಾಗಿಯೇ ಸತ್ತರೆ ಈ ತೆರನಾದ ವಿವೇಚನೆಯಿಂದ ದುಃಖವನ್ನು ಗೆಲ್ಲಬಹುದು. ಆದರೆ ಅವರ ಸಾವು ಈಗ ಅನಿವಾರ್ಯವಲ್ಲ. ಅದು ನಮ್ಮಿಂದಲೇ ಅವರಿಗೀಗ ಉಂಟಾಗುತ್ತಿದೆ. ಎಂದೋ ಸಾಯುವವರು ಎಂದು ತಿಳಿದು ಈಗಲೇ ಕೊಲ್ಲುವುದೆ? ಹೇಗೂ ಸಾಯುತ್ತಾರೆ ಎಂದು ನಾವೇ ಕೊಲ್ಲುವುದೆ? ಇದರಿಂದ ನಮಗೆ ಪಾಪ ಬಂದು ನರಕಾದ್ಯನರ್ಥವು ಲಭಿಸಬಹುದಲ್ಲವೇ ? ಅಲ್ಲದೇ ಭೀಷ್ಮದ್ರೋಣಾದಿಗಳಿಗೆ ಮರಣಾನಂತರ ನರಕವು ಒದಗಿದರೆ ಅದಕ್ಕೆ ನಾವು ಕಾರಣವಾಗುವುದಿಲ್ಲವೆ? ಅದೇ ರೀತಿ ದುರ್ಯೋಧನಾದಿಗಳಿಗೆ ಯುದ್ಧದಲ್ಲಿ ಸಾಯುವುದರಿಂದ ಸ್ವರ್ಗವು ಲಭಿಸುವ ಸಂಭವವಿರಬಹುದಲ್ಲವೇ ? ಅಂತೂ ಈಗಲ್ಲದಿದ್ದರೂ ಪರಲೋಕದಲ್ಲಾದರೂ ದುಃಖಕ್ಕೆ ಕಾರಣವಾಗಬಹುದಾದ ಈ ಯುದ್ಧವನ್ನು ಕೈಬಿಡಬಹುದಲ್ಲವೇ ?

ಈ ಸಮಸ್ಯೆಗೆ ಶ್ರೀಕೃಷ್ಣನು ನೀಡುವ ಉತ್ತರ ಹೀಗಿದೆ. "ಅರ್ಜುನ ! ಸತ್ಕಾರ್ಯದಿಂದ ಎಂದೂ ದುಃಖವಿಲ್ಲ; ದುಷ್ಕಾರ್ಯದಿಂದ ಎಂದೂ ಸುಖವೂ [೧]ಇಲ್ಲ".

ಅರ್ಜುನನು ಅವರನ್ನು ಕೊಲ್ಲುವುದು ನಿಜವಾದರೂ ಅದು ಎಂದೂ ಅವನಿಗೆ ಪಾಪಕ್ಕೆ ಕಾರಣವಾಗುವುದಿಲ್ಲ; ದುಷ್ಟರನ್ನು ನಿಗ್ರಹಿಸುವ ಹೊಣೆಯನ್ನು ಅಂತಹ ಕ್ಷತ್ರಿಯನು ತಾನೇ ಹೊಂದಿರುವುದು. ತನ್ನ ಕರ್ತವ್ಯವನ್ನು ಆಚರಿಸುವಂತಹ ಉತ್ತಮನಿಗೆ ಎಂದೂ ಅನರ್ಥವಾಗುವ ಸಂಭವವೇ ಇಲ್ಲ. ಇನ್ನು ಅವನೀಗ ಕೊಲ್ಲಬೇಕಾಗಿರುವುದು ಸಹ ಯಾರನ್ನೋ ಅಲ್ಲ, ದುರ್ಯೋಧನಾದಿ ಆತತಾಯಿಗಳನ್ನು; ಅವರನ್ನು ಕೊಲ್ಲುವುದು ಪುಣ್ಯಕಾರ್ಯವಾಗುವುದೇ ಹೊರತು ಪಾಪಕಾರ್ಯವಲ್ಲ; ದುರ್ಯೋಧನಾದಿಗಳಂತೆ ಭೀಷ್ಮಾದಿಗಳು ಸಹ ವಧಾರ್ಹರೇ ಆಗಿರುವರು. ಹಿಂದೆ ಹೇಳಿದಂತೆ ಪಾಪಿಗಳಂತೆ ಪಾಪಿಗಳಿಗೆ ಸಹಕಾರವೀಯುವವರೂ ಸಹ ವಧಾರ್ಹರಲ್ಲವೇ.

ಈ ದುರ್ಯೋಧನಾದಿಗಳಿಂದ ಯಾರಿಗೋ ದ್ರೋಹವಾಗಿಲ್ಲ, ಭಗವಂತನಿಗೇ ದ್ರೋಹವಾಗಿದೆ. ಮೇಲ್ನೋಟಕ್ಕೆ ದ್ಯೂತ ಮೊದಲಾದವುಗಳಿಂದ ಪಾಂಡವರಿಗೆ ದ್ರೋಹವಾದಂತೆ ಕಂಡರೂ ನಿಜಕ್ಕೂ ದ್ರೋಹವಾಗಿರುವುದು ಶಾಸ್ತ್ರಗಳಿಗೆ, ಭಗವಂತನಿಗೆ; ಟಿಕೆಟ್ಟಿಲ್ಲದೆ ಬಸ್ ಪ್ರಯಾಣ ಡ್ರೈವರ್ ಕಂಡಕ್ಟರ್‌ಗಳಿಗೆ ಮಾಡಿದ ದ್ರೋಹವಾಗಿರದೆ ಸರಕಾರಕ್ಕೆ ಮತ್ತು ಸಮಾಜಕ್ಕೆ ಮಾಡಿರುವ ದ್ರೋಹವಾಗುವಂತೆ ಇಂತಹ ದೈವದ್ರೋಹಿಗಳನ್ನು ಕೊಲ್ಲುವುದರಿಂದ ನರಕ ಹೊಂದುವ ಭಯವೇ ಇಲ್ಲ.

---

೧. ನಾಸತೋ ವಿದ್ಯತೇಽಭಾವೋ ನಾಭಾವೋ ವಿದ್ಯತೇ ಸತಃ ।
ಉಭಯೋರಪಿ ದೃಷ್ಟೋಽಂತಸ್ತ್ವನಯೋಸ್ತತ್ತ್ವದರ್ಶಿಭಿಃ ॥ – ಗೀತಾ(೨/೧೬)
ನ ಹಿ ಕಲ್ಯಾಣಕೃತ್ ಕಶ್ಚಿತ್ ದುರ್ಗತಿಂ ತಾತ ಗಚ್ಛತಿ । –ಗೀತಾ (೬/೪೦)
ಸದ್ಭಾವವಾಚಿನಃ ಶಬ್ದಾಃ ಸರ್ವೇ ತೇ ಸುಖವಾಚಕಾಃ ।
ಅಭಾವವಾಚಿನಃ ಶಬ್ದಾಃ ಸರ್ವೇ ತೇ ದುಃಖವಾಚಕಾಃ ॥ – ಶಬ್ದನಿರ್ಣಯ (ಗೀತಾತಾತ್ಪರ್ಯ)

ಭೀಷ್ಮದ್ರೋಣಾದಿಗಳು ಉಳಿದಂತೆ ಸಾತ್ವಿಕರು. ತ್ಯಾಗ ಪರೋಪಕಾರಿಗಳಿಗೆ ಹೆಸರಾದವರು, ಶ್ರೇಷ್ಠ ದೈವಭಕ್ತರು. ಆದ್ದರಿಂದ ಅವರು ಯುದ್ಧದಲ್ಲಿ ಹತರಾದರೂ ಅವರಿಗೆ ನರಕದ ಭಯವಿಲ್ಲ.

ಇನ್ನು ಕೌರವರು; ದುಷ್ಟರಾದ ಅವರು ಎಲ್ಲೇ ಸತ್ತರೂ, ಹೇಗೆಯೇ ಸತ್ತರೂ ಯಾರಿಂದಲೇ ಸತ್ತರೂ ಅವರಿಗೆ ಸ್ವರ್ಗ ಲಭಿಸುವ ಸಂಭವವೇ ಇಲ್ಲ; ಮಾತ್ರವಲ್ಲದೆ ನರಕ ಪ್ರಾಪ್ತಿ ತಪ್ಪಿದ್ದೂ ಅಲ್ಲ. ಇದು ಜ್ಞಾನಿಗಳಿಗೆಲ್ಲ ಕಂಡಿರುವ ಪರಮ ಸತ್ಯ.

ಇನ್ನು ಅವನು ಯುದ್ಧದ ದುಷ್ಪರಿಣಾಮಗಳನ್ನು ಕುರಿತು ಆಡಿದ ಮಾತುಗಳೆಲ್ಲ ಅವನ ಸ್ವಕಪೋಲಕಲ್ಪಿತ ವಿಚಾರಗಳೇ ಆಗಿವೆ. ನಿಜಕ್ಕೂ ಕೌರವಾದಿದುಷ್ಟರ ಸಂಹಾರವು ಅವಶ್ಯಕರ್ತವ್ಯವಾದ ಪರಮಧರ್ಮವಾದ್ದರಿಂದ ಈ ಯುದ್ಧದಿಂದ ಯಾವುದೇ ರೀತಿಯ ದುಷ್ಪರಿಣಾಮಕ್ಕೂ ಅವಕಾಶ ಇರುವುದಿಲ್ಲ; ಬದಲಾಗಿ ಖಚಿತವಾಗಿಯೂ ಸತ್ಪರಿಣಾಮವೇ ಉಂಟಾಗುವುದು; ಈ ಬಗ್ಗೆ ಎಂದೂ ಚಿಂತಿಸಬೇಕಿಲ್ಲ.

## ಜೀವನು ಪರಮಾತ್ಮನ ಪ್ರತಿಬಿಂಬ

ಭಗವಂತನಂತೆ ಪ್ರತಿಯೊಬ್ಬ ಜೀವನೂ ನಿತ್ಯನಾಗಿರುವನು ಎಂಬ ಮಾತನ್ನು ಭಗವದ್ಗೀತೆಯು ಅನೇಕ ರೀತಿಯಲ್ಲಿ ಸಮರ್ಥಿಸಿದೆ.

ಜೀವನು ಸ್ವರೂಪತಃ ಅನಾದಿಯೂ, ನಿತ್ಯನೂ ಆಗಿರುವನು. ಸಕಲ ಜೀವರೂ ಪರಮಾತ್ಮನ ಪ್ರತಿಬಿಂಬರು. ಬಿಂಬನಾಗಿರುವ ಪರಮಾತ್ಮನು ಅನಾದಿ ಮತ್ತು ನಿತ್ಯನಾಗಿರುವುದರಿಂದ ಅವನಿಗೆ ಪ್ರತಿಬಿಂಬರಾಗಿರುವ [೧]ಜೀವರು ಸಹ ಅನಾದಿ ಮತ್ತು ನಿತ್ಯರೇ ಆಗಿರುವರು.

ಪ್ರತಿಬಿಂಬವು ನಾಶವಾಗಲು ಬಿಂಬವು ನಾಶವಾಗಬೇಕು. ಇಲ್ಲಿ ಸರ್ವರಿಗೂ ಬಿಂಬನಾಗಿರುವ ಪರಮಾತ್ಮನು ನಿತ್ಯನಾಗಿರುವುದರಿಂದ ಬಿಂಬನಾಶದ ಪ್ರಸಕ್ತಿಯೇ ಇಲ್ಲ. ಇನ್ನು ಉಪಾಧಿನಾಶದಿಂದ ಪ್ರತಿಬಿಂಬನಾಶವಾಗುವ ಸಂಭವವೂ ಇಲ್ಲ. ಏಕೆಂದರೆ ಜೀವರು ಪ್ರತಿಬಿಂಬವಾಗಿರಲು ಉಪಾಧಿಯಾಗಿರುವುದು ಅವರ ಸ್ವರೂಪ ದೇಹವೇ ಹೊರತು ಬಾಹ್ಯದೇಹವಲ್ಲ. ಜೀವನಿಗೆ ಸಂಸಾರದಿಂದ ಬಿಡುಗಡೆ ಹೊಂದುವಾಗ ನಾಶವಾಗುವುದು ಬಾಹ್ಯದೇಹವೇ ಹೊರತು ಸ್ವರೂಪ ದೇಹವಲ್ಲ. ಆದ್ದರಿಂದ ಪ್ರತಿಬಿಂಬನಾದ ಜೀವನ ನಿತ್ಯತ್ವಕ್ಕೆ ಯಾವ ಬಾಧಕವು ಇರದು.

---

೧. ಅಪ್ರಮೇಯೇಶ್ವರಸರೂಪತ್ವಾತ್ । ಅಜಾದಿಲಕ್ಷಣೇಶ್ವರಸರೂಪತ್ವಾತ್ ।
'ಪ್ರತಿಪತ್ತೌ ವಿಮೋಕ್ಷಸ್ಯ ನಿತ್ಯೋಪಾಧ್ಯಾ ಸ್ವರೂಪಯಾ ।
ಚಿದ್ರೂಪಯಾ ಯುತೋ ಜೀವಃ ಕೇಶವಪ್ರತಿಬಿಂಬಕಃ ॥' – ಗೀತಾಭಾಷ್ಯ (೨/೧೮)

ಉಡುಗೆಯೊಳಗೆ ಚರ್ಮದ [1]ದೇಹವಿರುವಂತೆ ಈ ಬಾಹ್ಯದೇಹಗಳೊಳಗೆ ಪ್ರತಿಯೊಬ್ಬ ಜೀವರಿಗೂ ಸ್ವರೂಪದೇಹವಿರುತ್ತದೆ. ಸ್ವರೂಪದೇಹವು ನಿತ್ಯವಾದ್ದರಿಂದ ಮತ್ತು ಅದೇ ಉಪಾಧಿಯೂ ಆಗಿರುವುದರಿಂದ ಜೀವನು ಯಾವ ಕಾರಣದಿಂದಲೂ ಪ್ರತಿಬಿಂಬನಾಗದಿರುವ ಸಂಭವ ಬರುವುದೇ ಇಲ್ಲ. ಪರಮಾತ್ಮನಿಗೆ ಕಿಂಚಿತ್[2] ಸದೃಶನಾಗಿದ್ದು, ಪೂರ್ಣವಾಗಿ ಅವನಿಗೆ ಅಧೀನನಾಗಿರುವನು ಎಂಬುದೇ ಇಲ್ಲಿಯ 'ಪ್ರತಿಬಿಂಬ' ಶಬ್ದದ ಅರ್ಥ.

[3]ಜೀವನ ಸ್ವರೂಪದೇಹಕ್ಕೆ ಎಂದೂ ಹುಟ್ಟುಸಾವುಗಳಿಲ್ಲ; ಸ್ವಾಭಾವಿಕ ಮರಣವೂ ಇಲ್ಲ. ಮಾತ್ರವಲ್ಲದೆ ಜೀವನನ್ನು ಯಾವ ಶಸ್ತ್ರವೂ ಕತ್ತರಿಸಲಾರದು, ಬೆಂಕಿಯು ಸುಡಲಾರದು, ನೀರು ನೆನೆಸಲಾರದು ಮತ್ತು ಗಾಳಿ ಒಣಗಿಸಲಾರದು. ಎಷ್ಟೇ ಹರಿತವಾದ ಚಾಕುವಿನಿಂದಲೂ ಸೂಕ್ಷ್ಮಾಣುಗಳನ್ನು ಕತ್ತರಿಸಲು ಸಾಧ್ಯವಿಲ್ಲ; ಜೀವನು ಯಾವುದೇ ಜಡದ ಸೂಕ್ಷ್ಮಪರಮಾಣುವಿಗಿಂತಲೂ ಸೂಕ್ಷ್ಮನಾಗಿರುವುದರಿಂದ ಶಸ್ತ್ರ ಮೊದಲಾದ ಯಾವ ಜಡ ಪದಾರ್ಥವೂ ಅವನನ್ನು ನಾಶಪಡಿಸಲಾರದು. ಆದ್ದರಿಂದ ಅವನ ನಿತ್ಯತ್ವಕ್ಕೆ ಎಂದೂ ಧಕ್ಕೆಯಿಲ್ಲ.

ಇನ್ನು ಪರಮಾತ್ಮನು ಇಂಥ ಸೂಕ್ಷ್ಮವಾದ ಜೀವನೊಳಗೂ ವ್ಯಾಪಿಸಿರುವ ಪರಮಸೂಕ್ಷ್ಮನು; ಜೀವನಿಗೇ ನಾಶವಿಲ್ಲದ ಮೇಲೆ ಅವನಿಗಿಂತ ತುಂಬಾ ಸೂಕ್ಷ್ಮನಾದ ಪರಮಾತ್ಮನಿಗೆ ನಾಶದ ಪ್ರಸಕ್ತಿಯೇ ಇಲ್ಲ. ಜೀವನ ಸ್ವರೂಪ ದೇಹವು ನಿತ್ಯವಾದರೂ ಅವನ ಬಾಹ್ಯದೇಹಗಳಿಗೆ ನಾಶವುಂಟು. ಆದರೆ ಪರಮಾತ್ಮನಿಗೆ ಯಾವ ಕಾಲಕ್ಕೂ ಬಾಹ್ಯದೇಹಗಳು ಇರುವುದೇ ಇಲ್ಲ. ಅವನದು, ಅವನ ಸಕಲರೂಪಗಳದೂ ಅಪ್ರಾಕೃತಸ್ವರೂಪ.

## ಅರ್ಜುನನ ಮತ್ತೆ ಕೆಲವು ಶಂಕೆಗಳಿಗೆ ಉತ್ತರಗಳು

ಅರ್ಜುನನು ಕೇಳಿದ್ದ'' ಕೌರವರು ವಧಾರ್ಹರೇ ಇರಬಹುದು; ಆದರೆ ಅವರನ್ನು ತಾವೇ ಏತಕ್ಕೆ ಕೊಲ್ಲಬೇಕು ? ಬೇರೆ ಯಾರಾದರೂ ಕೊಲ್ಲಬಹುದಲ್ಲ?'' ಭಗವಂತನು

---

೧. ಅಂತವಂತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ।
ಅನಾಶಿನೋಽಪ್ರಮೇಯಸ್ಯ ತಸ್ಮಾದ್ ಯುಧ್ಯಸ್ವ ಭಾರತ॥ – ಗೀತಾ(೨/೧೮)
ಇಮೇ ದೇಹಾ ಇತಿ ವಿಶೇಷಣಾತ್ ನಿತ್ಯಶ್ಚಿದಾನಂದಾತ್ಮಕಃ ಸ್ವರೂಪಭೂತೋ ದೇಹೋ ಮುಕ್ತಾನಾ- ಮಪಿ ವಿದ್ಯತೇ ಇತಿ ಜ್ಞಾಯತೇ। – ಗೀತಾಭಾಷ್ಯ

೨. ತದಧೀನತ್ವಮೇವೇತಿ ಕಿಂಚಿತ್ ಸಾದೃಶ್ಯಮೇವ ವಾ। – ಅನುವ್ಯಾಖ್ಯಾನ

೩. ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ।
ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ॥
ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವ ಚ।
ನಿತ್ಯಃ ಸರ್ವಗತಸ್ಥಾಣುರಚಲೋಽಯಂ ಸನಾತನಃ॥ –ಗೀತಾ (೨/೨೩,೨೪)

ಉತ್ತರಿಸುತ್ತಾನೆ : "ಅರ್ಜುನನು ಹೀಗೆ ಕೇಳುವಂತಿಲ್ಲ; ಏಕೆಂದರೆ ಅವನು ಯಾವನೋ ಸಾಮಾನ್ಯ ವ್ಯಕ್ತಿಯಲ್ಲ; ಒಬ್ಬ ಕ್ಷತ್ರಿಯ; ದುಷ್ಟರನ್ನು ಸಂಹರಿಸಿ ಶಿಷ್ಟರನ್ನು ಪರಿಪಾಲಿಸುವ ಹೊಣೆ ಹೊತ್ತ ರಾಜಮನೆತನದ ಕ್ಷತ್ರಿಯ; ಚಂದ್ರವಂಶದ ಅರಸು ಮನೆತನದವನು; ಎಂದರೆ ದುಷ್ಟರ ಸಂಹಾರ ಅವನ ಕರ್ತವ್ಯ; ಕಳ್ಳನನ್ನು ನಾವೇಕೆ ಹಿಡಿಯಬೇಕು? ಬೇರೆ ಯಾರಾದರೂ ಹಿಡಿಯಲಿ ಎಂದು ಪೋಲೀಸರೇ ಕೇಳಿದರೆ ಹೇಗೆ!

ಅರ್ಜುನನ ಮತ್ತೊಂದು ಪ್ರಶ್ನೆ "ಬಂಧುಗಳನ್ನೆಂತು ಕೊಲ್ಲುವುದು?" ಭಗವಂತ ತಿಳಿಸುತ್ತಾನೆ. " ಕೌರವರು ಬಂಧುಗಳಾಗಿದ್ದರೂ ಮೂಲತಃ ದುಷ್ಟರು; ಲೋಕಕಂಟಕರು; ತಂದೆ ತಾಯಿಗಳ, ಗುರುಹಿರಿಯರ ಎದುರು ದ್ರೌಪದೀ ವಸ್ತ್ರಾಪಹರಣದಂತಹ ಹೇಯಕೃತ್ಯಕ್ಕೆ ಕೈ ಹಾಕಿದವರು; ಎಲ್ಲ ರೀತಿಯಲ್ಲೂ ಆತ ತಾಯಿಗಳು; ನಿಜವಾದ ಅರ್ಥದಲ್ಲಿ ಬದುಕುವ ಹಕ್ಕನ್ನು ಕಳೆದುಕೊಂಡವರು; ಬಂಧುಗಳೆಂಬ ಒಂದೇ ಕಾರಣವು ಅವರನ್ನು ಕೊಲ್ಲಲು ಅಡ್ಡಿಯಾಗುವುದಿದ್ದಲ್ಲಿ, ಬಂಧುಗಳಲ್ಲ ಎಂಬ ಒಂದೇ ಕಾರಣಕ್ಕಾಗಿ ಇತರ ದುಷ್ಟರು ವಧ್ಯರಾಗಬೇಕೇ?"[೧]

ಅರ್ಜುನ ನುಡಿದಿದ್ದ : "ಯುದ್ಧಮಾಡಲು ತನಗೆ ನಡುಕ" ಎಂದು; ಭಗವಂತ ಎಚ್ಚರಿಸುತ್ತಾನೆ: "ಯುದ್ಧವು ಯಾವುದೋ ಕರ್ಮವಲ್ಲ; ಕರ್ತವ್ಯಕರ್ಮ; ಕರ್ತವ್ಯವನ್ನು ಮಾಡಲು ಹೆಮ್ಮೆ ಪಡಬೇಕೇ ಹೊರತು ನಡುಗಬೇಕಿಲ್ಲ; ಸುಳ್ಳು ಹೇಳಲು, ಕಳ್ಳತನ ಮಾಡಲು ನಡುಗಬೇಕು; ಧರ್ಮಪಾಲನೆಗೆ ನಡುಗಬೇಕೆ? ಸತ್ಯ ಹೇಳಲು , ಲೋಕ ಉಳಿಸಲು ಏತಕ್ಕೆ ನಡುಗಬೇಕು?"[೨]

ಅರ್ಜುನ ಮತ್ತೆ ಕೇಳಿದ್ದ : "ತಿರಿದೂ ಹೊಟ್ಟೆ ಹೊರೆಯಲು ಬರುತ್ತದೆ; ಅದಕ್ಕೆ ರಾಜ್ಯವೇಕೆ? ರಾಜ್ಯಕ್ಕಾಗಿ ಯುದ್ಧವೇಕೆ?"; ಭಗವಂತ ತಿಳಿಸುತ್ತಾನೆ;" ಇಲ್ಲಿ ಇರುವುದು ಹೊಟ್ಟೆ ಹೊರೆಯುವ ಪ್ರಶ್ನೆಯಲ್ಲ; ರಾಜ್ಯ ಹೊಂದುವ ಪ್ರಶ್ನೆಯಲ್ಲ; ದುಷ್ಟರನ್ನು ಕೊಲ್ಲುವ, ಪ್ರಜೆಗಳನ್ನು ಪಾಲಿಸುವ ಪ್ರಶ್ನೆ. ಅದಕ್ಕೆ ನೆರವಾಗಲೆಂದೇ ಯುದ್ಧ; ಎಂದ ಮೇಲೆ ಅದರ ಹೊರತು ಬೇರೆ ಮಾರ್ಗವೇ ಇಲ್ಲ.

ಯುದ್ಧ ಕ್ಷತ್ರಿಯನಿಗೆ ಹಲವು ಕೆಲಸಗಳಲ್ಲಿ ಒಂದು ಕೆಲಸವಲ್ಲ; ಅದೇ ಪ್ರಧಾನವಾದ ಕೆಲಸ; ಅದಾಗಿ ಒದಗಿದಾಗ ರಾಜ್ಯವನ್ನು ಬೇಡ ಎಂದರೂ ಎನ್ನಬಹುದು. ಆದರೆ ಅಂತಹ ಧರ್ಮಯುದ್ಧವನ್ನು ಬೇಡವೆನ್ನುವಂತಿಲ್ಲ; ಅಧರ್ಮಯುದ್ಧವನ್ನು ಮಾಡುವಷ್ಟೇ ಧರ್ಮ-

---

೧. ಸ್ವಧರ್ಮಮಪಿ ಚಾವೇಕ್ಷ್ಯ ನ ವಿಕಂಪಿತುಮರ್ಹಸಿ ।
ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋಽನ್ಯತ್ ಕ್ಷತ್ರಿಯಸ್ಯ ನ ವಿದ್ಯತೇ ॥ -ಗೀತಾ (೨/ ೩೧)

೨. ಯದೃಚ್ಛಯಾ ಚೋಪಪನ್ನಂ ಸ್ವರ್ಗದ್ವಾರಮಪಾವೃತಮ್ ।
ಸುಖಿನಃ ಕ್ಷತ್ರಿಯಾಃ ಪಾರ್ಥ ಲಭಂತೇ ಯುದ್ಧಮೀದೃಶಮ್॥ -ಗೀತಾ (೨/ ೩೨)

ಯುದ್ಧ ತೊರೆಯುವುದು ಸಹ ಅಧರ್ಮವೇ ಆಗುತ್ತದೆ. ತಾನಾಗಿ ಬಯಸಿ ಯುದ್ಧವನ್ನು ಮಾಡಕೂಡದು; ಒದಗಿದಾಗ ಅದನ್ನು ಬಿಡಲೂ [೧]ಕೂಡದು.

ಅರ್ಜುನ ದುಃಖಿಸಿದ್ದ : "ಅಯ್ಯೋ ಇದೆಂತಹ ಪಾಪ ಕಾರ್ಯಕ್ಕೆ ನಾವು ಎಳೆಸಿರುವೆವು"; ಭಗವಂತ ಹೇಳುತ್ತಾನೆ; ಧರ್ಮಯುದ್ಧ ಎಂದೂ ಪಾಪಕರವಲ್ಲ; ಅದು ನಿಜಕ್ಕೂ ಪುಣ್ಯಕರ; ಅಂತಹ ಅವಕಾಶ ಎಲ್ಲರಿಗೂ ಲಭಿಸಲಾರದು; ತುಂಬಾ ಪುಣ್ಯವಂತರಿಗೆ ಮಾತ್ರ ಅದು ಲಭಿಸೀತು. ಧರ್ಮರಕ್ಷಣೆ, ದೇಶಪಾಲನೆ, ದೇವಪೂಜನಗಳಂತಹ ಕಾರ್ಯ ಎಂದೂ ಸಾಮಾನ್ಯ ಅರ್ಹತೆಯ ಜನಕ್ಕೆ ಉತ್ತಮ ಮಟ್ಟದಲ್ಲಿ ಲಭಿಸುವುದೇ ಇಲ್ಲ.

ಅರ್ಜುನ ಭಾವಿಸಿದ್ದ: "ಯುದ್ಧ ತೊರೆಯುವುದೇ ಕ್ಷೇಮಕರ". ಶ್ರೀಕೃಷ್ಣನು ಅದನ್ನು ನಿರಾಕರಿಸುತ್ತಾನೆ: ಯುದ್ಧ ತೊರೆದರೆ ಧರ್ಮದೊಂದಿಗೆ ಕೀರ್ತಿಯೂ ನಶಿಸುತ್ತದೆ; ಪಾಪ ಬಂದೇ ಬರುತ್ತದೆ; ತಿಳಿದ ಜನರು ಅದರಲ್ಲೂ ಶತ್ರುವರ್ಗದವರು ಧರ್ಮ ತೊರೆದವನನ್ನು ತೆಗಳುತ್ತಾರೆ. ಶತ್ರುಗಳಂತೂ ಲೇವಡಿ ಮಾಡುತ್ತಾರೆ; ಹೇಡಿ ಎನ್ನುತ್ತಾರೆ; ಸಂಭಾವಿತನಿಗೆ ಅಂಥ ಅಪಮಾನಕ್ಕಿಂತ ಸಾವೇ [೨]ಲೇಸು. ಎಂದರೆ ಯುದ್ಧ ತೊರೆಯುವುದು ಅರ್ಜುನ ತಿಳಿದಂತೆ ಕ್ಷೇಮಕರವಲ್ಲ; ಪಾಪಕರ; ಸುಖಕರವಲ್ಲ; ದು:ಖಕರ.

ಅರ್ಜುನನು ಶಂಕಿಸಿದ್ದ: " ಯುದ್ಧದಲ್ಲಿ ಗೆಲುವು ಯಾರಿಗೆಂದು ತಿಳಿಯದು; ಅದನ್ನೇತಕ್ಕೆ ಮಾಡಬೇಕು ?" ಭಗವಂತ ಉತ್ತರಿಸುತ್ತಾನೆ " ಸೋಲು ಗೆಲುವುಗಳ ಚಿಂತೆ ಬೇಡ; ಸತ್ತರೆ ಸ್ವರ್ಗ; ಗೆದ್ದರೆ ರಾಜ್ಯದೊಂದಿಗೆ [೩]ಸ್ವರ್ಗವೂ ಖಚಿತ, ಧರ್ಮಯುದ್ಧದಲ್ಲಿ ಗೆಲುವಿನಂತೆ ಸಾವಿಗೂ ಅಷ್ಟೇ ಬೆಲೆ ಇದೆ; ಯುದ್ಧ ಬಿಟ್ಟರೆ ಹಾಗಲ್ಲ ಇಲ್ಲಿ ಅಪಕೀರ್ತಿ; ಸತ್ತ ಮೇಲೆ ನರಕ. ಆದ್ದರಿಂದ ಯುದ್ಧ ಮಾಡುವುದರಲ್ಲೇ ನಿಜವಾದ ವಿವೇಕವಿದೆ.

ಇನ್ನು ಸುಖದುಃಖಗಳ ಮಾತು : ಹಿಂದೆ ಹೇಳಿದಂತೆ ಅದಕ್ಕೆ ಅಭಿಮಾನವೇ ಮೂಲ; ಅದನ್ನು ತೊರೆದು ಭಗವತ್ಪ್ರೀತಿಗೆಂದು ಕರ್ತವ್ಯ ರೂಪವಾದ ಯುದ್ಧವನ್ನು ಮಾಡಿದರೆ ಅವುಗಳ ಬಾಧೆಯೂ [೪]ಇರುವುದಿಲ್ಲ.

---

೧. ಅಥ ಚೇತ್ ತ್ವಮಿಮಂ ಧರ್ಮ್ಯಂ ಸಂಗ್ರಾಮಂ ನ ಕರಿಷ್ಯಸಿ।
ತತಃ ಸ್ವಧರ್ಮಂ ಕೀರ್ತಿಂ ಚ ಹಿತ್ವಾ ಪಾಪಮವಾಪ್ಸ್ಯಸಿ॥ - ಗೀತಾ (೨/ ೩೩)

೨. ಸಂಭಾವಿತಸ್ಯ ಚಾಕೀರ್ತಿರ್ಮರಣಾದತಿರಿಚ್ಯತೇ॥ - ಗೀತಾ ೨/ ೩೪ ೨

೩. ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಮ್।
ತಸ್ಮಾದುತ್ತಿಷ್ಠ ಕೌಂತೇಯ ಯುದ್ಧಾಯ ಕೃತನಿಶ್ಚಯಃ॥ -ಗೀತಾ ೨/ ೩೭
– ಜಿತ್ವಾ ಮಹೀಂ ಸ್ವರ್ಗಂ ಚ। -(ಗೀತಾಭಾಷ್ಯ)

೪. ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾಜಯೌ।
ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪಮವಾಪ್ಸ್ಯಸಿ॥ - ಗೀತಾ (೨/೩೮)

## 'ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್'[೧]

ತತ್ತ್ವಜ್ಞಾನಕ್ಕೆ ಸಾಧನವಾಗುವ ಯೋಗವನ್ನು ಅರಿಯಲು ಮಾಡುವ ಯತ್ನವೂ ಸಹ ತಾರಕವೇ ಆಗಿದೆ. ಅದು ಅಲ್ಪವಿದ್ದರೂ ಸರಿ, ಸಂಸಾರದ ದೊಡ್ಡ ಭಯವನ್ನೇ ಅದು ಪರಿಹರಿಸುತ್ತದೆ. ಒಮ್ಮೆ ಅದನ್ನು ಆರಂಭಿಸಿ ಕಾರಣಾಂತರದಿಂದ ಮಧ್ಯೆ ತೊರೆದರೂ ಆವರೆಗೆ ಮಾಡಿದ ಪ್ರಯತ್ನ ಎಂದೂ ವ್ಯರ್ಥವಾಗುವುದಿಲ್ಲ. ಅದಕ್ಕೆ ತನ್ನದೇ ಆದ ಮಹತ್ತ್ವ ಇದ್ದೇ ಇರುವುದು.

ಮಧ್ಯೆ ಅದನ್ನು ಕೈಬಿಟ್ಟದ್ದಕ್ಕೆ ಯಾವ ಪ್ರತ್ಯವಾಯವೂ ಇರುವುದಿಲ್ಲ. ಪೂರ್ಣವಾಗಿ ಮಾಡದಿದ್ದರೆ ಕೃಷಿಯು ವ್ಯರ್ಥವೆನ್ನಿಸುತ್ತದೆ. ಪೂರ್ಣವಾಗಿ ತೆಗೆದುಕೊಳ್ಳದ ಔಷಧಿಯು ಅಪಾಯಕ್ಕೆ ಕಾರಣವಾಗಬಹುದು; ಇನ್ನು ವಾಮಾಚಾರವಂತೂ ಅದನ್ನು ಪೂರೈಸಲಿ ಬಿಡಲಿ ದುಷ್ಪರಿಣಾಮ ಮಾತ್ರ ತಪ್ಪಿದ್ದಲ್ಲ. ಆದರೆ ಯೋಗವು ಮಾತ್ರ ಸರ್ವರೀತಿಯಿಂದಲೂ ಸುರಕ್ಷಿತವಾದ ಮಾರ್ಗ. ಅದನ್ನು ಪ್ರಾರಂಭಮಾಡುವುದಿರಲಿ, ಪ್ರಾರಂಭಿಸಬೇಕು ಎಂದು ಇಚ್ಛಿಸುವುದೂ ಸಹ[೨] ತಾರಕ.

*****

## ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ !

ತತ್ತ್ವಜ್ಞಾನದ ಹಾದಿಗೆ ಕಾಲಿಡುವ ಮನುಷ್ಯನಿಗೆ ಮೊದಲು ಎದುರಾಗುವ ದೊಡ್ಡ ಸಮಸ್ಯೆ, ವಿಭಿನ್ನ ಮತಗಳು ಮತ್ತು ಅವುಗಳ ವಿಭಿನ್ನ ವಿಚಾರಗಳು; ಕೆಲವು ಮತದವರಿಗೆ ಎಲ್ಲ ಸುಳ್ಳು, ಜಗತ್ತೇ ಮಿಥ್ಯೆ. ಕೆಲವರ ಪ್ರಕಾರ ದೇವರೇ ಇಲ್ಲ, ಶೂನ್ಯವೇ ತತ್ತ್ವ. ಮತ್ತೆ ಕೆಲವರು ದೇವರನ್ನು ಒಪ್ಪಿದರೂ ಅವನನ್ನು ನಿರ್ಗುಣ, ನಿರಾಕಾರ ಎನ್ನುವರು. ಇನ್ನೂ ಕೆಲವರು ದೇವರಿಗೆ ಎಂಟೇ ಗುಣವೆನ್ನುವರು. ಕೆಲವರಿಗೆ, ಒಳಿತಾಗಲು ದೇವರೇ ಬೇಡ; ಧರ್ಮ ಒಂದೇ ಸಾಕು. ಇನ್ನು ಕೆಲವರಿಗೆ ಕರ್ಮವು ಅಜ್ಞಾನಿಗಳಿಗೆ ಮಾತ್ರ; ಮುಮುಕ್ಷುಗಳಿಗೆ ಅದರ ತ್ಯಾಗವೇ ವಿಹಿತ. ಕೆಲವರಿಗೆ ಕಂಡಿದ್ದು ಮಾತ್ರ ಪ್ರಮಾಣ. ಕೆಲವರಿಗೆ ಅದೂ ಪ್ರಮಾಣವಲ್ಲ; ಕೆಲವರ ಪ್ರಕಾರ ಮೋಕ್ಷವೇ ಇಲ್ಲ, ಸ್ವರ್ಗವೇ ಪುರುಷಾರ್ಥ; ಕೆಲವರಿಗೆ ಸ್ವರ್ಗವೂ ಇಲ್ಲ; ಇಹಲೋಕದ ಸುಖವೇ ಪರಮಪುರುಷಾರ್ಥ. ಅದಕ್ಕಾಗಿ ಅವರು ಯಾವ ಮಾರ್ಗವನ್ನನುಸರಿಸಿದರೂ ಆ ಮತ ಬೇಡವೆನ್ನುವುದಿಲ್ಲ, ಕೆಲವರಿಗೆ ಮೋಕ್ಷವೆಂದರೆ ಆತ್ಮೈಕ್ಯ; ಮತ್ತೆ ಕೆಲವರಿಗೆ ಬ್ರಹ್ಮಾನಂದದ ಸಾಮ್ಯ. ಇನ್ನೂ ಕೆಲವರಿಗೆ ಅಲ್ಲಿ ಸುಖವೂ ಇಲ್ಲ ದುಃಖವೂ ಇಲ್ಲ, ಕೆಲವರಿಗೆ ಸತತ ಮೇಲಕ್ಕೆ ಹೋಗುತ್ತಿರುವುದೇ ಮುಕ್ತಿ.

---

೧. ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ ।
ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ॥ – ಗೀತಾ (೨/೪೦ )

೨. ಪ್ರಾರಂಭಮಾತ್ರಮಿಚ್ಛಾ ವಾ ವಿಷ್ಣುಧರ್ಮೇ ನ ನಿಷ್ಫಲಾ । –ಗೀತಾತಾತ್ಪರ್ಯನಿರ್ಣಯ

ಇಷ್ಟೆಲ್ಲ ವಿಭಿನ್ನ ಮತಗಳನ್ನು ಕಂಡಾಗ ವಿಚಾರವಂತರಿಗೆ ಸಹಜವಾಗಿಯೇ ದಿಗ್ಭ್ರಮೆಯಾಗುತ್ತದೆ. ಒಮ್ಮತವಿಲ್ಲದ ಈ ಮತಗಳಲ್ಲಿ ಯಥಾರ್ಥವಾದದ್ದನ್ನು ಹುಡುಕು-ವುದು ಹೇಗೆ ಎಂಬ ಚಿಂತೆ ಅವನನ್ನು ಕಾಡತೊಡಗುತ್ತದೆ. ಅದಕ್ಕೆ ಭಗವಂತನ ಉತ್ತರ ಹೀಗಿದೆ.

''ಅರ್ಜುನ! ಆಧಾರ ಕೊಟ್ಟು ವಿಚಾರ ಮಂಡಿಸುವ ಜನ ಎಷ್ಟಿದ್ದರೂ ಚಿಂತೆಯಿಲ್ಲ; ಅವರೆಲ್ಲರ ಒಟ್ಟು ವಿಚಾರ ಒಂದೇ ಆಗಿರುತ್ತದೆ. ಹಾಗೆ ಮಾಡದೆ ತಲೆಗೆ ತೋಚಿದಂತೆ ಮಾತನಾಡುವ ಜನಗಳ ವಿಚಾರ ಮಾತ್ರ ಹಲವಾರು [೧]ತೆರನಾಗಿರುತ್ತದೆ. ಅವುಗಳಲ್ಲಿ ಹೊಂದಾಣಿಕೆ ಇರುವುದಿಲ್ಲ. ಪೂರ್ವಾಪರ ವಿರೋಧವೇ ತುಂಬಿರುತ್ತದೆ. ಆದ್ದರಿಂದ ಯಾರು ಏನೇ ಹೇಳಿದರೂ ಅವರ ವಿಚಾರಗಳಿಗೆ ಮೂಲವಾದ ಆಧಾರ ಎಷ್ಟು ಗಟ್ಟಿಯಾದುದು ಎಂಬುದನ್ನು ಗಮನಿಸಬೇಕು. ಈ ಎಚ್ಚರ ಇದ್ದವನಿಗೆ ಮಾತ್ರ ನಿಜವಾದ ಮತವನ್ನು ಹುಡುಕುವುದು ಕಷ್ಟವಾಗುವುದಿಲ್ಲ.

ಎಲ್ಲಾ ಮತಗಳು ಸರಿಯೆಂಬ ವಾದ ಇಂದು ತುಂಬಾ ಪ್ರಚಾರದಲ್ಲಿದೆ. ಅದು ಬಹುಜನರಿಗೆ ಪ್ರಿಯವೂ ಆಗಿದೆ; ಆದರೆ ಹಾಗೆ ಎಲ್ಲ ಮತಗಳೂ ಸರಿಯಾಗಿದ್ದಲ್ಲಿ ಅವುಗಳಲ್ಲಿ ಪರಸ್ಪರ ಹೊಂದಾಣಿಕೆ ಇರಬೇಕಿತ್ತು. ಮುಖ್ಯವಾದ ವಿಚಾರಗಳಲ್ಲಿ ಪೂರ್ಣ ಒಮ್ಮತವಿರಬೇಕಿತ್ತು. ಆದರೆ ವಿವಿಧಮತಗಳ ಸಾಮಾನ್ಯತತ್ತ್ವಗಳ ಪರಿಚಯವಿದ್ದವನಿಗೂ ಅವುಗಳಲ್ಲಿ ಮೂಲಭೂತ ವಿಚಾರಗಳಲ್ಲೇ ಎಲ್ಲೂ ಹೊಂದಾಣಿಕೆ ಇಲ್ಲ ಎಂಬ ಸತ್ಯ ಗೋಚರಿಸುತ್ತದೆ. ಹೀಗಿದ್ದೂ ಅವೆಲ್ಲವುಗಳನ್ನು ಸರಿ ಎಂದು ಕರೆಯುವುದು ಒಟ್ಟಾಗಿ ಆತ್ಮವಂಚನೆಯೇ ಆಗುತ್ತದೆ. ಅದು ಸತ್ಯಕ್ಕೆ ಸಲ್ಲುವ ಗೌರವವಾಗದೆ ಅಪಚಾರವೇ ಆಗುತ್ತದೆ.

ಸತ್ಯಕ್ಕೂ ಒಂದೇ ಫಲ; ಅಸತ್ಯಕ್ಕೂ ಒಂದೇ ಫಲ; ಒಳ್ಳೆಯವನಿಗೂ ಅದೇ ಫಲ; ಕೆಟ್ಟವನಿಗೂ ಅದೇ ಫಲ; ಪ್ರಾಮಾಣಿಕನಿಗೂ ಅದೇ ಫಲ; ಅಪ್ರಾಮಾಣಿಕನಿಗೂ ಅದೇ ಫಲ ಎಂದು ವಾದಿಸುವುದರಲ್ಲಿ ಯಾವ ತಿಳುವಳಿಕೆಯೂ ಇಲ್ಲ.

''ವೇದಗಳು [೨]ಅಪೌರುಷೇಯ; ಅವುಗಳ ವಿಚಾರವು ಮೋಡದಿಂದ ನೇರವಾಗಿ ದೊರೆಯುವ ಮಳೆನೀರಿನಂತೆ ಪರಿಶುದ್ಧವಾದುದು. ಅಲ್ಲಿ ವಂಚನೆಗೆ ಅವಕಾಶವೇ ಇಲ್ಲ. ಆದ್ದರಿಂದ ಅವುಗಳ ಆಧಾರದ ಮೇಲೆ ಹೊರಟ ಮತ ಎಂದೂ ತಪ್ಪಾಗುವ ಸಂಭವವೇ

---

೧. ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ।
ಬಹುಶಾಖಾ ಹ್ಯನಂತಾಶ್ಚ ಬುದ್ಧಯೋಽವ್ಯವಸಾಯಿನಾಮ್॥ -ಗೀತಾ (೨/೪೧)
ಬುದ್ಧಿರ್ನಿರ್ಣೀತತತ್ತ್ವಾನಾಮೇಕಾ ವಿಷ್ಣುಪರಾಯಣಾ।
ಬಹುಶಾಖಾ ಹ್ಯನಂತಾಶ್ಚ ಬುದ್ಧಯೋಽವ್ಯವಸಾಯಿನಾಮ್॥ - ಗೀತಾತಾತ್ಪರ್ಯನಿರ್ಣಯ

೨. ಸ್ವರವೈದಿಕಾನಿ ಮತಾನಿ ಅವ್ಯವಸಾಯಾತ್ಮಿಕಾನಿ ನ ತು ವೈದಿಕಾನಿ। - ಗೀತಾಭಾಷ್ಯ

ಇರುವುದಿಲ್ಲ. ದೇವರು, ಧರ್ಮ ಮೊದಲಾದ ಅತೀಂದ್ರಿಯ ವಿಷಯಗಳಲ್ಲಿ ಅವು ಮೂಲಭೂತ ಆಧಾರವಾಗಿವೆ. ಅವನ್ನು ಒಪ್ಪದ ಅವೈದಿಕ ಮತಗಳಿಗೆ ಎಂದೂ ನಿಜವಾದ ಮಾನ್ಯತೆ ದೊರೆಯುವುದೇ ಇಲ್ಲ.

ವೈದಿಕಮತಗಳಲ್ಲೂ ಭಿನ್ನಾಭಿಪ್ರಾಯ ಬಂದಾಗ ಪರಿಹಾರ ಹೇಗೆ? ಮೀಮಾಂಸಕರು ವೇದ ಒಪ್ಪುತ್ತಾರೆ; ವೇದೋಕ್ತ ಕರ್ಮಗಳ ಮಹತ್ತ್ವವನ್ನು ಒಪ್ಪುತ್ತಾರೆ; ಆದರೆ ಫಲ ಕೊಡಲು ಅವರಿಗೆ ಈಶ್ವರ ಬೇಕಿಲ್ಲ; ಕರ್ಮವು ತಾನಾಗಿಯೇ ಫಲ ಕೊಡುತ್ತದೆ ಎಂಬ ವಾದ ಅವರದು. ಅವರ ಪಾಲಿಗೆ ಸ್ವರ್ಗವೇ ಪುರುಷಾರ್ಥ, ಮೋಕ್ಷವಲ್ಲ; ಕರ್ಮವೇ ಅದಕ್ಕೆ ಸಾಧನ. ಜ್ಞಾನವಾಗಲೀ ಈಶ್ವರಾನುಗ್ರಹವಾಗಲೀ ಅಲ್ಲ. ಆದರೆ ಭಗವಂತ ಹೇಳುತ್ತಿರುವುದು ಈಶ್ವರಾನುಗ್ರಹವೇ ಮೋಕ್ಷ ಸಾಧನ. ಜ್ಞಾನದಿಂದಲೇ ಈಶ್ವರಾನುಗ್ರಹ; ನಿಷ್ಕಾಮ ಕರ್ಮಾನುಷ್ಠಾನವೇ ತತ್ತ್ವಜ್ಞಾನದ ಉಪಾಯ. ಸಕಾಮಕರ್ಮವು ಎಂದಿಗೂ ತಾರಕವಲ್ಲ; ಇವೆರಡೂ ವೈದಿಕಮತಗಳೇ ಆದರೂ ಇವುಗಳಲ್ಲಿ ಸ್ಪಷ್ಟವಾದ ವಿರೋಧವೇ ಇದೆ. ಇದರ ಪರಿಹಾರ ಹೇಗೆ ?

ಅದಕ್ಕೆ ಭಗವಂತನು ನೀಡುವ ಉತ್ತರ[೧] ಹೀಗಿದೆ. "ಅರ್ಜುನ ! ನೀನು ಹೇಳುವುದು ನಿಜ, ಆದರೆ ಮೀಮಾಂಸಕರ ಮತವನ್ನು ಒಪ್ಪಬೇಕಿಲ್ಲ. ಅವರು ತಮ್ಮನ್ನು ವೈದಿಕರೆಂದು ಕರೆದುಕೊಂಡಿದ್ದರೂ ಅವರು ಗ್ರಹಿಸುವುದು ಅದರ ಮೇಲ್ನೋಟದ ಅರ್ಥವನ್ನೇ ಹೊರತು ಅಂತರಾರ್ಥವನ್ನಲ್ಲ; ಹಣ್ಣಿನ ಮರವನ್ನು ಹೂವಿನ ಮರವೆಂದು ಭಾವಿಸಿ ಹೂವಿನ ಸ್ಥಿತಿಯಲ್ಲೇ ಅದನ್ನು ಕೀಳುವ ಅಪಕ್ವ ಪ್ರವೃತ್ತಿ ಅವರದು. ಅವರು ಬರೀ ವೇದ ಪಾಠಕರೇ ಹೊರತು ವೇದ ತಿಳಿದವರಲ್ಲ.

ಕಾಮ್ಯಫಲದಲ್ಲಿ ಆಸಕ್ತರಾದ ಅವರಿಗೆ ಮೋಕ್ಷ ಫಲದ ಸುಳಿವೂ ಸಿಕ್ಕದೇ ಸ್ವರ್ಗಾದಿಗಳನ್ನೇ ಮುಖ್ಯ ಫಲವೆಂದೇ ಭ್ರಮಿಸಿರುವರು. ಭೋಗವಿಲಾಸಗಳಲ್ಲೇ ಜೀವನದ ಗುರಿಯನ್ನು ಕಾಣುವ ಅವರಿಗೆ ತತ್ತ್ವಜ್ಞಾನಕ್ಕಿಂತ ಕಾಮ್ಯಕರ್ಮಗಳೇ [೨]ಪ್ರಿಯವಾಗುವವು. ಅವರ ಭೋಗಲಾಲಸೆಯೇ ಅವರಿಗೆ ವೇದದ ಹೃದಯವನ್ನು ತಿಳಿಯಲು ಅಡ್ಡಿಯಾಗುವುದು. ಆದ್ದರಿಂದ ಅವರು ವೈದಿಕರೆಂದು ಕರೆದುಕೊಂಡರೂ ನಿಜಕ್ಕೂ ಅವೈದಿಕರೇ ಸರಿ; ವಿಚಾರದ ಒರೆಗಲ್ಲಿಗೆ ಎಂದೂ ಅವರ ಮತ ನಿಲ್ಲುವುದಿಲ್ಲ.

---

೧. ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತ್ಯವಿಪಶ್ಚಿತಃ ।
ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ ॥ – ಗೀತಾ (೨/೪೨)

೨. ಕಾಮಾತ್ಮಾನಃ ಸ್ವರ್ಗಪರಾ ಜನ್ಮಕರ್ಮಫಲಪ್ರದಾಮ್ ।
ಕ್ರಿಯಾವಿಶೇಷಬಹುಲಾಂ ಭೋಗೈಶ್ವರ್ಯಗತಿಂ ಪ್ರತಿ ॥
ಭೋಗೈಶ್ವರ್ಯಪ್ರಸಕ್ತಾನಾಂ ತಯಾಽಪಹೃತಚೇತಸಾಮ್ ।
ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ ॥ –ಗೀತಾ (೨/ ೪೩,೪೪)

ತತ್ತ್ವಜ್ಞಾನದ ಪಾವಿತ್ರ್ಯ ಮತ್ತು ಅದರ ಘನತೆಗಳನ್ನು ಹೀಗೆ ನಿರೂಪಿಸಿರುವುದು ಭಗವದ್ಗೀತೆಯ ಮಾನ್ಯತೆಯ ಮುಖ್ಯ ಕಾರಣಗಳಲ್ಲಿ ಒಂದು; ಅವೈದಿಕರು ವೇದ ಒಪ್ಪದೇ ಅವುಗಳಿಗೆ ಅಪಚಾರ ಮಾಡಿದರೆ, ಮೀಮಾಂಸಕರು ಅವುಗಳನ್ನು ಒಪ್ಪಿಯೂ ಅವಕ್ಕೆ ಅಪಚಾರ ಮಾಡಿದರು.

## ತ್ರೈಗುಣ್ಯವಿಷಯಾ ವೇದಾಃ

ವೇದಗಳು ಮೇಲ್ನೋಟಕ್ಕೆ ಸ್ವರ್ಗಾದಿಫಲಗಳಿಗೆ ಸಾಧನವಾದ ಕಾಮ್ಯ ಕರ್ಮವನ್ನು ವಿಧಿಸುವಂತೆ ಕಾಣುತ್ತದೆ. ಅವುಗಳ ಹೃದಯ ಮಾತ್ರ ಮೋಕ್ಷವೆಂಬ ಮಹಾಪುರುಷಾರ್ಥಕ್ಕೆ ಸಾಧನವಾಗುವ ಭಗವತ್ತತ್ತ್ವದ ಪ್ರತಿಪಾದನೆಯೇ ಆಗಿದೆ[೧].

ಕರ್ಮಗಳನ್ನು ಅವು ವಿಧಿಸಿರುವುದು ಸಹ ಅಂತಹ ತತ್ತ್ವಜ್ಞಾನದ ಸಾಧನೆಗೆಂದೇ ಹೊರತು ಕ್ಷುದ್ರಕಾಮನೆಗಳ ಪೂರೈಕೆಗಾಗಿ ಅಲ್ಲ. ವೇದಗಳ ಇಂತಹ ಅಂತರಾರ್ಥವು ಅವನ್ನು ಆಳವಾಗಿ ವಿಚಾರ ಮಾಡುವವರಿಗೆ ಗೋಚರಿಸುವುದೇ ಹೊರತು ಬರೀ ಅವುಗಳನ್ನು ಪಾಠ ಮಾಡುವವರಿಗಲ್ಲ.

ಸಮುದ್ರದಲ್ಲಿ ಅನರ್ಘ್ಯ ಮುತ್ತುರತ್ನಗಳಿರುವುದು ನಿಜವಾದರೂ ಅವುಗಳು ದೊರೆಯುವುದು ಅದರಲ್ಲಿ ಆಳವಾಗಿ ಮುಳುಗುವ ಸಾಹಸಿಗಳಿಗೇ ಹೊರತು; ಒಂದೆರಡು ಮುಳುಗು ಹಾಕಿ ಹಿಂದಿರುಗುವ ಸಾಮಾನ್ಯರಿಗಲ್ಲ.

ಆದ್ದರಿಂದ ಮೋಕ್ಷಸುಖಕ್ಕೆ ಹಾದಿ ತೋರುವುದು ವೇದಾದಿ ಶಾಸ್ತ್ರಗಳ ಮುಖ್ಯ ಗುರಿ. ಅವನ್ನು ಅಧ್ಯಯನ ಮಾಡುವವರೆಲ್ಲ ಅಂತಹ ಗುರಿಯನ್ನು ಸಾಧಿಸುವ ಉದಾತ್ತ ಆದರ್ಶವನ್ನು ತೋರಬೇಕೇ ಹೊರತು ಕಾಮ್ಯಫಲಗಳಿಗೆ ಹಾತೊರೆಯುವ ಕೀಳು ಪ್ರವೃತ್ತಿಯನ್ನಲ್ಲ.

ಸ್ವರ್ಗಸುಖದಂತೆ ಮೋಕ್ಷಸುಖವೂ ಸಹ ಒಂದು ಸಾಧ್ಯವಾಗಿರುವುದರಿಂದ ಅವೆರಡರಲ್ಲೂ ಸಾಮ್ಯವಿದೆಯೆಂದು ತಿಳಿಯಬಾರದು; ಮೋಕ್ಷ ಸುಖವು ಸಮುದ್ರಜಲದಂತೆ ಅಪಾರ ಮತ್ತು ಅನಂತ; ಸ್ವರ್ಗಾದಿ ಇತರ ಸುಖಗಳು ಬಾವಿಯ ನೀರಿನಂತೆ ಅಲ್ಪ; ಸಮುದ್ರಜಲದಲ್ಲಿ ಕೂಪೋದಕವು ಅಂತರ್ಭೂತವಾಗುವಂತೆ ಆಧ್ಯಾತ್ಮಿಕಸುಖದಲ್ಲಿ ಲೌಕಿಕಸುಖವೂ ಸೇರಿ ಕೊಳ್ಳುವುದು[೨]. ಸ್ನಾತಕೋತ್ತರ ತರಗತಿಯಲ್ಲಿ

---

೧. ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ ।
ನಿರ್ದ್ವಂದ್ವೋ ನಿತ್ಯಸತ್ತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್ ॥ –ಗೀತಾ (೨/೪೫)
– ವೇದಾನಾಂ ಪರೋಕ್ಷಾರ್ಥತ್ವಾತ್ ತ್ರಿಗುಣ ಸಂಬಂಧಿ ಸ್ವರ್ಗಾದಿ ಪ್ರತೀತಿತೋ ಅರ್ಥ ಇವ ಭಾತಿ।
– ಗೀತಾಭಾಷ್ಯ

೨. ಯಾವಾನರ್ಥ ಉದಪಾನೇ ಸರ್ವತಃ ಸಂಪ್ಲುತೋದಕೇ।
ತಾವಾನ್ ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ – ಗೀತಾ (೨/೪೬)

ಓದುವವನು ಹೈಸ್ಕೂಲು ಪೂರೈಸಿರುವನೆಂದು ಪ್ರತ್ಯೇಕವಾಗಿ ಹೇಳಬೇಕಿಲ್ಲವಷ್ಟೇ! ಆದರೆ ಆಧ್ಯಾತ್ಮಿಕ ಸುಖದ ಒಂದಂಶಕ್ಕೂ ಸಹ ಲೌಕಿಕ ಸುಖವು ಸಾಟಿಯಾಗಲಾರದು. ಒಂದು ಕೆ.ಜಿ. ಚಿನ್ನ ಮತ್ತು ಒಂದು ಕೆ.ಜಿ. ಕಬ್ಬಿಣ ಎರಡೂ ತೂಕದಲ್ಲಿ ಸಮನಾದರೂ ಅವುಗಳ ಮೌಲ್ಯದಲ್ಲಿ ಅಪಾರ ವ್ಯತ್ಯಾಸವಿರುವುದಲ್ಲವೇ?

ಆದ್ದರಿಂದ ಅನಂತ ಸುಖಕ್ಕೆ ಕಾರಣವಾಗುವ ಯೋಗದಲ್ಲಿ ವಿವೇಕಿಯು ಆಸಕ್ತನಾಗಬೇಕೇ ಹೊರತು ಅತ್ಯಲ್ಪವೆನ್ನಿಸುವ ಲೌಕಿಕ ವಿಷಯಗಳಲ್ಲಿ ಅಲ್ಲ.

'ಸ್ವರ್ಗಕಾಮೋ ಯಜೇತ', 'ವೃಷ್ಟಿಕಾಮೋ ಯಜೇತ' ಎಂಬುದಾಗಿ ವೇದಗಳಲ್ಲಿ ಕರ್ಮದೊಂದಿಗೆ ಫಲಾಸೆಯೂ ವಿಹಿತವಾಗಿರುವಾಗ ಅಂತಹ ಫಲಾಸೆಯನ್ನೇಕೆ ತೊರೆಯಬೇಕು ? ಎಂಬುದು ಇಲ್ಲಿ ಬರಬಹುದಾದ ಮಹತ್ವದ ಪ್ರಶ್ನೆ.

ಅದಕ್ಕೆ ಭಗವಂತನ ಉತ್ತರ ಹೀಗಿದೆ : ಆ ತೆರನಾದ ವೇದವಾಕ್ಯಗಳಿರುವುದು ನಿಜ. ಆದರೆ ಆ ವಾಕ್ಯಗಳಲ್ಲಿ ವಿಧಿಸಲ್ಪಟ್ಟಿರುವುದು ಕರ್ಮಗಳೇ ಹೊರತು ಫಲಾಸೆಯಲ್ಲ. ಒಂದು ಮನೆ ಹತ್ತು ಲಕ್ಷರೂಪಾಯಿ ಬೆಲೆಬಾಳುತ್ತದೆ ಎಂದರೆ ಅದನ್ನು ಹತ್ತು ಲಕ್ಷ ರೂಪಾಯಿಗೆ ಮಾರಲೇ ಬೇಕೆಂದಾಗಲೀ, ಕೊಳ್ಳಲೇಬೇಕೆಂದಾಗಲೀ ಅರ್ಥವಲ್ಲ. ಅದು ಬಹು ಬೆಲೆಬಾಳುವ ಮನೆ ಎಂದು ಮಾತ್ರ ಅರ್ಥ. ರೋಗಕ್ಕೆ ಇಂತಹ ಔಷಧಿ ಸೇವಿಸಬೇಕು ಎಂದರೆ ರೋಗ ತಂದುಕೊಂಡೇ ಔಷಧಿ ಸೇವಿಸಬೇಕು ಎಂದು ಅರ್ಥವಾದೀತೇ?

ಸ್ವರ್ಗ ಬಯಸುವವನು ಜ್ಯೋತಿಷ್ಟೋಮ ಯಾಗವನ್ನು ಮಾಡಬೇಕು; ಮಳೆ ಬಯಸುವವನು ಕಾರೀರೀ ಯಾಗವನ್ನು ಮಾಡಬೇಕು; ಎಂದು ಹೇಳುವ ಮೇಲಿನ ವಾಕ್ಯಗಳಿಗೆ ಜ್ಯೋತಿಷ್ಟೋಮ ಮತ್ತು ಕಾರೀರೀ ಯಾಗಗಳಿಗೆ ಕ್ರಮವಾಗಿ ಸ್ವರ್ಗ ಮತ್ತು ಮಳೆಗಳನ್ನು ಕೊಡುವ ಸಾಮರ್ಥ್ಯವಿದೆಯೆಂದು ಅರ್ಥವೇ ಹೊರತು ಸ್ವರ್ಗವನ್ನು ಬಯಸಲೇಬೇಕು ಎಂದಾಗಲೀ; ಸ್ವರ್ಗ ಬಯಸುವವನು ಮಾತ್ರ ಜ್ಯೋತಿಷ್ಟೋಮಯಾಗ ಮಾಡಬೇಕೆಂದಾಗಲೀ, ಸ್ವರ್ಗವನ್ನು ಬಯಸಿಯೇ ಜ್ಯೋತಿಷ್ಟೋಮ ಮಾಡಬೇಕೆಂದಾಗಲೀ ಅರ್ಥವಲ್ಲ.

*****

## ಕರ್ಮಯೋಗದ ರಹಸ್ಯ

**''ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ''** (೨/೪೭)

''ವಿಹಿತ ಕರ್ಮವನ್ನು ತಪ್ಪದೇ ಆಚರಿಸುವುದು ಮಾತ್ರ ನಿನ್ನ ಕರ್ತವ್ಯ; ಅದರ ಫಲಗಳನ್ನು ಬಯಸುವುದಲ್ಲ''.

ಗೀತೆಯ ಸಾಮಾನ್ಯ ಪರಿಚಯವಿದ್ದವರಿಗೂ ಗೀತೆಯ ಈ ಶ್ಲೋಕ ಕಿವಿಗೆ ಬಿದ್ದಿರುತ್ತದೆ. ಗೀತೆಯೆಂದರೆ ಈ ಶ್ಲೋಕವೇ ಎಂಬಷ್ಟು ಇದಕ್ಕೆ ಪ್ರಾಧಾನ್ಯ ಬಂದಿದೆ. ಆದರೆ ಇದರ

ಅರ್ಥವನ್ನು ಇಂತಹ ಯಾವ ಗೊಂದಲಕ್ಕೂ ಅವಕಾಶವಾಗದಂತೆ ತಿಳಿಸಿಕೊಟ್ಟ ಶ್ರೇಯಸ್ಸು ಶ್ರೀಮದಾಚಾರ್ಯರಿಗೆ ಸಲ್ಲುತ್ತದೆ.

ಆತ್ಮೋದ್ಧಾರವನ್ನು ಬಯಸುವ ಪ್ರತಿಯೊಬ್ಬನೂ ತತ್ತ್ವಜ್ಞಾನವನ್ನು ಹೊಂದದೆ ಬೇರೆ ಮಾರ್ಗವೇ ಇಲ್ಲ. ಅಂತಹ ತತ್ತ್ವಜ್ಞಾನವನ್ನು ಹೊಂದಲು ಇರುವ ಮಾರ್ಗವೇ ಕರ್ಮಯೋಗ (**'ಕರ್ಮಣಾ ಜ್ಞಾನಮಾತನೋತಿ'** - ಶ್ರುತಿ). ಆದರೆ ಮಾಡಿದ ಪ್ರತಿ-ಕರ್ಮವೂ ಜ್ಞಾನಕ್ಕೆ ಕಾರಣವಾಗುವುದಿಲ್ಲ. ಆಚರಿಸಬೇಕಾದ ರೀತಿಯಲ್ಲಿ ಆಚರಿಸಲ್ಪಟ್ಟಾಗ ಮಾತ್ರವೇ ಅದರಿಂದ ತತ್ತ್ವಜ್ಞಾನ ಲಭಿಸುತ್ತದೆ.

ಸಕಲಕಾಮನೆಯನ್ನೂ ತೊರೆದು ಕರ್ಮವನ್ನು ಆಚರಿಸುವುದು ಎಷ್ಟು ವ್ಯವಹಾರ್ಯ? ಲೋಕದಲ್ಲಿ ಯಾರು ಯಾವುದೇ ಕೆಲಸವನ್ನು ಮಾಡುವಾಗಲೂ ಅದರ ಹಿಂದೆ ಒಂದಲ್ಲ ಒಂದು ಕಾಮನೆ ಇದ್ದೇ ಇರುತ್ತದೆ. ಪ್ರತಿಫಲವನ್ನು ಬಯಸದೆ ಎಂತಹ ದಡ್ಡನೂ ಕಾರ್ಯಾಚರಣೆಗೆ ತೊಡಗುವುದಿಲ್ಲ[೧] ಎಂದು ಗ್ರಂಥಗಳೂ ಸಾರಿವೆ. ಅಲ್ಲದೆ ಕೆಲಸವನ್ನು ಮಾತ್ರ ಮಾಡು; ಅದಕ್ಕೆ ಫಲ ಬಯಸುವ ಹಕ್ಕು ನಿನಗಿಲ್ಲ ಎಂಬುದು ಕಾರ್ಮಿಕವರ್ಗದ ಶೋಷಣೆಯಾಗುವ ಅಪಾಯವೂ ಆಗಿದೆ - ಎಂಬ ಪ್ರಶ್ನೆಗೆ ಇಲ್ಲಿ ಅವಕಾಶವಿದೆ.

ಇಲ್ಲಿ [೨]ಫಲತ್ಯಾಗವೆಂದರೆ ಸಕಲ ಫಲತ್ಯಾಗ ಎಂದು ಅಭಿಪ್ರಾಯವಲ್ಲ; ಸಕಲ ಕಾಮನೆಯನ್ನೂ ತೊರೆದು ಕರ್ಮ ಮಾಡುವುದು ಬಂಜೆಯೊಬ್ಬಳು ಮಗುವನ್ನು ಹೆರುವಷ್ಟೇ ಅಸಂಭಾವ್ಯ. ಆದರೆ ಗೀತೆಯು ಎಂದೂ ಇಂತಹ ತ್ಯಾಗವನ್ನು ಬೋಧಿಸುವುದೇ ಇಲ್ಲ.

ಪ್ರತಿಯೊಂದು ಕರ್ಮಕ್ಕೂ ಮುಖ್ಯ ಮತ್ತು ಅಮುಖ್ಯ ಎಂಬುದಾಗಿ ಎರಡು ರೀತಿಯ ಫಲಗಳಿರುತ್ತವೆ. ಕರ್ಮಗಳನ್ನು ಆಚರಿಸುವಾಗ ಅವುಗಳ ಮುಖ್ಯ ಗುರಿ ಮುಖ್ಯ ಫಲವನ್ನು ಹೊಂದುವುದಾಗಬೇಕೇ ಹೊರತು ಅಮುಖ್ಯ ಫಲವನ್ನಲ್ಲ; ಕೃಷಿಗೆ ಮುಖ್ಯ ಫಲವು ಧಾನ್ಯವೇ ಹೊರತು ಹೊಟ್ಟಲ್ಲ. ಒಂದು ಹಣ್ಣಿನ ಗಿಡವು ಒಂದು ಹಂತದಲ್ಲಿ ಹೂವು ಬಿಡುವುದು ಸಹಜವಾದರೂ ಅದರ ಮುಖ್ಯ ಫಲ ಹಣ್ಣೇ ಹೊರತು ಆ ಹೂವಲ್ಲ. ಹಣ್ಣಿನ ಗಿಡದಿಂದ ಹೂವನ್ನೇ ಬಯಸುವಂತಹ ಮೂರ್ಖತನದಂತೆ ವಿಹಿತ ಕರ್ಮಗಳಿಗೆ ಕ್ಷುದ್ರಫಲಗಳನ್ನು ಬಯಸುವುದು ಎಂಬುದು ಇದರ ಅರ್ಥ.

ಸಕಲ ವಿಹಿತಕರ್ಮಗಳಿಗೂ ತತ್ತ್ವಜ್ಞಾನ ಮತ್ತು ಭಗವತ್ಪ್ರೀತಿಗಳೇ ಮುಖ್ಯ ಫಲ; ಲೌಕಿಕ ಸುಖ ಸಂತೋಷಗಳು ಅಮುಖ್ಯ ಫಲ. ಹೂವಿಗೆ ಆಸೆಪಟ್ಟು ಅದನ್ನು

---

೧. ಪ್ರಯೋಜನಮನುದ್ದಿಶ್ಯ ನ ಮಂದೋಽಪಿ ಪ್ರವರ್ತತೇ।

೨. ಕಾಮನಿಷೇಧ ಏವಾತ್ರ। ಫಲಾನಿ ಹ್ಯಸ್ವಾತಂತ್ರ್ಯೇಣ ಭವಂತಿ। ಅತ ಏವ ಕಾಮೀ ಯಜೇತ ಇತ್ಯರ್ಥಃ। ನ ತು ಕಾಮೀ ಭೂತ್ವಾ ಇತ್ಯರ್ಥಃ॥ - ಗೀತಾಭಾಷ್ಯ

ಕೀಳುವವನಿಗೆ ಹಣ್ಣು ದೊರೆಯದೆ ಹೋಗುವಂತೆ ಅಲ್ಪ ಫಲಗಳಿಗೆ ಹಾತೊರೆಯು-ವವನಿಗೆ ಮುಖ್ಯ ಫಲವಾದ ಜ್ಞಾನವು ತಪ್ಪಿ ಹೋಗುತ್ತದೆ.

ಇಲ್ಲಿ ಇನ್ನೂ ಒಂದು ಸ್ವಾರಸ್ಯವುಂಟು. ಯಾವುದೇ ಕಾರ್ಯದಲ್ಲಿ ಅಮುಖ್ಯ ಫಲವು ಮೊದಲಿಗೆ ಗೋಚರಿಸಿ ಮುಖ್ಯಫಲಗಳು ಮಾತ್ರ ಕೊನೆಯಲ್ಲೇ ಕಾಣಸಿಗುತ್ತವೆ; ಹಣ್ಣಿನ ಗಿಡಗಳಲ್ಲಿ ಹೂವು ಮೊದಲಿಗೆ ಕಾಣಿಸಿಕೊಳ್ಳುವಂತೆ. ಆಗ ಸಹಜವಾಗಿಯೇ ಅದನ್ನು ಬಯಸುವ ಪ್ರವೃತ್ತಿಗೆ ಸಾಮಾನ್ಯನು ಗುರಿಯಾಗುತ್ತಾನೆ. ಹಣ್ಣಿನ ಗಿಡದಲ್ಲಿ ಹೂವನ್ನು ಕಿತ್ತಬೇಡಿ ಎಂಬ ಸಂದೇಶದಂತೆ ಕರ್ಮಮಾಡುವವನು ಫಲಾಸೆ ಬಿಡಬೇಕು ಎಂಬುದು. ಹೂ ಕಿತ್ತವನಿಗೆ ಹಣ್ಣು ಸಹ ಇಲ್ಲವಾಗುವಂತೆ ಲೌಕಿಕ ಕಾಮನೆಗಳನ್ನು ಬಯಸುವವನಿಗೆ ಮುಖ್ಯ ಫಲವಾದ ಜ್ಞಾನವು ತಪ್ಪಿಹೋಗುವುದು ಎಂದು ಇಲ್ಲಿಯ ಭಾವ.

ಭಗವದ್ಗೀತೆಯ ಈ ಮಾತು ಹೀಗೆ ಕರ್ಮಯೋಗದ ರಹಸ್ಯವನ್ನೇ ಬಿಚ್ಚಿಡುತ್ತದೆ; ವೇದಗಳ ಹೃದಯವನ್ನು ತೆರೆದಿಡುತ್ತದೆ.

ಮುಖ್ಯಫಲವನ್ನು ಮಾತ್ರ ಬಯಸಿ ಕರ್ಮಮಾಡುವವನಿಗೆ ಅಮುಖ್ಯ ಫಲವಾದ ಸ್ವರ್ಗಾದಿಗಳು ತಪ್ಪಿಹೋಗುವುದೇ? ಇದಕ್ಕೆ ಭಗವಂತ ಉತ್ತರಿಸುತ್ತಾನೆ. ಖಂಡಿತವಾಗಿಯೂ ಇಲ್ಲ, ಧಾನ್ಯ ಬರುವವರೆಗೂ ಕಾದು ಅನಂತರ ಪೈರನ್ನು ಕೊಯ್ಯುವವನಿಗೆ ಹೊಟ್ಟು ತಪ್ಪಿಹೋಗುತ್ತದೆಯೇ? ಎಂದಿಗೂ ಇಲ್ಲ, ಧಾನ್ಯದೊಂದಿಗೆ ಹೊಟ್ಟು ಸಹ ಲಭಿಸುತ್ತದೆ. ಇನ್ನೂ ಹೆಚ್ಚಾಗಿಯೇ ಲಭಿಸುತ್ತದೆ. ಅದರಂತೆ ಲೌಕಿಕ ಫಲಗಳನ್ನು ತೊರೆದು ತನ್ನ ಪಾಲಿನ ಕರ್ತವ್ಯವನ್ನು ಭಗವತ್ಪ್ರೀತಿಗೆಂದು ಆಚರಿಸುವ ಜಿಜ್ಞಾಸುವಿಗೆ ಜ್ಞಾನದಿಂದ [೧]ಮೋಕ್ಷವೂ ಲಭಿಸುತ್ತದೆ. ಜೊತೆಗೆ ಇಹಲೋಕದಲ್ಲೂ ಸಕಲವಿಧವಾದ ಭೋಗಭಾಗ್ಯಗಳೂ ದೊರೆಯುತ್ತವೆ. ಆದ್ದರಿಂದ ಸಾಧಕನ ಗಮನ ಮುಖ್ಯ ಫಲವಾದ ಭಗವತ್ಪ್ರೀತಿಯ ಕಡೆಗೆ ಇರಬೇಕೇ ಹೊರತು ಅಮುಖ್ಯ ಫಲಗಳ ಕಡೆಗೆ ಅಲ್ಲ.

ಈ ಶ್ಲೋಕಕ್ಕೆ ಮತ್ತೊಂದು ತೆರನಾದ ಅರ್ಥವನ್ನು ಸಹ ಶ್ರೀಮದಾಚಾರ್ಯರು ತಿಳಿಸಿರುವರು[೨]. ಪ್ರತಿಯೊಬ್ಬರಿಗೂ ಅವರವರ ಪಾಲಿನ ಕರ್ತವ್ಯ ವಿಹಿತವಾಗಿದೆ. ಆಯಾ ಕರ್ಮಗಳ ಮುಖ್ಯಫಲವಾದ ಜ್ಞಾನಭಕ್ತಿಗಳನ್ನು ಆಶಿಸುವುದು ಸಹ ವಿಹಿತವಾಗಿದೆ. ಆದರೆ ಅಂತಹ ಫಲವನ್ನೂ ಅವರಾಗಿಯೇ ತೆಗೆದುಕೊಳ್ಳುವ ಹಕ್ಕು ಮಾತ್ರ ಯಾರಿಗೂ ಇಲ್ಲ.

---

೧. ತ್ರಿದಿವಾದಿಲಭ್ಯಮಪಿ ನಾಸ್ಯ ಫಲಂ ಕಥಿತಂ ಕೃಷೇರಿವ ಪಲಾಲಕುಲಮ್ ॥

– ಸುಮಧ್ವವಿಜಯ(೧೧/೬)

೨. ಕರ್ಮಾಧಿಕಾರಿಣ ಏವ ತ್ವದಾದಯೋ ಜೀವಾಃ। ಫಲಂ ತು ಮದಾಯತ್ತಮಿತಿ ಭಾವಃ॥

– ಗೀತಾತಾತ್ಪರ್ಯನಿರ್ಣಯ

ದಿನವಿಡೀ ದುಡಿಯುವ ಕೂಲಿಯವನಾಗಲೀ ತಿಂಗಳು ಪೂರ್ತಿ ಕೆಲಸ ಮಾಡುವ ನೌಕರನಿಗಾಗಲೀ ಅವರ ದುಡಿಮೆಗೆ ತಕ್ಕ ಸಂಬಳವನ್ನು ಬಯಸುವ ಹಕ್ಕು ಇದ್ದೇ ಇದೆ. ಆದರೆ ಅದನ್ನೂ ಬೊಕ್ಕಸಕ್ಕೆ ಕೈಹಾಕಿ ತಾವೇ ತೆಗೆದುಕೊಳ್ಳುವ ಹಕ್ಕು ಮಾತ್ರ ಎಂದೂ ಇರುವುದಿಲ್ಲ. ಆ ಹಕ್ಕು ಅವರಿಗೆ ಕೆಲಸವನ್ನು ವಹಿಸುವ ಒಡೆಯನಿಗೆ ಮಾತ್ರ ಇರುತ್ತದೆ.

ಆದರಂತೆ ಆಯಾ ಚೇತನರಿಗೆ ಅವರವರ ಅರ್ಹತೆಗೆ ಅನುಸಾರವಾಗಿ ಕರ್ತವ್ಯ ಕರ್ಮವನ್ನು ವಿಧಿಸುವ ಭಗವಂತನಿಗೆ ಮಾತ್ರ ಕರ್ಮಫಲವನ್ನು ನೀಡುವ ಅಧಿಕಾರವಿರುವುದು. ಅಂತಹ ಅಧಿಕಾರವನ್ನು ಸ್ವಾತಂತ್ರ್ಯೇಣ ಬೇರಾರೂ ಹೊಂದಿಲ್ಲ ಎಂದು ಭಾವ. ವಿದ್ಯಾರ್ಥಿಗೆ ಉತ್ತರ ಬರೆಯುವ ಅಧಿಕಾರವಿದೆಯೇ ಹೊರತು ಅದಕ್ಕೇ ತಾನೇ ಅಂಕಗಳನ್ನು ಹಾಕಿಕೊಂಡು ಫಲಿತಾಂಶವನ್ನು ಘೋಷಿಸಿಕೊಳ್ಳುವ ಅಧಿಕಾರವಿರುವುದಿಲ್ಲವಷ್ಟೇ ?

ಈ ಹಿನ್ನೆಲೆಯನ್ನೆಲ್ಲಾ ಅರಿಯದೆ ಫಲಕ್ಕಾಗಿ ಮಾತ್ರವೇ ಕರ್ಮವನ್ನು ಆಚರಿಸುವ ಪ್ರವೃತ್ತಿ ಮತ್ತು ಫಲ ಬೇಡವೆನ್ನುವ ಕಾರಣದಿಂದ ಕರ್ಮವನ್ನು ತ್ಯಜಿಸುವ ಪ್ರವೃತ್ತಿ ಇವೆರಡೂ ಎಂದೂ ಯೋಗ್ಯವೆನ್ನಿಸುವುದಿಲ್ಲ[೧].

## ಸಮತ್ವಂ ಯೋಗ ಉಚ್ಯತೇ[೨]

ಕರ್ಮಾಚರಣೆಯ ಹಿನ್ನೆಲೆ ಹೀಗಿರುವುದರಿಂದ ಸಾಧಕನು ತನ್ನ ಪಾಲಿನ ಕರ್ತವ್ಯವನ್ನು ತತ್ತ್ವಜ್ಞಾನವನ್ನು ಹೊಂದುವ ಮುಖ್ಯ ಉದ್ದೇಶದಿಂದ ಆಚರಿಸಲೇಬೇಕು. ಇತರ ಫಲಗಳ ಆಕಾಂಕ್ಷೆಯನ್ನು ಮಾತ್ರ ಪೂರ್ಣವಾಗಿ ತೊರೆಯಲೇಬೇಕು. ಅಂತಹ ಫಲಗಳು ದೊರೆಯಲಿ, ದೊರೆಯದೇ ಇರಲಿ ಅವುಗಳಿಂದ ವಿಚಲಿತನಾಗಬಾರದು; ಅಂಚೆಯವನಿಗೆ ಸಂಬಂಧಪಟ್ಟವರಿಗೆ ಪತ್ರವನ್ನು ತಲುಪಿಸುವುದು ಕರ್ತವ್ಯವೇ ಹೊರತು ಆ ಪತ್ರದಲ್ಲೇನಿದೆ, ಅದನ್ನು ತಲುಪಿಸಿದ್ದರಿಂದ ಮುಂದೆ ಪರಿಣಾಮ ಏನಾಗಬಹುದು ಎಂದು ಚಿಂತಿಸುವ ಅಧಿಕ ಪ್ರಸಂಗ ಬೇಕಿಲ್ಲ. ಫಲಸ್ನೇಹವನ್ನು ತೊರೆದ ಇಂತಹ ಸಮತ್ವವೇ ಯೋಗ ಎನ್ನಿಸುತ್ತದೆ.

*****

## ಫಲಶ್ರುತಿಯ ಮರ್ಮ

ಸ್ವರ್ಗಾದಿ ಅವಾಂತರಫಲಗಳನ್ನು ಆಶಿಸುವುದು ತರವಲ್ಲವಾದರೆ 'ಸ್ವರ್ಗಕಾಮೋ ಯಜೇತ' ಇತ್ಯಾದಿಯಾಗಿ ಅಂತಹ ಫಲಗಳನ್ನು ಹೇಳಿರುವುದಾದರೂ ಏತಕ್ಕೆ ? ಎಂಬ

---

೧. ಮಾ ಕರ್ಮಫಲಹೇತುರ್ಭೂರ್ಮಾ ತೇ ಸಂಗೋऽಸ್ತ್ವಕರ್ಮಣಿ ॥ – ಗೀತಾ (೨/೪೭)

೨. ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ ।
ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ ॥ – ಗೀತಾ(೨/೪೮)

ಮತ್ತೊಂದು ಪ್ರಶ್ನೆಗೂ ಇಲ್ಲಿ ಅವಕಾಶವಿದೆ. ಇದಕ್ಕೆ 'ರೋಚನಾರ್ಥಂ ಫಲಶ್ರುತಿಃ' , 'ಯಥಾ ಭೈಷಜ್ಯರೋಚನಂ' ಎಂಬುದಾಗಿ ಭಾಗವತ್[೧] ಉತ್ತರಿಸಿದೆ.

ಭಗವಂತನ ಸರ್ವೋತ್ತಮತ್ವವನ್ನು ತಿಳಿದುಕೊಂಡು ಅವನ ಪ್ರೀತಿಗಾಗಿ ಅವನು ವಿಧಿಸುವ ಸಕಲಕರ್ಮಗಳನ್ನೂ ಆಚರಿಸಿ ಅವನ್ನೆಲ್ಲ ಅವನಿಗೇ ಸಮರ್ಪಿಸಿ ಜಿಜ್ಞಾಸುಗಳೆಲ್ಲ ಅವನಿಂದ ಮೋಕ್ಷ ಸುಖವನ್ನು ಪಡೆಯಬೇಕೆಂಬುದೇ ವೇದಾದಿ ಶಾಸ್ತ್ರಗಳ ಮುಖ್ಯ ಉದ್ದೇಶ. ಆದರೆ ಆರಂಭದ ಹಂತದ ಸಾಮಾನ್ಯ ಸಾಧಕರಿಗೆ ಇಂತಹ ಆದರ್ಶವು ಎಂದೂ ತಕ್ಷಣದಲ್ಲಿ ಎಟುಕಲಾರದು. ಲೌಕಿಕಸುಖದ ಅಭಿಲಾಷೆಯನ್ನು ಪೂರ್ಣ ತೊರೆಯಲಾರದ ಅಂತಹ ಜನಕ್ಕೆ ಅವರಿಗೆ ಅಪೇಕ್ಷಿತವಾದ ಅಂತಹ ಫಲಗಳೂ ಸತ್ಕರ್ಮಗಳಿಂದ ದೊರೆಯುವುದು ಎಂಬುದನ್ನು ತಿಳಿಸದೇ ಹೋದಲ್ಲಿ ಅವರು ಸಕಲ ಕರ್ಮಗಳನ್ನೂ ತೊರೆಯುವ ಅಪಾಯವುಂಟು. ರೋಗದಿಂದ ಬಳಲುವ ಮಗು ಔಷಧಿಯ ಹಿರಿಮೆಯನ್ನು ಅರ್ಥಮಾಡಿಕೊಳ್ಳಲಾರದೆ ಅದನ್ನು ವಾಸಿಮಾಡಬಲ್ಲ ಔಷಧಿಯನ್ನು ಕಹಿ ಎಂಬ ಕಾರಣಕ್ಕೆ ತಿರಸ್ಕರಿಸುತ್ತದೆ. ಅದಕ್ಕೆ ಅದರ ತಾಯಿಯು ಆಗ ಬೆಲ್ಲದ ಆಮಿಷವನ್ನು ಒಡ್ಡಿ ಅದನ್ನು ಕುಡಿಸಿಬಿಡುತ್ತಾಳೆ. ಬೆಲ್ಲದ ಆಸೆಗೆ ಮಗು ಔಷಧಿಯನ್ನು ಕುಡಿಯುತ್ತದೆ; ರೋಗದಿಂದ ಬಿಡುಗಡೆ ಹೊಂದುತ್ತದೆ; ಅದರಂತೆ ಕಠಿಣವೆನ್ನಿಸುವ ವಿರಕ್ತಿಯ (ನಿಷ್ಕಾಮಕರ್ಮದ) ಜಾಡನ್ನು ತತ್ಕ್ಷಣವೇ ತಿಳಿಯಲಾಗದ ಜನಕ್ಕೆ ಮಾತೃಹೃದಯದ ಶ್ರುತಿಯು ಇಂತಹ ಫಲಾಪೇಕ್ಷೆಯ ಆಮಿಷವನ್ನೊಡ್ಡಿ ಅವರನ್ನು ಕರ್ತವ್ಯ ಪರಾಯಣರನ್ನಾಗಿ ಮಾಡುತ್ತದೆ.

ಪ್ರೌಢರು ಮಾತ್ರ ಬೆಲ್ಲದ ಆಮಿಷವಿಲ್ಲದೆ ಕುಡಿಯುವಂತೆ ಜ್ಞಾನಿಗಳು ಕ್ಷುದ್ರ ಫಲಾಸೆಯನ್ನು ತೊರೆದೇ ಕರ್ಮಗಳನ್ನು ತಪ್ಪದೇ ಆಚರಿಸುತ್ತಾರೆ. ಇಂತಹ ಮಟ್ಟವನ್ನು ತಲುಪಿಸುವ ವೇದಗಳ ಹೃದಯವನ್ನು ಅರಿಯದೆ ಫಲಾಪೇಕ್ಷೆಯಲ್ಲೇ ಜೀವನ ಕಳೆಯುವ ಜನರು ಔಷಧಿಯನ್ನು ತ್ಯಜಿಸಿ ಬೆಲ್ಲವನ್ನು ಮಾತ್ರ ಬಯಸಿ ಆತ್ಮವಿನಾಶವನ್ನು ತಂದುಕೊಳ್ಳುವ ಅವಿವೇಕಿಗಳೇ ಆಗುವರು.

*****

## ಕೃಪಣಾಃ ಫಲಹೇತವಃ[೨]

ತತ್ತ್ವಜ್ಞಾನಕ್ಕೆ ದೊರೆಯುವ ಫಲ ಅಪಾರವಾದದು. ಆದರೆ ಕಾಮ್ಯಕರ್ಮಕ್ಕೆ ದೊರೆಯುವ ಫಲ ಅತ್ಯಲ್ಪವಾದುದು. ಆದ್ದರಿಂದಲೇ ಅಂತಹ ಕರ್ಮವು ಮಹತ್ತ್ವದ

---

೧. ಕಾಮವಚನಾನಾಂ ತು ತಾತ್ಪರ್ಯಂ ಭಗವತ್ಯೈವೋಕ್ತಮ್ –
'ರೋಚನಾರ್ಥಂ ಫಲಶ್ರುತಿಃ' 'ಯಥಾ ಭೈಷಜ್ಯರೋಚನಮ್' ಇತಿ ಭಾಗವತೇ। – ಗೀತಾಭಾಷ್ಯ

೨. ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾದ್ಧನಂಜಯ।
ಬುದ್ಧೌ ಶರಣಮನ್ವಿಚ್ಛ ಕೃಪಣಾಃ ಫಲಹೇತವಃ॥ –ಗೀತಾ (೨/ ೪೯ )

ದೃಷ್ಟಿಯಿಂದ ಜ್ಞಾನಕ್ಕಿಂತ ಕಡಿಮೆಯಾಗಿದೆ. ವಿವೇಕಿಯು ಈ ಕಾರಣದಿಂದಾಗಿ ಸದಾ ಜ್ಞಾನಕ್ಕಾಗಿ ಹಾತೊರೆಯುತ್ತಿರಬೇಕೇ ಹೊರತು ಕಾಮ್ಯಕರ್ಮಗಳಲ್ಲೇ ನಿರತನಾಗಿ ತನಗೆ ದೊರೆತ ಅಮೂಲ್ಯ ಅವಕಾಶವನ್ನು ಹಾಳು ಮಾಡಿಕೊಳ್ಳಕೂಡದು.

ಬಸ್ಸು, ರೈಲು ಮೊದಲಾದ ವಾಹನಗಳಲ್ಲಿ ಕೂಡುವುದು ತಾನು ತಲುಪಬೇಕಾದ ಊರಿನತ್ತ ಪ್ರಯಾಣ ಮಾಡಲೆಂದೇ ಹೊರತು ಬಸ್ಸಿನಲ್ಲೇ ಆರಾಮಾಗಿ ಕೂಡಲೆಂದಲ್ಲ. ಅದರಂತೆ ನಮ್ಮ ಕರ್ಮಾಚರಣೆಯ ಮುಖ್ಯಗುರಿ ತತ್ತ್ವಜ್ಞಾನದ ಪ್ರಾಪ್ತಿಯೇ ಆಗಿರಬೇಕು. ಕೇಳಿದ್ದನ್ನು ಕೊಡುವ ಕಾಮಧೇನುವಿನಿಂದ ಗೋಮಯವನ್ನು ಬಯಸಿ ಬೀಗುವಷ್ಟೇ ಮೂರ್ಖತನ ಜ್ಞಾನಸಾಧನವಾದ ಕರ್ಮಗಳನ್ನು ಕ್ಷುದ್ರಕಾಮನೆಗಳ ಪೂರೈಕೆಗೋಸ್ಕರ ಆಚರಿಸುವುದು; ಅಂತಹವರ ಪಾಡು ದೀನ ಪ್ರವೃತ್ತಿಯೇ ಸರಿ[೧].

ಮನುಷ್ಯನು ಸಾಧನೆಯಲ್ಲಿ ಮುಂದುವರೆಯುತ್ತಾ ಹೋದಂತೆ ಒಂದು ಹಂತದಲ್ಲಿ ಅಹಂಕಾರಕ್ಕೆ ಒಳಗಾಗುವ ಅಪಾಯವಿದೆ. ಬೆಳೆಯೊಂದಿಗೆ ಕಳೆಯೂ ಬೆಳೆಯುವಂತೆ ಅಹಂಕಾರವೂ ಬೆಳೆಯುತ್ತಿರುತ್ತದೆ. ಕಳೆಯು ಹಾಗೆಯೇ ಉಳಿದಲ್ಲಿ ಬೆಳೆಯು ಪೂರ್ಣವಾಗಿ ನಾಶವಾಗುವ ಅಪಾಯವುಂಟು; ಸಾಧನೆಗಿಂತ ಅಹಂಕಾರವೇ ಹೆಚ್ಚುತ್ತಾ ಹೋದಲ್ಲಿ ಕೊನೆಗೆ ತಾನೇ ಪರಮಾತ್ಮ ಎಂಬ ಹಂತವನ್ನೂ ತಲುಪಿ ಅದು ದುರ್ಗತಿಗೇ ಕಾರಣವಾಗುತ್ತದೆ.

ಶ್ವೇತಕೇತುವು ಹನ್ನೆರಡು ವರ್ಷಗಳ ಕಾಲ ಯೋಗ್ಯಗುರುಗಳ ಬಳಿ ವೇದಾಧ್ಯಯನ ಮಾಡಿ ತಂದೆಯ ಬಳಿಗೆ ಮರಳುತ್ತಾನೆ. ತಾನು ಚೆನ್ನಾಗಿ ವೇದಾಧ್ಯಯನ ಮಾಡಿದವನು ಎಂಬ ಅಹಂಕಾರ ಅವನಲ್ಲಿ ಮನೆಮಾಡಿ ಅವನಿಗೆ ತಾನು ಸಾಕ್ಷಾತ್ ಭಗವಂತನೋ ಅಥವಾ ಆ ಭಗವಂತನ ಅಂಶ ಸಂಭೂತನೋ ಇರಬೇಕು ಎಂಬ ಭಾವವನ್ನು [೨]ಬಿತ್ತಿರುತ್ತದೆ. ಅವನ ಸ್ಥಿತಿಯನ್ನು ಕಂಡು ಕನಿಕರಪಟ್ಟ ತಂದೆ ಉದ್ದಾಲಕರು, ಅವನಿಗೆ ಭಗವತ್ತತ್ತ್ವವನ್ನು ಉಪದೇಶಿಸಿ '**ಅತತ್ವಮಸಿ ಶ್ವೇತಕೇತೋ**' ಶ್ವೇತಕೇತು! ನೀನು ಖಂಡಿತವಾಗಿ ಪರಬ್ರಹ್ಮನಲ್ಲ, ನಿನ್ನ ಅಹಂಕಾರವನ್ನು ತೊರೆದು ಅವನಲ್ಲಿ ಭಕ್ತಿಮಾಡು ಎಂದು ಉಪದೇಶಿಸಿ ಅವನ ಉದ್ಧಾರಕ್ಕೆ ಕಾರಣರಾಗುತ್ತಾರೆ ಎಂಬ ಛಾಂದೋಗ್ಯೋ-ಪನಿಷತ್ತಿನ ಪ್ರಸಂಗವನ್ನು ಇಲ್ಲಿ ನೆನೆಯಬಹುದು.

---

೧. ಫಲಂ ಕರ್ಮಕೃತೌ ಹೇತುರ್ಯೇಷಾಂ ತೇ ಫಲಹೇತವಃ॥ –ಗೀತಾಭಾಷ್ಯ

೨. ಸರ್ವಾನ್ ವೇದಾನಧೀತ್ಯೈವ ಪ್ರಜ್ಞಾಧಿಕ್ಯೇನ ಹೇತುನಾ।
ಶ್ವೇತಕೇತುರಹಂಕಾರಾತ್ ಪ್ರಾಯಶೋ ನಾಸ್ಮಿ ಮಾನುಷಃ॥
ದೇವೋ ವಾ ಕೇಶವಾಂಶೋ ವಾ ನಾಸ್ಮಿ ಕೇವಲಮಾನುಷಃ।
ಏವಂ ಮಹತ್ತ್ವಬುದ್ಧ್ಯೇವ ದರ್ಪಪೂರ್ಣೋಽಭ್ಯಗಾತ್ ಪಿತುಃ॥
ಸಕಾಶಮ್ ........॥ ಇತ್ಯಾದಿ – ಗೀತಾತಾತ್ಪರ್ಯನಿರ್ಣಯಃ

ಜ್ಞಾನದ ಫಲವು ಕರ್ಮದ ಫಲಕ್ಕಿಂತ ಉತ್ತಮ ಮಾತ್ರವಲ್ಲದೇ ವಿಲಕ್ಷಣವೂ ಆಗಿದೆ. ಕಾಮ್ಯಕರ್ಮವು ಯಾವ ಹಂತದಲ್ಲೂ ಕಾಣದ ವೈಲಕ್ಷಣ್ಯ ಜ್ಞಾನಫಲದಲ್ಲಿದೆ. ಜ್ಞಾನಿಯು ಪುಣ್ಯ ಪಾಪ ಎರಡನ್ನು ಸಹ ತೊರೆಯುವನು ಎಂದರೆ ಅವೆರಡಕ್ಕೂ ಅತೀತನಾಗಿ ವರ್ತಿಸುವನು. ಬರೀ ಕಾಮ್ಯಕರ್ಮದಲ್ಲಿ ನಿರತನಾಗುವವನಿಗೆ ಇಂತಹ ಹಿರಿಮೆಯು ಯಾವ ಹಂತದಲ್ಲೂ ಸಾಧ್ಯವಾಗುವುದೇ ಇಲ್ಲ.

ಇಲ್ಲಿ ಜ್ಞಾನಿಯು ಪುಣ್ಯ ಪಾಪಗಳನ್ನು ತೊರೆಯುವನೆಂದರೆ ಪಾಪಗಳನ್ನು ಸಂಪೂರ್ಣವಾಗಿ ಕಳೆದುಕೊಳ್ಳುವನು ಎಂದರ್ಥ. ಪುಣ್ಯದ ವಿಚಾರದಲ್ಲಿ ಹಾಗಲ್ಲ, ಪುಣ್ಯವು ಇಷ್ಟ ಪುಣ್ಯ ಮತ್ತು ಅನಿಷ್ಟ ಪುಣ್ಯ ಎಂಬುದಾಗಿ ಎರಡು ವಿಧ; ಇವುಗಳಲ್ಲಿ ಅನಿಷ್ಟ ಪುಣ್ಯವು ಮತ್ತೊಮ್ಮೆ ಅವನ ಹುಟ್ಟು ಮೊದಲಾದವುಗಳಿಗೆ ಕಾರಣವಾಗುವಂತಹುದು. ಇಷ್ಟ ಪುಣ್ಯವು ಮೋಕ್ಷದಲ್ಲಿ ಆನಂದಾತಿಶಯಕ್ಕೆ ಕಾರಣವಾಗುವಂತಹುದು. ಜ್ಞಾನಿಯು ಇವುಗಳಲ್ಲಿ ಇಷ್ಟ ಪುಣ್ಯವನ್ನು ಮಾತ್ರ ಉಳಿಸಿಕೊಂಡು ಅನಿಷ್ಟ ಪುಣ್ಯವನ್ನು ತೊರೆದು ಬಿಡುವನು.

ಪರೀಕ್ಷೆಗೆ ಹೋಗುವ ವಿದ್ಯಾರ್ಥಿಯು ಹಾದಿಯಲ್ಲೇ ಕಾಣುವ ಎಷ್ಟೋ ವಸ್ತುಗಳನ್ನು ಸ್ವಲ್ಪವೂ ಗಮನಿಸದೆ ತನ್ನ ಮುಖ್ಯ ಕರ್ತವ್ಯವಾದ ಪರೀಕ್ಷೆಯತ್ತ ಗಮನಿಸುವಂತೆ ವಿವೇಕಿಯು ವರ್ತಿಸುತ್ತಾನೆ. ದೂರದ ಊರಿಗೆ ವರ್ಗವಾಗಿ ಹೋಗುವ ಅಧಿಕಾರಿಯು ತನ್ನೊಂದಿಗೆ ಸುಲಭವಾಗಿ ಒಯ್ಯಬಹುದಾದ ಹಣಕಾಸು ಮೊದಲಾದವುಗಳನ್ನು ತನ್ನೊಂದಿಗೆ ತೆಗೆದುಕೊಂಡು ಹೋಗುತ್ತಾನೆ. ಆದರೆ ಉಪಯುಕ್ತವಾಗಿದ್ದರೂ ಸಹ ತನ್ನೊಂದಿಗೆ ಅಷ್ಟು ದೂರಕ್ಕೆ ಒಯ್ಯಲಾಗದಂತಹ ಮಂಚ, ಕುರ್ಚಿ ಮೊದಲಾದವುಗಳನ್ನು ತಾನಿದ್ದ ಊರಿನಲ್ಲಿಯೇ ವಿಲೇವಾರಿ ಮಾಡಿ ಹೋಗುವಂತೆ ಜ್ಞಾನಿಯ ವರ್ತನೆ ಇರುತ್ತದೆ. ಅವನು ಭಗವತ್ಸೇವೆಗೆ ಅಡ್ಡಿಯಾಗುವ ಎಷ್ಟೋ ವಸ್ತುಗಳು ಪ್ರಿಯವಾಗಿದ್ದರೂ ಸಹ ತ್ಯಜಿಸಿ ಹರಿಪ್ರೀತಿಕರವಾದ ಕಾರ್ಯಗಳಲ್ಲಿ ಮಾತ್ರ ತನ್ನನ್ನು ತೊಡಗಿಸಿಕೊಳ್ಳುತ್ತಾನೆ.

*****

## [೧] ಯೋಗಃ ಕರ್ಮಸು ಕೌಶಲಮ್

ಒಂದು ಬಾಣವು ಎಷ್ಟೇ ಹರಿತವಾಗಿದ್ದರೂ ಅದನ್ನು ಬರೀ ಕೈಯಿಂದ ಎಸೆಯುವು-ದರಿಂದ ದೂರದ ಗುರಿಯನ್ನು ಭೇದಿಸಲು ಸಾಧ್ಯವಾಗುವುದಿಲ್ಲ. ಅದನ್ನು ಧನುಸ್ಸಿನಲ್ಲಿ ಹೂಡಿ ಏಕಾಗ್ರತೆಯಿಂದ ಪ್ರಯೋಗಿಸಿದಾಗ ಮಾತ್ರ ಗುರಿಯನ್ನು ಭೇದಿಸಲು ಸಾಧ್ಯ. ಈ ಈ ಕೌಶಲವನ್ನು ಧನುರ್ವಿದ್ಯೆ ಎನ್ನಿಸುವುದು. ಇಲ್ಲಿ ಗುರಿಯನ್ನು ತಲಪುವುದು ಬಾಣವೇ ಹೊರತು ಧನುಸ್ಸಲ್ಲ. ಆದರೆ ಬಾಣವು ಹಾಗೆ ಗುರಿ ತಲುಪಲು ಧನುಸ್ಸು ಅತ್ಯಗತ್ಯ.

---

೧. ಯಥಾವದ್ವಿಷ್ಣುಂ ಜ್ಞಾತ್ವಾ ತದರ್ಥತ್ವೇನ ಕರ್ಮಕರಣಮಿತ್ಯೇತತ್ ಕರ್ಮಕೌಶಲಮೇವ ಯೋಗಃ।

–ಗೀತಾತಾತ್ಪರ್ಯನಿರ್ಣಯಃ

ಅದರಂತೆ ಮೋಕ್ಷಕ್ಕೆ ಸಾಧನವಾಗುವುದು ಜ್ಞಾನವೇ ಹೊರತು ಕರ್ಮವಲ್ಲ. ಆದರೆ ಆ ಜ್ಞಾನದ ಉದಯಕ್ಕೆ ಕರ್ಮವು ಅತ್ಯಗತ್ಯ.

ಧನುಸ್ಸು ಬಾಗಬೇಕು: ಅದಕ್ಕೆ ಹಗ್ಗದ ಅಗತ್ಯವಿದೆ. ಅದರಂತೆ ಕರ್ಮವು ವಿನಮ್ರವಾದ ರೀತಿಯಲ್ಲಿ ನಡೆಯಬೇಕು ಅದಕ್ಕೆ ಶಾಸ್ತ್ರವೆಂಬ ನಿಯಂತ್ರಣ ಅತ್ಯಗತ್ಯ. ಎಂಬುದು ಸಹ ಇಲ್ಲಿ ಗಮನಿಸಬೇಕಾದ ಇನ್ನೊಂದು ಅಂಶ.

ಅದರಂತೆ ಒಂದು ಕರ್ಮವು ಎಷ್ಟೇ ಉತ್ತಮವಾಗಿದ್ದರೂ ಸಹ ಅದನ್ನು ಆಚರಿಸಿದ ಮಾತ್ರಕ್ಕೆ ತತ್ತ್ವಜ್ಞಾನವು ಉದಿಸುವುದಿಲ್ಲ. ಅದು ಮೂಲತಃ ವಿಹಿತವಾಗಿರಬೇಕು. ಶ್ರದ್ಧೆಯಿಂದ ಮಾಡಲ್ಪಟ್ಟಿರಬೇಕು. ವಿಷ್ಣು ಪ್ರೀತಿಯ ಮಹೋನ್ನತ ಧ್ಯೇಯದಿಂದ ಕೂಡಿರಬೇಕು; ಫಲಾಪೇಕ್ಷೆಯ ಸೋಂಕನ್ನು ಪೂರ್ಣವಾಗಿ ತೊರೆದಿರಬೇಕು. ಭಗವಂತನಿಗೆ ಭಕ್ತಿಯಿಂದ ಸಮರ್ಪಿತವಾಗಬೇಕು. ಅಂತಹ ಕರ್ಮವನ್ನೇ ಯೋಗ ಎನ್ನುವರು.

ಯೋಗವೆಂದರೆ ಬೇರಾವುದೋ ಪದಾರ್ಥವೆಂದು ಭಾವಿಸಿ ಕರ್ಮವನ್ನು ತೊರೆದು ಅದನ್ನು ಮಾತ್ರ ಅನುಷ್ಠಾನ ಮಾಡಿದರಾಯಿತು ಎಂದು ಸಹ ಕೆಲವರು ತಿಳಿದಿರುವುದುಂಟು. ಆದರೆ ಯೋಗದ ಮೂಲ ಸ್ವವಿಹಿತ ಕರ್ಮಾಚರಣೆಯೇ ಆಗಿದೆ ಎಂಬ ಅಂಶವನ್ನು ಇಂತಹ ಜನ ಮರೆಯುವರು.

ನಂದಾದೀಪಕ್ಕೆ ಹಾಕಲು ಬೇಕಾದ ತುಪ್ಪವು ದೊರೆಯುವುದು ಮೂಲತಃ ಹಾಲಿನಿಂದಲೇ; ಹೆಪ್ಪು ಹಾಕಿದ ಹಾಲೇ ಮೊಸರಾಗಿ ಅದನ್ನು ಕಡೆದಾಗ ಬರುವ ಬೆಣ್ಣೆಯೇ ತುಪ್ಪವಾಗಿ , ದೀಪವನ್ನು ಉರಿಸುವ ಸಾಧನವಾಗುತ್ತದೆ. ಅದರಂತೆ ಯೋಗವು ಕರ್ಮದಿಂದ ಬೇರೆಯಾದ ಮತ್ತೊಂದು ಸಾಧನೆಯಲ್ಲ. ಅದು ಮೂಲತಃ ಕರ್ಮವೇ ಆಗಿದ್ದು ಅದಕ್ಕೆ ಫಲಾಸೆಯ ಸೋಂಕು ತಗಲದೆ ಕೃಷ್ಣಾರ್ಪಣ ಬುದ್ಧಿಯಿಂದ ಆಚರಿಸಲ್ಪಟ್ಟಾಗ ಮಾತ್ರ ಜ್ಞಾನಿಗಳಿಗೆ ಸಂಸಾರ ಬಂಧನದಿಂದ ಪಾರಾಗಿ ಮೋಕ್ಷವನ್ನು ಪಡೆಯುವ ಸಾಧನವಾಗುತ್ತದೆ.

*****

## ಯೋಗಾನುಷ್ಠಾನದ ಅವಧಿ

ಇಂತಹ ನಿಷ್ಕಾಮಕರ್ಮಾನುಷ್ಠಾನರೂಪ ಯೋಗವನ್ನು ಜಿಜ್ಞಾಸುವು ಎಷ್ಟು ಕಾಲ ಆಚರಿಸಬೇಕು? ಭಗವಂತನು ಅದನ್ನು ಎರಡು ಶ್ಲೋಕಗಳಲ್ಲಿ ಉತ್ತರಿಸಿರುವನು. ಕರ್ಮಯೋಗದ ಗುರಿ ತತ್ತ್ವಜ್ಞಾನದ ಪ್ರಾಪ್ತಿಯಾದ್ದರಿಂದ ಅಂತಹ ತತ್ತ್ವಜ್ಞಾನವು ಪೂರ್ಣವಾಗಿ ಲಭಿಸುವವರೆಗೂ ಇಂತಹ ನಿಷ್ಕಾಮ ಕರ್ಮದ ಅನುಷ್ಠಾನ ಅತ್ಯವಶ್ಯ.

ಪರಬ್ರಹ್ಮ ಸಾಕ್ಷಾತ್ಕಾರವೇ ತತ್ತ್ವಜ್ಞಾನದ ಮುಖ್ಯವಾದ ಅರ್ಥ. ಇಂತಹ ಬ್ರಹ್ಮ ಸಾಕ್ಷಾತ್ಕಾರಕ್ಕೆ ಸಾಧನವಾದ ಮನಸ್ಸು ನಿರ್ಮಲವೂ ನಿಶ್ಚಲವೂ ಆದಾಗ ಮಾತ್ರವೇ ಅದರಲ್ಲಿ ಪರಮಾತ್ಮನು ಗೋಚರಿಸುವನು.

ಸರೋವರದ ಜಲದಲ್ಲಿ ಸೂರ್ಯಚಂದ್ರರ ಪ್ರತಿಬಿಂಬವು ಗೋಚರಿಸಲು ಆ ಜಲವು ನಿರ್ಮಲವಾಗಿರಬೇಕು, ನಿಶ್ಚಲವಾಗಿರಬೇಕು. ಅದರಂತೆ ಕಾಮಕ್ರೋಧಾದಿಗಳನ್ನು ತೊರೆದು ನಿರ್ಮಲವೂ, ಸಂಶಯ ಮಿಥ್ಯಾಜ್ಞಾನವನ್ನು ತೊರೆದು ನಿಶ್ಚಲವೂ ಆಗುವ ಮಾನಸ ಸರೋವರದಲ್ಲಿ ಬಿಂಬರೂಪಿಯಾದ ಪರಬ್ರಹ್ಮನು ಗೋಚರಿಸುವನು.

ಮನೋನೈರ್ಮಲ್ಯಕ್ಕೆ ಸದಾಚಾರವೂ, ಮನಸ್ಸಿನ ಅಚಲತ್ವಕ್ಕೆ ಸದ್ವಿಚಾರವೂ ಸಾಧನವಾಗಿವೆ. ವ್ರತಉಪವಾಸಗಳಿಂದ ಮನಸ್ಸು ನಿರ್ಮಲವಾಗುತ್ತದೆ. ಶಾಸ್ತ್ರಾಧ್ಯಯನ-ದಿಂದ ವಿಚಾರ ಸ್ಫುಟವಾಗುತ್ತದೆ. ಪರಮಾತ್ಮನು ಸಾಕ್ಷಾತ್ತಾಗಿ ಕಾಣುವವರೆಗೂ ಈ ತೆರನಾದ ಯೋಗವನ್ನು ತಪ್ಪದೇ ಆಚರಿಸಲೇಬೇಕು.

ಭಗವಂತನನ್ನು ಸಾಕ್ಷಾತ್ತಾಗಿ ಕಾಣುವ ಅಂತಹ ಸ್ಥಿತಿಯನ್ನೇ ಅಸಂಪ್ರಜ್ಞಾತ ಸಮಾಧಿ ಎನ್ನುವರು. ಅದು ಸಿದ್ಧಿಸಿದಾಗ ಬುದ್ಧಿಯು ಪೂರ್ಣ ಪರಿಪಾಕವನ್ನು ಹೊಂದಿ ತತ್ತ್ವಜ್ಞಾನದ ಆಗರವಾಗಿರುತ್ತದೆ. ಎಂತಹ ದುರ್ವಿಚಾರವೂ ಅದನ್ನು ಕದಡುವ ಸ್ಥಿತಿಯಲ್ಲಿ[೧]ಇರುವುದಿಲ್ಲ. ಅಷ್ಟು ಮಾತ್ರವಲ್ಲ; ಅಂತಹ ಸಮಾಧಿಸ್ಥಿತಿ ಸಿದ್ಧಿಸಿದವನಿಗೆ ಪಕ್ಕದಲ್ಲೇ ಕುಳಿತು ನಗಾರಿ ಬಾರಿಸಿದರೂ ಕೇಳಿಸದಂತಹ ತನ್ಮಯತೆಯು ಭಗವಂತನಲ್ಲಿ ಲಭಿಸಿರುತ್ತದೆ.

ಮಿಥಿಲಾಪಟ್ಟಣವು ಉರಿದು ಹೋಗುತ್ತಿದೆ ಎಂಬ ವಾರ್ತೆ ಕಿವಿಗೆ ಬಿದ್ದಾಗಲೂ ತನ್ನದೇನೂ ಹೋಗಲಿಲ್ಲ ಎಂದು[೨] ನಿರ್ಲಿಪ್ತತೆಯನ್ನು ಸಾಧಿಸಿದ ಜನಕರಾಜ; ಪರೀಕ್ಷಿದ್ರಾಜನು ಬಂದು ನೀರನ್ನು ಕೇಳಿದಾಗ ಇರಲಿ, ತನ್ನ ಕೊರಳಲ್ಲಿ ಮೃತಸರ್ಪವನ್ನು ಹಾಕಿದಾಗಲೂ ವಿಚಲಿತರಾಗದ ಶಮೀಕರು ಇಂತಹ ಯೋಗಸಿದ್ಧರಾಗಿರುವರು. ಇವುಗಳಲ್ಲಿ ತತ್ವನಿಶ್ಚಯದ ಹಂತವು ಪರೋಕ್ಷ ಜ್ಞಾನದಿಂದ ಸಾಧ್ಯವಾದರೆ ಅಪರೋಕ್ಷ ಜ್ಞಾನದಿಂದ ಭಗವಂತನ ಸಾಕ್ಷಾತ್ಕಾರವೇ ಸಾಧ್ಯವಾಗುತ್ತದೆ.

*****

## ಸ್ಥಿತಪ್ರಜ್ಞನ ಲಕ್ಷಣಗಳು

ಅಸಂಪ್ರಜ್ಞಾತ ಸಮಾಧಿಸ್ಥಿತಿಯಲ್ಲಿ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡ ಇಂತಹ ಯೋಗಸಿದ್ಧನನ್ನು ಭಗವದ್ಗೀತೆಯು 'ಸ್ಥಿತಪ್ರಜ್ಞ' ಎಂದು ಕರೆದಿದೆ.

---

೧. ಯದಾ ತೇ ಮೋಹಕಲಿಲಂ ಬುದ್ಧಿರ್ವ್ಯತಿತರಿಷ್ಯತಿ ।
ತದಾ ಗಂತಾಸಿ ನಿರ್ವೇದಂ ಶ್ರೋತವ್ಯಸ್ಯ ಶ್ರುತಸ್ಯ ಚ ॥ –ಗೀತಾ(೨/೫೨)

೨. ಮಿಥಿಲಾಯಾಂ ಪ್ರದೀಪ್ತಾಯಾಂ ನ ಮೇ ಕಿಂಚನ ದಹ್ಯತೇ ॥

ಅರ್ಜುನನು ಈ ಹಂತದಲ್ಲಿ ಸ್ಥಿತಪ್ರಜ್ಞನ ಇತರ ಲಕ್ಷಣಗಳನ್ನೂ, ಅವನ ಲೋಕವ್ಯವಹಾರದ ರೀತಿ ಮತ್ತು ಪ್ರಯೋಜನಗಳನ್ನೂ ತಿಳಿದುಕೊಳ್ಳಲು ಅಪೇಕ್ಷಿಸುತ್ತಾನೆ. ಅವನಿಗೆ ಭಗವಂತನು ನೀಡಿದ ಉತ್ತರದ ಒಟ್ಟು ಸಂಗ್ರಹ ಹೀಗಿದೆ :

ಸ್ಥಿತಪ್ರಜ್ಞನು ಮನಸ್ಸಿನಲ್ಲಿ ನೆಲೆಸಿದ ಸಕಲವಿಧ ಕಾಮನೆಗಳನ್ನು ಕ್ರೋಧ ಮೊದಲಾದ ಇತರ ದೋಷಗಳನ್ನು ಸಾಮಾನ್ಯವಾಗಿ ಸಂಪೂರ್ಣವಾಗಿ [೧]ತೊರೆದಿರುವನು. ಭಗವಂತನಲ್ಲೇ ತನ್ನ ಮನಸ್ಸನ್ನು ಕೇಂದ್ರೀಕರಿಸಿ ಅವನ ಮಹಾತ್ಮ್ಯವನ್ನು ಅರ್ಥಮಾಡಿಕೊಳ್ಳುವುದರಲ್ಲೇ ಪೂರ್ಣ ಸಂತೃಪ್ತಿಯನ್ನು ಕಾಣುವನು.

ಅವನು ದುಃಖಗಳು ಒದಗಿದಾಗ ಅದಕ್ಕಾಗಿ ಕೊರಗಲಾರನು; ಸುಖಗಳು ಬಂದಾಗ ಅದರಿಂದ ಹಿಗ್ಗಿ ಮೈಮರೆಯಲಾರನು. ಯಾವುದೇ ರೀತಿಯ ರಾಗದ್ವೇಷಗಳಿಗಾಗಲೀ ಭಯಕ್ಕಾಗಲೀ ಒಳಗಾಗಲಾರನು. ಭಗವಂತನನ್ನು ಬಿಟ್ಟು ಬೇರೆಲ್ಲೂ ಅಧಿಕ ಸ್ನೇಹವನ್ನು ಅವನು ಮಾಡಲಾರನು.

ಆಮೆಯು[೨] ತನ್ನ ಅವಯವಗಳನ್ನು ಇಷ್ಟಪಟ್ಟಾಗ ಥಟ್ಟನೆ ಅನಾಯಾಸವಾಗಿ ಒಳಕ್ಕೆಳೆದುಕೊಳ್ಳುತ್ತದೆ. ಅದರಂತೆ ಸ್ಥಿತಪ್ರಜ್ಞನು ಸಹ ನಿಷಿದ್ಧ ವಿಷಯಗಳಿಂದ ತನ್ನ ಸಕಲ ಇಂದ್ರಿಯಗಳನ್ನು ಸಲಭವಾಗಿ ಹಿಂದಕ್ಕೆ ಸೆಳೆದುಕೊಳ್ಳಬಲ್ಲವನು. ಅವನಿಗೆ ಯಾವುದೇ ಲೋಕವಾರ್ತೆಗಿಂತಲೂ ಭಗವಂತನ ವಿಚಾರವೇ ಪ್ರಿಯವಾಗಿರುತ್ತದೆ. ಸದ್ವಿಚಾರಗಳಲ್ಲಿ ತನ್ನ ಇಂದ್ರಿಯಗಳನ್ನು ತೊಡಗಿಸುವ ಕಲೆ ಅವನಿಗೆ ಕರಗತವಾಗಿರುತ್ತದೆ.

ವಾಹನ ಚಾಲಕನಿಗೆ ವಾಹನವನ್ನು ನಡೆಸಲು ಮಾತ್ರವಲ್ಲದೆ ಅದನ್ನು ಎಲ್ಲಾ ಹಂತಗಳಲ್ಲೂ ನಿಯಂತ್ರಿಸುವ ಸಾಮರ್ಥ್ಯವೂ, ಬೇಕೆಂದಾಗ ನಿಲ್ಲಿಸುವ ಸಾಮರ್ಥ್ಯವೂ ಇರಲೇಬೇಕು. ತತ್ತ್ವಜ್ಞಾನದ ಗುರಿಯತ್ತ ಸಾಗುವಲ್ಲಿ ವಾಹನದಂತಿರುವ ತನ್ನ ಸಕಲೇಂದ್ರಿಯಗಳನ್ನು ಹೀಗೆ ಸದಾ ವಶದಲ್ಲಿಟ್ಟು ಕೊಂಡಿರುವುದು ಸ್ಥಿತಪ್ರಜ್ಞನ ಮುಖ್ಯ ಲಕ್ಷಣಗಳಲ್ಲೊಂದು.

ಇಂತಹ ಲಕ್ಷಣಗಳು ಅವನಿಗೆ ಸಹಜವಾಗಿ ಸಿದ್ಧಿಸಿರುತ್ತವೆ. ಆದರೆ ಈ ಹಂತವನ್ನು ತಲುಪುವ ಸಾಧಕನು ಇವುಗಳನ್ನೆಲ್ಲ ತನ್ನ ಜೀವನದಲ್ಲಿ ಪ್ರಯತ್ನ ಪೂರ್ವಕವಾಗಿ

---

೧. ಪ್ರಜಹಾತಿ ಯದಾ ಕಾಮಾನ್ ಸರ್ವಾನ್ ಪಾರ್ಥ ಮನೋಗತಾನ್ ।
ಆತ್ಮನ್ಯೇವಾತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ ॥
ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ ।
ವೀತರಾಗಭಯಕ್ರೋಧಃ ಸ್ಥಿತಧೀರ್ಮುನಿರುಚ್ಯತೇ ॥
ಯಃ ಸರ್ವತ್ರಾನಭಿಸ್ನೇಹಸ್ತತ್ತತ್ ಪ್ರಾಪ್ಯ ಶುಭಾಶುಭಮ್ ।
ನಾಭಿನಂದತಿ ನ ದ್ವೇಷ್ಟಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ –ಗೀತಾ(೨/೫೫-೫೭)

೨. ಯದಾ ಸಂಹರತೇ ಚಾಯಂ ಕೂರ್ಮೋಽಂಗಾನೀವ ಸರ್ವಶಃ ।
ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ –ಗೀತಾ(೨/ ೫೮ )

ಅಳವಡಿಸಿಕೊಳ್ಳಬೇಕಾಗುತ್ತದೆ. ಅಪರೋಕ್ಷಜ್ಞಾನವು ಸಿದ್ಧಿಸುವ ವೇಳೆಗೆ ಇವೆಲ್ಲ ಅವನಿಗೂ ಸಹ ಸಹಜಗುಣಗಳಾಗಿ ಬಿಟ್ಟಿರುತ್ತವೆ. ಈಜು ಬಂದವನಂತೆ ಸ್ಥಿತಪ್ರಜ್ಞನಿದ್ದರೆ ಅದನ್ನು ಪ್ರಯತ್ನಪಟ್ಟು ಕಲಿಯುವವನಂತೆ[೧] ಜಿಜ್ಞಾಸು ಇರುವವನು.

*****

## ಇಂದ್ರಿಯ ಜಯದ ಮಹತ್ವ

ತತ್ತ್ವಜ್ಞಾನವು ಹೀಗೆ ಅತ್ಯುತ್ತಮ ಸುಖಸಾಧನವಾಗಿದ್ದಲ್ಲಿ ಎಲ್ಲರೂ ಏಕೆ ಅದನ್ನು ಸಾಧಿಸಿಲ್ಲ ? ರಾಗದ್ವೇಷಪೂರಿತವಾದ ಈ ಸಂಸಾರದಲ್ಲಿ ಏತಕ್ಕೆ ತೊಳಲುತ್ತಿರುವರು? ಇದು ಈ ಹಂತದಲ್ಲಿ ಎದುರಾಗುವ ಬಹುಮುಖ್ಯವಾದ ಪ್ರಶ್ನೆ. ತತ್ವಶಾಸ್ತ್ರದ ಹಿರಿಮೆಯನ್ನು ತಿಳಿದ ಜನರೇ ಕಡಿಮೆ. ಹಾಗೆ ತಿಳಿದವರೆಲ್ಲಾ ಇದನ್ನು ಸಾಧಿಸಿಲ್ಲ ಎಂಬುದು ಸಹ ಅಷ್ಟೇ ಕುತೂಹಲದ ಪ್ರಶ್ನೆ. ಈ ಪ್ರಶ್ನೆಗೆ ಉತ್ತರ ಎಲ್ಲರೂ ಏಕೆ ಗೌರೀಶಂಕರವನ್ನು ಏರಿಲ್ಲ ? ಸಾಗರವನ್ನು ಈಜಿ ದಾಟಿಲ್ಲ ? ವೈದ್ಯರೋ, ತಂತ್ರಜ್ಞರೋ ಆಗಿಲ್ಲ? ಎಂಬ ಪ್ರಶ್ನೆಗೆ ದೊರೆಯುವಂತಹ ಉತ್ತರವೇ ಆಗಿದೆ.

ಅವು ಲೋಕದ ದೃಷ್ಟಿಯಲ್ಲಿ ಉತ್ತಮ ಸಾಧನೆಗಳೇ ಆಗಿದ್ದರೂ ಅವುಗಳು ಸಿದ್ಧಿಸಲು ಅಪಾರ ಅಧ್ಯಯನರೂಪವಾದ ವಿಶೇಷಸಾಧನೆ ಅತ್ಯವಶ್ಯ. ನಿರಾಹಾರದಿಂದ ವಿಷಯಗಳನ್ನು ತೊರೆಯಲು ಈ ಮಟ್ಟಿಗೆ ಸಾಧ್ಯವಾದರೂ ಅವುಗಳ ಬಗೆಗಿನ ಅಭಿಲಾಷೆ ಮಾತ್ರ ಹಾಗೆಯೇ ಉಳಿದು ಬಿಡುತ್ತದೆ. ಉಪವಾಸ ಮಾಡುವವನು ಆಹಾರವನ್ನು ತೊರೆದರೂ ಅದರ ಮೇಲಿನ ಆಸಕ್ತಿಯನ್ನು ಮಾತ್ರ ತೊರೆಯಲಾರನು. ಸಾಧನೆಗೆ ಅಪೇಕ್ಷೆ-ಯೊಂದೇ ಸಾಲದು, ಅದಕ್ಕೆ ತಕ್ಕ ಅರ್ಹತೆಯೂ ಇರಬೇಕು ಎಂಬುದು ತಾತ್ಪರ್ಯ.

ತತ್ತ್ವಜ್ಞಾನವು ಜಗತ್ತಿನ ಅತ್ಯುತ್ತಮ ಶಾಸ್ತ್ರವಾದರೂ ಅದಕ್ಕೆ ಭಗವನ್ನಿಷ್ಠೆ ಆಳವಾದ ವಿಚಾರ, ಪರಿಶುದ್ಧ ಸದಾಚಾರ, ವಿಶೇಷ ತ್ಯಾಗಬುದ್ಧಿ ಮೊದಲಾದ ಅಪೂರ್ವ ಸಾಧನಗಳ ಆವಶ್ಯಕತೆಯಿದೆ[೨].

ಇಂದ್ರಿಯಜಯವನ್ನು ಸಾಧಿಸದ ಯಾರಿಗೂ ಎಂದಿಗೂ ತತ್ತ್ವಜ್ಞಾನವು ಸಿದ್ಧಿಸುವುದಿಲ್ಲ; ಸಾಮಾನ್ಯ ಉಪಾಯಗಳಿಂದ ಇಂದ್ರಿಯ ಜಯವು ಲಭಿಸುವುದು ಸಹ ಅಷ್ಟೇ ದುರ್ಲಭ; ಅದಕ್ಕೆ ನಿರಾಹಾರದಂತಹ ತುಂಬಾ ಶ್ರಮಸಾಧ್ಯವಾದ ಸಾಧನೆಯ ಅಗತ್ಯವಿದೆ.

ನಿರಾಹಾರವ್ರತವೂ ಸಹ ಏಕಾದಶಿ, ಕೃಷ್ಣಜಯಂತಿಯಂತಹ ಸಂಪೂರ್ಣ ನಿರಾಹಾರ ರೂಪವಾದ ವ್ರತಗಳು; ಆಯಾ ತಿಂಗಳುಗಳಲ್ಲಿ ಕೆಲವನ್ನು ಮಾತ್ರವೇ ಬಿಡಬೇಕಾದ

೧. ತದ್ವೈ ಜಿಜ್ಞಾಸುಭಿಃ ಸಾಧ್ಯಂ ಜ್ಞಾನಿನಾಂ ಯತ್ ತು ಲಕ್ಷಣಮ್ । –ಗೀತಾಭಾಷ್ಯ

೨. ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ ।
ರಸವರ್ಜಂ ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ ॥ – ಗೀತಾ(೨/ ೫೯)

ಚಾತುರ್ಮಾಸ್ಯ ವ್ರತ; ನಿಷಿದ್ಧ ಪದಾರ್ಥಗಳನ್ನು ಸದಾ ತ್ಯಜಿಸಬೇಕಾದ ನಿತ್ಯವ್ರತ; ದೇಹದ ಅವಶ್ಯಕತೆಗೆ ತಕ್ಕಂತೆ ಯೋಗ್ಯ ಸಮಯದಲ್ಲಿ ಯೋಗ್ಯವಾದ ಆಹಾರವನ್ನು ಮಾತ್ರ ಸ್ವೀಕರಿಸಬೇಕಾದ ವ್ರತ ಮೊದಲಾಗಿ ಅನೇಕ ತೆರನಾಗಿದೆ.

ಇಂತಹ ಕಠಿಣವ್ರತಗಳನ್ನು ಆಚರಿಸದ ಯಾರಿಗೂ ನಿಜವಾದ ಅರ್ಥದಲ್ಲಿ ಇಂದ್ರಿಯ ಜಯವು ಸಿದ್ಧಿಸುವುದಿಲ್ಲ. ಈ ತೆರನಾದ ವ್ರತಗಳಿಂದ ಇಂದ್ರಿಯಗಳ ಭೋಗಶಕ್ತಿಯು ಕುಗ್ಗುತ್ತಾ ಹೋಗುತ್ತದೆ. ಅದರಿಂದಾಗಿ ಅವನಿಗೆ ದುಷ್ಟ ವಿಷಯಗಳನ್ನು ತೊರೆಯುವುದು ಅನಿವಾರ್ಯವಾಗಿ ಬಿಡುತ್ತದೆ; ಜೀರ್ಣಿಸಿಕೊಳ್ಳಲಾಗದ ಅನ್ನವನ್ನು ಅನಿವಾರ್ಯವಾಗಿ ಚೆಲ್ಲಲೇಬೇಕಲ್ಲವೇ !

ಏಕಾದಶೀ ಉಪವಾಸ ಮಾಡುವಾಗಲೂ ದ್ವಾದಶೀಪಾರಣದ ಚಿಂತೆ ಕವಿದಿರುತ್ತದೆ. ಇಂತಹ ವಿಷಯಾಭಿಲಾಷೆಯೂ ಸಹ ಮನಸ್ಸಿನಿಂದ ಪೂರ್ಣವಾಗಿ ಮರೆಯಾದಾಗಲೇ ಇಂದ್ರಿಯ ಜಯವು ಲಭಿಸುತ್ತದೆ. ವಿಷಯಾಭಿಲಾಷೆಯನ್ನು ಗೆಲ್ಲಲು ಪರಮಾತ್ಮನ ಸಾಕ್ಷಾತ್ಕಾರವೊಂದೇ ಸಾಧನ. ಆದ್ದರಿಂದ ಪೂರ್ಣವಾಗಿ ಜಿತೇಂದ್ರಿಯನೆಂದರೆ ಸ್ಥಿತಪ್ರಜ್ಞನೇ ಸರಿ[೧].

ಜಿಜ್ಞಾಸುಗಳಿಗೆ ಇಂದ್ರಿಯಜಯಕ್ಕೆ ನಿರಾಹಾರವು ಪ್ರಧಾನಸಾಧನವಾದರೆ ಜ್ಞಾನಿಗಳಿಗೆ ಬ್ರಹ್ಮದರ್ಶನವೇ ಅಂತಹ ಇಂದ್ರಿಯಜಯಕ್ಕೆ ಪ್ರಧಾನಸಾಧನವಾಗಿದೆ.

ನಿರಾಹಾರದಂತಹ ಮಹಾಪ್ರಯತ್ನವನ್ನು ಬಿಟ್ಟು ಪ್ರತ್ಯಾಹಾರದಂತಹ ಸಾಮಾನ್ಯ ಪ್ರಯತ್ನದಿಂದ ಇಂದ್ರಿಯ ಜಯವು ಸಿದ್ಧಿಸಬಹುದೇ ? ಇಲ್ಲವೆಂದೇ ಇದಕ್ಕೆ ಗೀತೆಯ ಉತ್ತರಿಸಿದೆ. ಇಂದ್ರಿಯಗಳನ್ನು ಕಠೋಪನಿಷತ್ತು 'ಅಶ್ವ' ಎಂದು ಕರೆದಿದೆ. ಆ ರೂಪಕದಲ್ಲಿ ಇಂದ್ರಿಯ ಜಯವು ಬಹುಕಷ್ಟ ಸಾಧ್ಯ ಎಂಬ ಭಾವ ಅಡಗಿದೆ. ಸಾಮಾನ್ಯವಾಗಿ ಅಶ್ವಾರೋಹಿಗಿಂತಲೂ ಅಶ್ವವೇ ಹೆಚ್ಚು ಬಲಿಷ್ಟವಾಗಿರುತ್ತದೆ. ಅಶ್ವಶಕ್ತಿ (horsepower) ಎಂಬ ಪ್ರಸಿದ್ಧ ಮಾತಿನಲ್ಲಿ ಅಶ್ವಗಳ ಶಕ್ತಿ ಎಷ್ಟು ಅಪಾರ ಎಂಬ ವಿಚಾರ ನಿರೂಪಿತವಾಗಿದೆ. ಹತ್ತಾರು ಜನರು ಕುಳಿತ ಗಾಡಿಯನ್ನು ಅನಾಯಾಸವಾಗಿ ಓಡುತ್ತಾ ಎಳೆಯುವ ಅಶ್ವವನ್ನು ಕಂಡ ಯಾರಿಗೂ ಅದರ ಶಕ್ತಿ ಎಷ್ಟು ಅಪಾರ ಎಂಬುದು ಅರಿವಾಗುತ್ತದೆ. ಬಲಿಷ್ಠವಾಗಿರುವುದರೊಂದಿಗೆ ಸದಾ ಚಂಚಲವಾಗಿರುವುದು, ಸುಲಭವಾಗಿ ವಶಕ್ಕೆ ಬಾರದಿರುವುದು ಅಶ್ವಗಳ ಮತ್ತೊಂದು ಸ್ವಭಾವ. ಅಶ್ವಾರೋಹಣವು ಅದಕ್ಕೆಂದೇ ಒಂದು ಅಸಾಮಾನ್ಯವಿದ್ಯೆ ಎಂದು ಪರಿಗಣಿತವಾಗಿದೆ.

ಅಶ್ವಗಳಂತಿರುವ ಇಂದ್ರಿಯಗಳು ಸಹ ಸುಲಭವಾಗಿ ವಶಕ್ಕೆ ಬರಲಾರದಷ್ಟು ಬಲಿಷ್ಟವಾಗಿವೆ ಮತ್ತು ಸದಾ ವಿಷಯಗಳತ್ತ ಸಾಗುವ ಪ್ರವೃತ್ತಿಯನ್ನೂ ಹೊಂದಿವೆ.

---

೧. ನಿರಾಹಾರತ್ವೇನ ವಿಷಯಭೋಗಸಾಮರ್ಥ್ಯಾಭಾವ ಏವ ಭವತಿ । ಇತರ ವಿಷಯಾಕಾಂಕ್ಷಾಭಾವೋ ವಾ । ರಸಾಕಾಂಕ್ಷಾದಿರ್ನ ನಿವರ್ತತೇ । ಸ ತ್ವಪರೋಕ್ಷಜ್ಞಾನಾದೇವ ನಿವರ್ತತೇ ಇತ್ಯಾಹ – ವಿಷಯಾ ಇತಿ ।

– ಗೀತಾಭಾಷ್ಯ

ಕುದುರೆಯ ಮೇಲೆ ಕುಳಿತು ತನ್ನ ಗುರಿಯತ್ತ ಸವಾರಿ ಮಾಡುವ ಅಶ್ವಾರೋಹಿಯಂತೆ ಇಂದ್ರಿಯಗಳನ್ನು ಅವು ಸಾಗುವ ಹಾದಿಗೆ ಬಿಡದೆ ಶಾಸ್ತ್ರ ತಿಳಿಸುವ ಹಾದಿಯಲ್ಲಿ ತೊಡಗಿಸಬಲ್ಲವನಿಗೆ 'ಜಿತೇಂದ್ರಿಯ' ಎನ್ನುವರು. ಇಂದ್ರಿಯ ಜಯವು ಇಂತಹ ಬಹು ಶ್ರಮಸಾಧ್ಯವಾದ ಕಾರ್ಯವಾದ್ದರಿಂದಲೇ ಅದಕ್ಕೆ ನಿರಾಹಾರಾದಿ ಮಹಾಪ್ರಯತ್ನ ವು ಅಪೇಕ್ಷಿತವಾಗಿದೆ[೧].

ಒಂದೊಂದು ಇಂದ್ರಿಯದ ಜಯವೂ ಕಷ್ಟಸಾಧ್ಯವಾಗಿರುವಾಗ ಒಟ್ಟು ಹನ್ನೊಂದು ಇಂದ್ರಿಯಗಳನ್ನೂ ಜಯಿಸುವುದು ತೀರಾ ಕಷ್ಟಕರ ಎಂದು ಸಹಜವಾಗಿಯೇ ತಿಳಿಯುತ್ತದೆ.

*****

## ವಿಷಯಾಸಕ್ತಿಯಿಂದ ವಿನಾಶ

ರೂಪ, ರಸ ಮೊದಲಾದ ಇಂದ್ರಿಯ ವಿಷಯಗಳಲ್ಲಿ ಅವುಗಳಲ್ಲಿ ಇಲ್ಲದೆ ಇರುವ ಗುಣಗಳನ್ನು ಇದೆ ಎಂದು ಭಾವಿಸಿ, ಅವುಗಳನ್ನು ತನಗೆ ಹಿತವೆಂದು ಭಾವಿಸಿ ಅದನ್ನು ಚಿಂತಿಸತೊಡಗುವುದು ಮೊದಲ ಹೆಜ್ಜೆ. ಹಾಗೆ ಅವುಗಳನ್ನು ಸತತ ಚಿಂತಿಸುವವನಿಗೆ ಅವುಗಳಲ್ಲಿ ಅಭಿಲಾಷೆಯು ಹುಟ್ಟತೊಡಗುವುದು. ಅದು ಕ್ರಮೇಣ ಹೆಚ್ಚುತ್ತಾ ಹೋಗಿ, ಅವುಗಳನ್ನು ಅನುಭವಿಸಲೇಬೇಕು ಎಂಬ ಉತ್ಕಟೇಚ್ಛೆಯಲ್ಲಿ ಪರ್ಯಾವಸಾನ-ವಾಗುವುದು. ಅಂತಹ ಆಸೆ ಈಡೇರದೇ ಹೋದಾಗ ಅದಕ್ಕ ಅಡ್ಡಿಯಾದವರ ಬಗ್ಗೆ ನಿಷ್ಕಾರಣವಾಗಿ ಕ್ರೋಧವು ಹುಟ್ಟುವುದು. ಕ್ರೋಧದಿಂದಾಗಿ ಮಾಡಬಾರದ ಕಾರ್ಯವನ್ನು ಮಾಡುವ ಬುದ್ಧಿ ಹುಟ್ಟುವುದು. ಇಂತಹ ಮೋಹದಿಂದ ಅಂತಹ ನಿಷಿದ್ಧ ಕಾರ್ಯಗಳನ್ನು ಮಾಡಬಾರದು ಎಂಬ ಶಾಸ್ತ್ರಜ್ಞಾನವು ಮರೆಯಾಗುವುದು. ಇದರಿಂದಾಗಿ ದುಷ್ಕಾರ್ಯಗಳನ್ನು ಎಸಗುವುದರಲ್ಲಿನ ಅನರ್ಥವು ಅವನಿಗೆ ಕಾಣದಂತಾಗುವುದು. ಈ ಹಂತದಲ್ಲಿ ಅವನು ಅಕಾರ್ಯವನ್ನು ಮಾಡಿಯೇ ಮಾಡುವನು. ಅಂತಹ ಅನರ್ಥದಿಂದಾಗಿ ನರಕಾದ್ಯನರ್ಥಗಳಿಗೆ ತಪ್ಪದೇ ಗುರಿಯಾಗುವನು.[೨]

---

೧. ಅಪರೋಕ್ಷಜ್ಞಾನರಹಿತಜ್ಞಾನಿನೋಽಪಿ ಸಾಧಾರಣಯತ್ನವತೋಽಪಿ ಮನೋ ಹರಂತೀಂದ್ರಿಯಾಣಿ। ಬಹುಯತ್ನವತಃ ಶಕ್ಯಾನಿ। ಅತೋ ಯತ್ನಂ ಕುರ್ಯಾದಿತ್ಯಾಶಯಃ॥ –ಗೀತಾಭಾಷ್ಯ

೨. ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ।
ಸಂಗಾತ್ ಸಂಜಾಯತೇ ಕಾಮಃ ಕಾಮಾತ್ ಕ್ರೋಧೋಽಭಿಜಾಯತೇ॥
ಕ್ರೋಧಾದ್ ಭವತಿ ಸಮ್ಮೋಹಃ ಸಮ್ಮೋಹಾತ್ ಸ್ಮೃತಿವಿಭ್ರಮಃ।
ಸ್ಮೃತಿಭ್ರಂಶಾದ್ ಬುದ್ಧಿನಾಶೋ ಬುದ್ಧಿನಾಶಾದ್ ವಿನಶ್ಯತಿ॥ –ಗೀತಾ (೨/೬೨,೬೩)
ನಾಸ್ತಿ ಬುದ್ಧಿರಯುಕ್ತಸ್ಯ ನ ಚಾಯುಕ್ತಸ್ಯ ಭಾವನಾ।

ಹೀಗೆ ರಾಗದ್ವೇಷಗಳ ಪರಂಪರೆಯು ಅನರ್ಥಕ್ಕೆ ಕಾರಣವಾಗುವುದು. ಇದಕ್ಕೆಲ್ಲ ಮೂಲಕಾರಣವಾದದ್ದು ವಿಷಯಗಳ ಸತತ ಚಿಂತನೆ ಎಂಬ ಎಚ್ಚರವಿದ್ದವನಿಗೆ ಅವನ್ನು ತೊರೆಯುವುದರಿಂದ ಇಂತಹ ಅನರ್ಥವು ಸಂಭವಿಸಲಾರದು.

ಸ್ಥಿತಪ್ರಜ್ಞನು ಇಂತಹ ರಾಗದ್ವೇಷಾದಿಗಳಿಗೆ ಒಳಗಾಗದೆ ಸದಾ ಎಚ್ಚರದಿಂದಲೇ ತನ್ನ ಪಾಲಿಗೆ ವಿಹಿತವಾದ ವಿಷಯಗಳನ್ನು ಭೋಗಿಸುವನು. ಇಂತಹ ಜೀವನ ರೀತಿಯಿಂದ ಅವನ ಮನಸ್ಸು ಪ್ರಸನ್ನತೆಯನ್ನು ಹೊಂದುವುದು. ಇಂತಹ ಪ್ರಸನ್ನತೆಯು ಸಕಲದುಃಖ-ಗಳನ್ನು ತೊರೆಯಲು ಸಾಧನವಾಗುವುದು.

ಮನಃಪ್ರಸಾದದ ಈ ಹಂತವನ್ನು ತಲುಪುವುದು ಜಿಜ್ಞಾಸುವಿನ ಸಾಧನೆಯಲ್ಲಿ ತುಂಬಾ ಮಹತ್ವ ಪೂರ್ಣವಾದ ಹಂತ; ಇದನ್ನು ಸಾಧಿಸದವನಿಗೆ ಧ್ಯಾನವು ಸಿದ್ಧಿಸುವುದಿಲ್ಲ, ಧ್ಯಾನ ಮಾಡದವನಿಗೆ ಬ್ರಹ್ಮ ಸಾಕ್ಷಾತ್ಕಾರವು ಲಭಿಸುವುದಿಲ್ಲ, ಬ್ರಹ್ಮ ಸಾಕ್ಷಾತ್ಕಾರವಿಲ್ಲದವನಿಗೆ ಮೋಕ್ಷವು ಖಂಡಿತ ಲಭಿಸುವುದಿಲ್ಲ, ಮೋಕ್ಷವಿಲ್ಲದವನಿಗೆ ಸುಖವೆಂತು ಲಭಿಸೀತು?

ಸಚ್ಛಾಸ್ತ್ರಗಳನ್ನು ಎಷ್ಟೇ ಶ್ರವಣ ಮಾಡಿರಬಹುದು. ಎಷ್ಟೇ ಆಳವಾಗಿ ಅವಲೋಕಿಸಿರಬಹುದು. ಆದರೆ ಮನಸ್ಸಿನ ಮೇಲೆ ಹತೋಟಿ ಇಲ್ಲದವನಿಗೆ ಧ್ಯಾನವು ಎಂದೂ ಸಿದ್ಧಿಸುವುದಿಲ್ಲ. ವಿಷಯಗಳತ್ತ ಸದಾ ಧಾವಿಸುವುದು ಇಂದ್ರಿಯಗಳ ಸಹಜ ಪ್ರವೃತ್ತಿ. ಅವುಗಳನ್ನು ಹಾಗೆಯೇ ಬಿಟ್ಟಲ್ಲಿ ಜ್ಞಾನವೃದ್ಧಿಯಾಗುವುದಿರಲಿ, ಇರುವ ಜ್ಞಾನವೂ ಕ್ರಮೇಣ ನಶಿಸುತ್ತಾ ಹೋಗುವುದು.

ನೀರಿನಲ್ಲಿ ಇರುವ ಚುಕ್ಕಾಣಿ ಇಲ್ಲದ ದೋಣಿಯನ್ನು ಬಲವಾಗಿ ಬೀಸುವ ಗಾಳಿಯು ತಾನು ಬೀಸುವತ್ತ ಸೆಳೆದೊಯ್ಯುವಂತೆ ಇಂತಹವನ ಜ್ಞಾನವನ್ನು ಇಂದ್ರಿಯಗಳಿಗೆ ವಶವಾಗುವ ಮನಸ್ಸು ನಾಶಪಡಿಸುವುದು.[೧]

ಆದ್ದರಿಂದ ಜಿತೇಂದ್ರಿಯನಿಗೆ ಮನಸ್ಸಿನ ಪ್ರಸನ್ನತೆ, ಪ್ರಸನ್ನಚಿತ್ತನಿಗೆ ಮನೋನಿಗ್ರಹರೂಪ ಏಕಾಗ್ರತೆ, ಏಕಾಗ್ರತೆಯಿರುವವನಿಗೆ ಶ್ರವಣ ಮನನಗಳ ಸಾಧ್ಯತೆ ಮತ್ತು ಅವುಗಳಿಂದ ತತ್ತ್ವನಿಶ್ಚಯ, ಅಂತಹ ತತ್ತ್ವನಿಶ್ಚಯದಿಂದ ಧ್ಯಾನ, ಧ್ಯಾನದಿಂದ ಬ್ರಹ್ಮಸಾಕ್ಷಾತ್ಕಾರ ಇವು ಕ್ರಮೇಣ ಸಾಧನೆಯ ಹಂತಗಳಾಗಿವೆ.

*****

---

ನ ಚಾಭಾವಯತಃ ಶಾಂತಿರಶಾಂತಸ್ಯ ಕುತಃ ಸುಖಮ್ ॥ –ಗೀತಾ (೨/೬೬)

೧. ಇಂದ್ರಿಯಾಣಾಂ ಹಿ ಚರತಾಂ ಯನ್ಮನೋಽನುವಿಧೀಯತೇ ।
ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವಮಿವಾಂಭಸಿ ॥ – ಗೀತಾ (೨/೬೭)

# ಸ್ಥಿತಪ್ರಜ್ಞನ ಲೋಕ ವ್ಯವಹಾರದ ರೀತಿ

"ಅಜ್ಞಾನಿಗಳ ರಾತ್ರಿ ಜ್ಞಾನಿಗೆ ಹಗಲು; ಅವರ ಹಗಲು ಇವನಿಗೆ ರಾತ್ರಿ"[೧] ಎಂಬ ಮಾತಿನಲ್ಲಿ ಭಗವಂತನು ಜ್ಞಾನಿಗಳ ಲೋಕ ವ್ಯವಹಾರದ ರೀತಿಯನ್ನು ತಿಳಿಸಿಕೊಟ್ಟಿರುವನು. ಒಂದರ್ಥದಲ್ಲಿ ಆ ಮಾತಿನಲ್ಲಿ ಸ್ಥಿತಪ್ರಜ್ಞನ ಲಕ್ಷಣಗಳೆಲ್ಲ ಅಡಕವಾಗಿವೆ.

ವಿಷಯಗಳತ್ತ ಹಾತೊರೆಯುವ ಅಜ್ಞಾನಿಗಳಿಗೆ ಭಗವತ್ಸ್ವರೂಪವು ರಾತ್ರಿಯಂತೆ ಅಗೋಚರವಾಗಿಯೇ ಉಳಿಯುವುದು. ವಿಷಯ ಸುಖವೇ ತಮ್ಮ ಜೀವನದ ಪರಮಗುರಿ ಎಂದು ಭಾವಿಸುವ ಅಂತಹ ಜನರಿಗೆ ಭಗವಂತನ ಸುಳಿವೂ ಸಿಗಲಾರದು. ಆದರೆ ಸ್ಥಿತಪ್ರಜ್ಞನಿಗೆ ಮಾತ್ರ ಅಂತಹ ಭಗವತ್ಸ್ವರೂಪವು ಹಗಲಿನಂತೆ ನಿಚ್ಚಳವಾಗಿ ಗೋಚರಿಸುವುದು. ವಿಷಯ ಸುಖದ ಪ್ರಪಂಚವು ಮಾತ್ರ ಅವನ ಪಾಲಿಗೆ ಅನಪೇಕ್ಷಿತವಾದ್ದರಿಂದ ಅದು ರಾತ್ರಿಯಂತೆ ಅಗೋಚರವಾಗಿಯೇ ಉಳಿದುಕೊಳ್ಳುವುದು. ಹೀಗೆ ಇತರರಿಗೆ ತಿಳಿಯದೇ ಹೋಗುವ ಭಗವತ್ತತ್ವವನ್ನು ಸಾಕ್ಷಾತ್ಕರಿಸಿಕೊಳ್ಳುವುದರಲ್ಲೇ ಜ್ಞಾನಿಯ ಹಿರಿಮೆ ಅಡಗಿದೆ.

ಭಗವಂತನನ್ನು ತಿಳಿಯ ಹೊರಡುವ ಜಿಜ್ಞಾಸುವಿಗೆ ಭಗವನ್ನಿಷ್ಠೆ ಪ್ರಾಮಾಣಿಕತೆ, ಭೂತದಯೆ, ನಿಸ್ವಾರ್ಥತೆ ಮೊದಲಾದ ಗುಣಗಳು ಸಹಜವಾಗಿರುತ್ತವೆ. ಅವನಿಗೆ ವಿಷಯಲಾಲಸೆಯೇ ಇಲ್ಲದಿರುವುದರಿಂದ ಅವುಗಳಿಗೆ ಅವಕಾಶವೀಯುವ ಅಪ್ರಾಮಾಣಿಕತೆ, ಸ್ವಾರ್ಥಪರತ್ವ, ಪರದ್ರೋಹ, ಆತ್ಮವಂಚನೆ ಮೊದಲಾದ ದೋಷಗಳು ಅವನಲ್ಲಿ ಇರುವುದೇ ಇಲ್ಲ.

ಇದಕ್ಕೆ ವಿರುದ್ಧವಾಗಿ ಅಜ್ಞಾನಿಗಳಿಗೆ ವಿಷಯಪರತೆ, ಆತ್ಮವಂಚನೆ, ದ್ರೋಹಬುದ್ಧಿ ಮೊದಲಾದ ದೋಷಗಳೂ ಸಹಜವಾಗಿದ್ದು ಭಗವನ್ನಿಷ್ಠೆ ಮೊದಲಾದ ಗುಣಗಳು ಎಂದೂ ಅವರಿಗೆ ಸಾಧ್ಯವಾಗುವುದೇ ಇಲ್ಲ ಎಂಬ ಅರ್ಥವೂ ಸಹ ಈ ಮಾತಿನಲ್ಲಿದೆ.

ಭಗವಂತನಲ್ಲಿ ತನ್ಮಯನಾಗುತ್ತಾ ಬರುವ ಸ್ಥಿತಪ್ರಜ್ಞನು ಈ ಲೋಕದಲ್ಲಿರುವಾಗ, ತನ್ನ ಜೀವನ ನಿರ್ವಹಣೆಗೆ ಅಗತ್ಯವಿದ್ದಷ್ಟು ಮಾತ್ರ ಭೋಗಗಳನ್ನು ಅನುಭವಿಸುವನು. ಅಂತಹ ಸುಖಗಳನ್ನು ಅನುಭವಿಸುವಾಗಲೂ ಅವನಿಗೆ ಅವುಗಳ ಬಗ್ಗೆ ಲಾಲಸೆಯಾಗಲೀ ತನ್ನಿಮಿತ್ತವಾದ ದುಃಖಾದಿಗಳಾಗಲೀ ಇರುವುದಿಲ್ಲ. ಸ್ಥಿತಪ್ರಜ್ಞನು ಸಮುದ್ರದಂತಿರುವನು; ಸಮುದ್ರವು ಸದಾ ನೀರಿನಿಂದ ತುಂಬಿರುವಂತೆ ಅವನಲ್ಲಿ ಸುಖದ ಸಮೃದ್ಧಿಯು ತುಂಬಿರುವುದು.

---

೧. ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ ।
ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ॥ – ಗೀತಾ (೨/ ೬೯)

[1]ಸಮುದ್ರವು ನದಿಗಳತ್ತ ಧಾವಿಸದು; ಅದರಂತೆ ಜ್ಞಾನಿಯು ವಿಷಯಗಳತ್ತ ತಾನಾಗಿ ಧಾವಿಸನು. ಸಮುದ್ರದ ಬಳಿಗೆ ನದಿಗಳು ತಾವೇ ಧಾವಿಸಿ ಬರುವಂತೆ ಇಂತಹ ಜ್ಞಾನಿಯ ಬಳಿಗೆ ಸಕಲ ಭೋಗಗಳು ತಾವಾಗಿ ನುಗ್ಗಿ ಬರುತ್ತವೆ. ಸಮುದ್ರವು ಅಂತಹ ನೀರಿನಿಂದ ಉಬ್ಬದಿರುವಂತೆ ಇವನೂ ಅಂತಹ ಭೋಗಗಳಿಂದ ಉಬ್ಬುವುದಿಲ್ಲ. ನೀರು ತನ್ನತ್ತ ಹರಿದು ಬರದಿದ್ದರೂ ಸಮುದ್ರವು ಕುಗ್ಗದಿರುವಂತೆ ಭೋಗಗಳು ಇಲ್ಲವಾದಾಗಲೂ ಜ್ಞಾನಿಯು ಕೊರಗಲಾರನು. ಸಮುದ್ರವು ಎಂದೂ ತನ್ನ ಎಲ್ಲೆಯನ್ನು [2]ಮೀರದಿರುವಂತೆ ಜ್ಞಾನಿಯು ಎಂದೂ ಸಹ ಶಾಸ್ತ್ರದ ವಿಧಿವಿಧಾನಗಳನ್ನು ಉಲ್ಲಂಘಿಸದಂತೆ ಅವುಗಳು ತೋರಿದ ದಾರಿಯಲ್ಲೇ ತನ್ನ ಜೀವನವನ್ನು ವ್ಯವಸ್ಥಿತವಾಗಿ ನಡೆಸುವನು. ಹೀಗೆ ಜ್ಞಾನಿಯ ಲೋಕವ್ಯವಹಾರವು ಅಜ್ಞಾನಿಗಳಿಗಿಂತ ಸಂಪೂರ್ಣ ಭಿನ್ನವಾಗಿದ್ದು ಭಗವಂತನ ಕೃಪೆಗೆ ಪಾತ್ರವಾಗುವಂತಿರುವುದು.

ಭೋಗಭಾಗ್ಯಗಳಿಂದ ತುಂಬಿದ್ದೂ ನಿರ್ವಿಕಾರವಾದ ಹಸನಾದ ಬಾಳು ಜ್ಞಾನಿಯದು; ಅವನದು ವಿಷಯಗಳಿಗೆ ಹಾತೊರೆಯದ ಪ್ರಶಾಂತ ಜೀವನ. ಭಗವನ್ನಿಷ್ಠೆಯು ಅವನ ಪ್ರತಿಕಾರ್ಯದಲ್ಲೂ ತುಂಬಿರುವುದು. ಅಹಂಕಾರ ಮಮಕಾರಗಳಿಗೆ ಅವನ ಬದುಕಿನಲ್ಲಿ ಅವಕಾಶವೇ ಇರುವುದಿಲ್ಲ. ಅದರಿಂದಾಗಿಯೇ ಇತರರಿಗೆ ದುರ್ಲಭವಾದ ಮುಕ್ತಿಯನ್ನು ಭಗವದನುಗ್ರಹದಿಂದ ಅವನು ಅನಾಯಾಸದಿಂದ ಸಂಪಾದಿಸಿಕೊಳ್ಳುವನು.[3]

ಹೀಗೆ ಸಕಲವಿಷಯಕಾಮನೆಯನ್ನು ಸಂಪೂರ್ಣ ತೊರೆದು ಸದಾ ಭಗವಂತನನ್ನು ಸ್ಮರಿಸುತ್ತಾ ಸಂತೃಪ್ತಿಯನ್ನು ಸಾಧಿಸುವುದೇ ಬ್ರಾಹ್ಮೀಸ್ಥಿತಿ ಎನ್ನಿಸುತ್ತದೆ, ಈ ಸ್ಥಿತಿಯನ್ನು ಸಾಧಿಸಿದವನಿಗೆ ಮತ್ತೆಂದೂ ಸಂಸಾರದ ಬೇಗೆ ಬಾಧಿಸುವುದಿಲ್ಲ. ಇಂತಹ ಸ್ಥಿತಿಯಲ್ಲೇ ಬಾಳಿನ ಕೊನೆಯ ಕ್ಷಣವನ್ನೂ ಕಳೆದಾಗಲೇ ಪರಬ್ರಹ್ಮನನ್ನು ತಲುಪುವನು.[4] ಇಲ್ಲಿ 'ಅಂತಕಾಲ' ಎಂಬುದಕ್ಕೆ ಜೀವನದ ಕೊನೆಗಾಲದಲ್ಲಿ ಎಂದು ಅನೇಕರು ಅರ್ಥ ಬರೆದಿರುವರು. ಆದರೆ ಜೀವನದ ಕೊನೆಯಕ್ಷಣ ಎಂಬ ಅರ್ಥವೇ ಅದಕ್ಕೆ ವಿಹಿತ ಎಂಬುದು ಎಂಟನೆಯ ಅಧ್ಯಾಯದಿಂದ ತಿಳಿಯುವುದು[5].

*****

---

೧. ಆಪೂರ್ಯಮಾಣಮಚಲಪ್ರತಿಷ್ಠಂ ಸಮುದ್ರಮಾಪಃ ಪ್ರವಿಶಂತಿ ಯದ್ವತ್ ।
ತದ್ವತ್ ಕಾಮಾ ಯಂ ಪ್ರವಿಶಂತಿ ಸರ್ವೇ ಸ ಶಾಂತಿಮಾಪ್ನೋತಿ ನ ಕಾಮಕಾಮೀ ॥
-ಗೀತಾ (೨/ ೭೦ )

೨. ವಿಹಾಯ ಕಾಮಾನ್ ಯಃ ಸರ್ವಾನ್ ಪುಮಾಂಶ್ಚರತಿ ನಿಸ್ಪೃಹಃ ।
ನಿರ್ಮಮೋ ನಿರಹಂಕಾರಃ ಸ ಶಾಂತಿಮಧಿಗಚ್ಛತಿ ॥ -ಗೀತಾ (೨/ ೭೧ )

೧. ಭುಂಜಾನೋಽಪಿ ಹಿ ಯಃ ಕಾಮಾನ್ ಮರ್ಯಾದಾಂ ನ ತರೇತ್ ಕ್ವಚಿತ್ ।
ಸಮುದ್ರವದ್ಧರ್ಮಮಯೀಂ ನಾಸೌ ಕಾಮೀ ಸ ಉಚ್ಯತೇ ॥ -ಗೀತಾಭಾಷ್ಯ

೨. ಏಷಾ ಬ್ರಾಹ್ಮೀಸ್ಥಿತಿಃ ಪಾರ್ಥ ನೈನಾಂ ಪ್ರಾಪ್ಯ ವಿಮುಹ್ಯತಿ ।
ಸ್ಥಿತ್ವಾಽಸ್ಯಾಮಂತಕಾಲೇಽಪಿ ಬ್ರಹ್ಮನಿರ್ವಾಣಮೃಚ್ಛತಿ ॥ -ಗೀತಾ (೨/೭೨)

೩. ಗೀತಾ (೮/೫,೬)

# ಅಧ್ಯಾಯ - ೩

## ಕರ್ಮಯೋಗ

"ಪ್ರತಿಯೊಬ್ಬರೂ ತಮ್ಮ ಪಾಲಿನ ಕರ್ತವ್ಯವನ್ನು ತಪ್ಪದೆ ಆಚರಿಸಲೇಬೇಕು. ಅದನ್ನು ಎಂದೂ ತೊರೆಯುವಂತಿಲ್ಲ. ಆದರೆ ಕರ್ಮವು ಜ್ಞಾನಕ್ಕಿಂತ ತುಂಬ ಕಡಿಮೆಯಾದುದು". ಇವೆರಡೂ ಎರಡನೇ ಅಧ್ಯಾಯದಲ್ಲಿ ಬಂದ ಭಗವಂತನ ಮಾತುಗಳು. ಗೊಂದಲವುಂಟುಮಾಡುವಂತಿರುವ ಇವುಗಳ ಅಂತರಾರ್ಥವನ್ನು ತಿಳಿಸಲು ಅರ್ಜುನನು ಪ್ರಾರ್ಥಿಸಿಕೊಳ್ಳುತ್ತಾನೆ.[೧] "ಜ್ಞಾನವು ಕರ್ಮಕ್ಕಿಂತ ಶ್ರೇಷ್ಠವಾಗಿದ್ದಲ್ಲಿ ನನ್ನನ್ನೇಕೆ ಘೋರವಾದ ಯುದ್ಧಕರ್ಮದಲ್ಲಿ ತೊಡಗಿಸುತ್ತಿರುವಿ?" ಅರ್ಜುನನ ಈ ಮಾತಿನಲ್ಲಿ "ಜ್ಞಾನವು ಕರ್ಮಕ್ಕಿಂತ ಮಿಗಿಲಾಗಿದ್ದಲ್ಲಿ ಕರ್ಮದ ಬದಲು ಜ್ಞಾನದಲ್ಲೇ ನನ್ನನ್ನು ತೊಡಗಿಸಬಹುದಲ್ಲ?" ಮತ್ತು "ಕರ್ಮವು ಅವಶ್ಯವಾದಲ್ಲಿ ಭಿಕ್ಷಾಟನೆ ಮೊದಲಾದ ಸರಳಕರ್ಮದಲ್ಲಿ ತೊಡಗಿಸದೆ ರಾಗದ್ವೇಷಗಳಿಗೆ ವಿಶೇಷವಾಗಿ ಕಾರಣವಾಗುವ ಯುದ್ಧದಂತಹ ಘೋರಕರ್ಮದಲ್ಲೇ ಏಕೆ ತೊಡಗಿಸಬೇಕು?" ಎಂಬ ಎರಡು ಮುಖ್ಯ ಪ್ರಶ್ನೆಗಳು ಅಡಕವಾಗಿವೆ. ಇವುಗಳನ್ನು ವಿವರವಾಗಿ ವಿಶ್ಲೇಷಿಸಿ ಉತ್ತರಿಸುವುದು ಈ ಮೂರನೇ ಅಧ್ಯಾಯದ ಮುಖ್ಯಉದ್ದೇಶ. ಕರ್ಮಾಚರಣೆಯ ಬಗ್ಗೆ ಸಮಗ್ರ ಮಾಹಿತಿಯನ್ನು ಒದಗಿಸುವ ಕಾರಣದಿಂದಾಗಿ ಇದು ಕರ್ಮಯೋಗವೆಂದೇ ಪ್ರಸಿದ್ಧವಾಗಿದೆ.

*****

## ಜ್ಞಾನಯೋಗ - ಕರ್ಮಯೋಗ

ಕರ್ಮವು ಜ್ಞಾನಕ್ಕಿಂತ ಕಡಿಮೆ ಎಂಬುದು ನಿಜ. ಆದರೆ ಅದಕ್ಕೆ ಅದನ್ನು ತೊರೆಯಬೇಕು ಎಂದು ಅರ್ಥವಲ್ಲ. ಮೋಕ್ಷವು ಲಭಿಸುವುದು ತತ್ತ್ವಜ್ಞಾನದಿಂದಲೇ ಹೊರತು ಕರ್ಮದಿಂದಲ್ಲ. ಆದ್ದರಿಂದ ತತ್ತ್ವಜ್ಞಾನವೇ ದೊಡ್ಡದು.

ಆದರೆ ತತ್ತ್ವಜ್ಞಾನವನ್ನು ಪಡೆಯಲು ಕರ್ಮದ ಹೊರತು ಬೇರೊಂದು ಉಪಾಯವೇ ಇಲ್ಲ. ಆದ್ದರಿಂದ ಅದನ್ನು ತಪ್ಪದೆ ಆಚರಿಸಲೇಬೇಕು. ಆದರೆ ಅದರ ಗುರಿ

೪. ಜ್ಯಾಯಸೀ ಚೇತ್ ಕರ್ಮಣಸ್ತೇ ಮತಾ ಬುದ್ಧಿರ್ಜನಾರ್ದನ।
ತತ್ ಕಿಂ ಕರ್ಮಣಿ ಘೋರೇ ಮಾಂ ನಿಯೋಜಯಸಿ ಕೇಶವ॥ - ಗೀತಾ(೩/೧)

೧. ಆತ್ಮಸ್ವರೂಪಂ ಜ್ಞಾನಸಾಧನಂ ಚೋಕ್ತಂ ಪೂರ್ವತ್ರ। ಜ್ಞಾನಸಾಧನತ್ವೇನಾಕರ್ಮ ವಿನಿಂದ್ಯ ಕರ್ಮ ವಿಧೀಯತ ಉತ್ತರಾಧ್ಯಾಯೇ - ಗೀ. ಭಾ.

ಜ್ಞಾನಂ ಯೋಗಶ್ಚೋಕ್ತೌ। ತತ್ರ ಕರ್ಮಯೋಗಂ ವಿಶೇಷತಃ ಪ್ರಪಂಚಯತ್ಯನೇನಾ ಧ್ಯಾಯೇನ। -ಗೀ. ತಾ.

ತತ್ತ್ವಜ್ಞಾನ ಪ್ರಾಪ್ತಿಯಾಗಿರಬೇಕೇ ಹೊರತು ಇತರ ಸಾಮಾನ್ಯ ಫಲಗಳಾಗಲಿ ಕ್ಷುದ್ರ ಫಲಗಳಾಗಲಿ ಅಲ್ಲ.

ಬೆಂಕಿಯನ್ನು ತಿನ್ನಲು ಬರುವುದಿಲ್ಲವಾದರೂ ತಿನ್ನಲು ಬೇಕಾದ ಅನ್ನವನ್ನು ಬೇಯಿಸಲು ಅದು ಬೇಕೇ ಬೇಕು. ಅದರಂತೆ ಕರ್ಮವು ನೇರವಾಗಿ ಮೋಕ್ಷ ತಂದುಕೊಡಲಾರದಾದರೂ ಮೋಕ್ಷಸಾಧಕವಾದ ಜ್ಞಾನವನ್ನು ಸಂಪಾದಿಸಲು ಅದು ಅತ್ಯವಶ್ಯವಾಗಿದೆ. ಅದನ್ನು ತೊರೆದು ಜ್ಞಾನವನ್ನು ಸಂಪಾದಿಸುವುದು ಬೆಂಕಿಯನ್ನು ತೊರೆದು ಅನ್ನವನ್ನು ಬೇಯಿಸುವ ಪ್ರಯತ್ನದಂತೆ ಅಸಾಧ್ಯವೇ ಸರಿ.

ಅಂತಹ ಕರ್ಮಗಳು ಸಹ ಪ್ರವೃತ್ತ ಮತ್ತು ನಿವೃತ್ತ ಎಂಬುದಾಗಿ ಎರಡು ವಿಧ. ಸ್ವರ್ಗಾದಿ ಫಲಪ್ರಾಪ್ತಿಗೋಸ್ಕರ ಆಚರಿಸಲ್ಪಡುವ (ಕಾಮ್ಯ) ಕರ್ಮಗಳು ಪ್ರವೃತ್ತ ಕರ್ಮಗಳು, ಅಂತಹ ಫಲಗಳನ್ನು ಆಶಿಸದೆ ಕೇವಲ ತತ್ತ್ವಜ್ಞಾನಕ್ಕೇ ಸಾಧನವಾಗುವ ಕರ್ಮಗಳು ನಿವೃತ್ತ ಕರ್ಮಗಳು. ಫಲಾಪೇಕ್ಷೆಯಿಂದ ಯಜ್ಞಯಾಗಾದಿಗಳು ಮೊದಲಾದ ಗೃಹಸ್ಥ ಧರ್ಮಗಳು ಪ್ರವೃತ್ತ ಕರ್ಮಕ್ಕೆ ದೃಷ್ಟಾಂತವಾದರೆ; ಜಪತಪಾದಿಗಳ ಅನುಷ್ಠಾನ, ಅಧ್ಯಯನ ಮೊದಲಾದವುಗಳು ನಿವೃತ್ತ ಕರ್ಮಗಳಿಗೆ ದೃಷ್ಟಾಂತವಾಗಿವೆ.

ನಿವೃತ್ತ ಕರ್ಮಗಳ ಫಲ ನೇರವಾಗಿ ತತ್ತ್ವಜ್ಞಾನವೇ ಆದ್ದರಿಂದ ಅವುಗಳನ್ನು ಅನುಷ್ಠಾನ ಮಾಡುವವರಿಗೆ ಜ್ಞಾನಯೋಗಿಗಳು(ಸಾಂಖ್ಯರು) ಎಂದು ಹೆಸರು. ಇನ್ನು ಪ್ರವೃತ್ತ ಧರ್ಮಗಳು ಮೂಲತಃ ಬಂಧಕವೇ ಆಗಿವೆ. ಆದರೆ ಅವುಗಳನ್ನೂ ಸಹ ಸ್ವರ್ಗಾದಿ ಕಾಮನೆಗಳನ್ನು ತೊರೆದು ಅನುಷ್ಠಾನ ಮಾಡಿದಾಗ ಅವೂ ಸಹ ತತ್ತ್ವಜ್ಞಾನಸಂಪಾದನೆಗೆ ಸಾಧಕವಾಗುತ್ತವೆ. ಹೀಗೆ ಅವುಗಳನ್ನು ಅನುಷ್ಠಾನ ಮಾಡಿ ಜ್ಞಾನಿಗಳಾಗುವವರು ಕರ್ಮಯೋಗಿಗಳು. ಸನಕಾದಿಗಳು ಜ್ಞಾನಯೋಗಿಗಳಾದರೆ, ಜನಕಾದಿಗಳು ಕರ್ಮಯೋಗಿಗಳಾಗಿರುವರು.

ಈ ಎರಡು ಗುಂಪಿನವರೂ ಸಹ .ಕರ್ಮವನ್ನು ತೊರೆಯುವಂತೆಯೂ ಇಲ್ಲ ಜ್ಞಾನವನ್ನು ಬಿಡುವಂತೆಯೂ ಇಲ್ಲ; ಆದ್ದರಿಂದ ಇವರಿಬ್ಬರೂ ಜ್ಞಾನಯೋಗಿಗಳೂ ಹೌದು, ಕರ್ಮಯೋಗಿಗಳೂ ಹೌದು. ಆದರೆ ಜ್ಞಾನಯೋಗಿಗಳಲ್ಲಿ ಕರ್ಮದ ಅಂಶಕ್ಕಿಂತ ಜ್ಞಾನದ ಅಂಶ ಹೆಚ್ಚು, ಕರ್ಮಯೋಗಿಗಳಲ್ಲಿ ಜ್ಞಾನದ ಅಂಶಕ್ಕಿಂತ ಕರ್ಮದ ಅಂಶ ಹೆಚ್ಚು, ಆದ್ದರಿಂದಲೇ ಜ್ಞಾನಯೋಗಿಗಳು, ಕರ್ಮಯೋಗಿಗಳು ಎಂಬುದಾಗಿ ಅವರನ್ನು ವರ್ಗೀಕರಿಸಲಾಗಿದೆ.

ವೈದ್ಯಶಾಸ್ತ್ರವನ್ನು ಕಲಿತ ಒಬ್ಬನು ವೈದ್ಯವೃತ್ತಿಯನ್ನೇ ಅವಲಂಬಿಸಬಹುದು. ಮತ್ತೊಬ್ಬನು ವೈದ್ಯಶಾಸ್ತ್ರದ ಅಧ್ಯಾಪಕ ವೃತ್ತಿಯನ್ನು ಅವಲಂಬಿಸಬಹುದು; ಮೊದಲನೆಯವನನ್ನು ವೈದ್ಯನೆಂದರೆ ಎರಡನೆಯವನನ್ನು ಅಧ್ಯಾಪಕ ಎನ್ನುತ್ತಾರೆ. ಅವರಿಬ್ಬರೂ ಮೂಲತಃ ವೈದ್ಯ ಪದವೀಧರರೇ ಆದರೂ ಅವರ ವೃತ್ತಿಯಕಾರಣದಿಂದ

ಹೆಸರಿನಲ್ಲಿ ವಿಶೇಷವಿರುವಂತೆ ಈ ಜ್ಞಾನಯೋಗಿಗಳು ಮತ್ತು ಕರ್ಮಯೋಗಿಗಳಲ್ಲಿ ವಿಶೇಷವಿದೆ.

ಗೀತೆಯಲ್ಲಿಯ ಅತ್ಯಂತ ಗೊಂದಲಮಯವಾದ ಸಾಂಖ್ಯ ಮತ್ತು ಯೋಗಗಳನ್ನು ಹೀಗೆ ಸಮರ್ಪಕವಾಗಿ ಪ್ರಥಮಬಾರಿಗೆ ವ್ಯಾಖ್ಯಾನಿಸಿದ ಶ್ರೇಯಸ್ಸು ಶ್ರೀಮಧ್ವಾಚಾರ್ಯರದು. ಜ್ಞಾನಯೋಗಿಗಳು ಎಂಬುದಕ್ಕೆ ಕೆಲವರು ಕರ್ಮವನ್ನು ಪೂರ್ಣವಾಗಿ ತೊರೆದವರು ಎಂದು ಅರ್ಥಮಾಡಿರುವುದುಂಟು. ಆ ಅರ್ಥವನ್ನು ಒಪ್ಪುವುದಾದರೆ ಕರ್ಮಯೋಗಿಗಳು ಎಂದರೆ ಜ್ಞಾನವನ್ನು ಸಂಪೂರ್ಣವಾಗಿ ತೊರೆದವರು ಎಂದೂ ಹೇಳಬೇಕಾಗುತ್ತದೆ; ಹಾಗಿದ್ದಲ್ಲಿ ಜನಕಾದಿ ಕರ್ಮಯೋಗಿಗಳನ್ನು ಜ್ಞಾನಶೂನ್ಯರು ಎಂದಾಗುವುದಲ್ಲವೇ!

ಭಗವಂತನು ಯಾರಿಗೆ ಯಾವ ಯೋಗಕ್ಕೆ ಅವಕಾಶವೀಯುವನೋ ಅಂತಹ ಯೋಗವನ್ನೇ ಅವರು [೧]ಸಾಧಿಸಿಕೊಳ್ಳಬೇಕು. ಔಷಧಿಯ ಆಯ್ಕೆ ವೈದ್ಯನದೇ ಹೊರತು ರೋಗಿಯದಲ್ಲ. ಅವನು ಸಹ ಔಷಧಿಯನ್ನು ವಿಧಿಸುವುದು ರೋಗವನ್ನು ನೋಡಿಯೇ ಹೊರತು ಬೇರೆ ಕಾರಣದಿಂದಲ್ಲ. ಅದರಂತೆ ಭಗವಂತನು ಸಹ ಅವರವರ ಯೋಗ್ಯತೆಗೆ ತಕ್ಕಂತಹ ಯೋಗಗಳನ್ನು ವಿಧಿಸುವನು; ಇದರಲ್ಲಿ ಯಾವುದು ಶ್ರೇಷ್ಠ ಎಂಬ ಪ್ರಶ್ನೆಗೆ ಅವಕಾಶವೇ ಇಲ್ಲ. ಯಾರಿಗೆ ಯಾವುದು ವಿಹಿತ ಎಂಬುದು ಮಾತ್ರವೇ ಪ್ರಸ್ತುತ. ಅರ್ಜುನನು ಕರ್ಮಯೋಗಿಯಾದ್ದರಿಂದಲೇ ಶ್ರೀಕೃಷ್ಣನು ಅವನನ್ನು ಅದರಲ್ಲಿ ತೊಡಗಿಸುತ್ತಿರುವನು.

*****

## ಕರ್ಮತ್ಯಾಗವು ಅವ್ಯವಹಾರ್ಯ

ಕರ್ಮವನ್ನು ಸಂಸಾರದ ಬೀಜ ಎಂದು ಶಾಸ್ತ್ರಗಳು ಸಾರಿರುವುದರಿಂದ ಎಲ್ಲ ರೀತಿಯ ಕರ್ಮಗಳನ್ನು ಪೂರ್ಣವಾಗಿ ತೊರೆದುಬಿಟ್ಟರೆ ಸಂಸಾರವು ದೂರಾಗಿ ಮೋಕ್ಷವು ಲಭಿಸುವುದಲ್ಲವೇ? ಎಂಬ ಸಂಶಯವನ್ನು ಭಗವಂತನು ಇಲ್ಲಿ ಪರಿಹರಿಸುತ್ತಿರುವನು.

ಕರ್ಮವು ಬಂಧಕ ಎಂಬುದು ನಿಜ. ಅದರ ಬಂಧನದಿಂದ ಪಾರಾಗಬೇಕು ಎಂಬುದೂ ನಿಜ. ಆದರೆ ಅಂತಹ ಕರ್ಮದಿಂದ ಪಾರಾಗಲು ಕರ್ಮವನ್ನೇ ತೊರೆಯುವುದು ಮಾತ್ರ ಎಂದಿಗೂ [೨]ಉಪಾಯವಾಗಲಾರದು. ಪರೀಕ್ಷೆಯಲ್ಲಿ ಉತ್ತೀರ್ಣನಾಗಲು ಪರೀಕ್ಷೆಯನ್ನೇ ತೊರೆಯುವುದು ಉಪಾಯವಾದೀತೆ?

---

೧. 'ವಿಹಿತೋ ಯಸ್ಯ ಯೋ ಧರ್ಮೋ ವಿಷ್ಣುನಾ ಪ್ರಭವಿಷ್ಣುನಾ। ತೇನ ಮುಕ್ತಿರ್ಭವೇತ್ ತಸ್ಯ ತಂ ಗುರುರ್ವೇದ ಸರ್ವವಿತ್ ॥' ಇತಿ ಪ್ರವೃತ್ತಸಂಹಿತಾಯಾಮ್ ॥
– ಭಾಗವತತಾತ್ಪರ್ಯ(೫/೧/೧೯)

೨. ನ ಕರ್ಮಣಾಮನಾರಂಭಾನ್ನೈಷ್ಕರ್ಮ್ಯಂ ಪುರುಷೋಽಶ್ನುತೇ। – ಗೀತಾ (೩/೪)

ಪರೀಕ್ಷೆಯನ್ನು ಸರಿಯಾಗಿ ಎದುರಿಸುವುದೇ ಅದರಿಂದ ಪಾರಾಗಲು ಉಪಾಯವಾಗಿರುವಂತೆ ಕರ್ಮದಿಂದ ಪಾರಾಗಲು ಯೋಗರೂಪವಾದ ಕರ್ಮಾಚರಣೆಯೇ ಉಪಾಯವಾಗಿದೆ.

ಕರ್ಮವನ್ನು ತೊರೆಯುವುದು ಮೋಕ್ಷಕ್ಕೆ ಹಾದಿಯಾಗದಿದ್ದಲ್ಲಿ ಕೆಲವರು ಯತ್ಯಾಶ್ರಮವನ್ನು ಸ್ವೀಕರಿಸುವುದಾದರೂ ಏತಕ್ಕೆ? ಎಂದು ಕೇಳಬಹುದು. ಸನ್ಯಾಸವೆಂದರೆ ಕರ್ಮಗಳನ್ನೆಲ್ಲ ತೊರೆಯುವುದು ಎಂದು ಅರ್ಥವೇ ಅಲ್ಲ; ತತ್ತ್ವಜ್ಞಾನಸಂಪಾದನೆಗೆ ನೇರವಾಗಿ ಕಾರಣವಾಗುವ ಜಪತಪಾದಿ ಸತ್ಕರ್ಮಗಳಲ್ಲಿ ಹೆಚ್ಚಾಗಿ ನಿರತರಾಗುವುದು ಎಂದು ಮಾತ್ರವೇ ಸನ್ಯಾಸದ ನಿಜವಾದ ಅರ್ಥ.

ಪಾಠ ಪ್ರವಚನ, ಅಹಿಂಸೆ ಲೋಕೋಪಕಾರ ಮೊದಲಾದ ಕರ್ಮಗಳನ್ನು ಸನ್ಯಾಸಿಗಳು ಸಹ ತಪ್ಪದೇ ಆಚರಿಸಲೇಬೇಕು ಎಂದೇ ಶಾಸ್ತ್ರಗಳು ಆದೇಶಿಸಿವೆ. ಈ ಉದ್ದೇಶವಿಲ್ಲದೇ ಕಾವಿ ತೊಡುವುದು ಪಲಾಯನವಾದವಾದೀತೇ ಹೊರತು ಸನ್ಯಾಸವಲ್ಲ. ಅಂತಹ ಪಲಾಯನವಾದದಿಂದ ಎಂದೂ ಮೋಕ್ಷವು ಲಭಿಸಲಾರದು.[೧]

ಪರೀಕ್ಷೆಯಲ್ಲಿ ಪಾಸಾಗಲು ಬಯಸುವ ವಿದ್ಯಾರ್ಥಿಯು ತೊರೆಯಬೇಕಾದದ್ದು ಸಿನಿಮಾ, ನಾಟಕ ಮೊದಲಾದ ವ್ಯಾಸಂಗಕ್ಕೆ ಅಡ್ಡಿಯಾಗುವ ಕರ್ಮಗಳನ್ನೇ ಹೊರತು ಓದುವ ಕರ್ಮವನ್ನೇ ಅಲ್ಲ; ಅಲ್ಲವೇ!

ಕರ್ಮವನ್ನು ತೊರೆಯುವುದರಿಂದ ಮಾತ್ರವೇ ಮೋಕ್ಷವಾಗುವುದಿದ್ದಲ್ಲಿ ಓದದ ಬರೆಯದ ಪರೀಕ್ಷೆಗೇ ಕೂಡದ ವಿದ್ಯಾರ್ಥಿಯೇ ಉತ್ತೀರ್ಣನಾಗುವನು ಎನ್ನಬೇಕಾಗುವುದು. ಯಾವ ಕರ್ಮವನ್ನೂ ಮಾಡದ ಕಲ್ಲು ಬಂಡೆ ಮೊದಲಾದ ಜಡ ಪದಾರ್ಥಗಳಿಗೆ ಮಾತ್ರವೇ ಮುಕ್ತಿ ಎಂದೂ ಹೇಳಬೇಕಾಗುವುದು, ಕರ್ಮ ತೊರೆದು ಬದುಕುವ ಜಡದಂತಹ ಸೋಮಾರಿಗಳಿಗೂ ಸದ್ಗತಿ ಲಭಿಸುವುದು ಎಂದಾಗುವುದು. ಮೋಕ್ಷ ಬಯಸುವವರೆಲ್ಲ ಸಕಲಕರ್ಮಗಳನ್ನೂ ತೊರೆಯಲೇಬೇಕು ಎಂಬ ಕೆಲವರ ಮತ ಇಂತಹ ಕಾರಣಗಳಿಂದಾಗಿಯೇ ಅಗ್ರಾಹ್ಯ ಎನ್ನಿಸುವುದು.

*****

## ಕರ್ಮತ್ಯಾಗವು ಅಶಕ್ಯ

ಸಕಲಕರ್ಮಗಳನ್ನು ಪೂರ್ಣವಾಗಿ ತೊರೆಯುವುದು ಈ ಕಾರಣಗಳಿಂದ ಸಾಧುವಲ್ಲ, ಮಾತ್ರವಲ್ಲದೇ ಅದು ಸಾಧ್ಯವೂ ಅಲ್ಲ.[೨] ನಿಲ್ಲುವುದು, ಕೂಡುವುದು,

---

೧. ನ ಚ ಸಂನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ । - ಗೀತಾ ( ೩/ ೪)

೨. ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ । - ಗೀತಾ (೩/೫)

ನಡೆಯುವುದು, ಮಲಗುವುದು, ಓಡುವುದು ಮೊದಲಾಗಿ ಪ್ರಾಣಿಗಳು ಮಾಡುವ ಸಕಲ ಕಾರ್ಯಗಳೂ ಸಹ ಕರ್ಮಗಳೇ ಆಗಿವೆ. ಇಂತಹ ಕರ್ಮಗಳಲ್ಲಿ ಒಂದಲ್ಲ ಒಂದು ಕರ್ಮವನ್ನು ತಪ್ಪದೇ ಮಾಡುತ್ತಲೇ ಇರುವುದು ಚೇತನರ ಸ್ವಭಾವ. ದೇಹ ಇರುವವರೆಗೂ ಇವುಗಳನ್ನು ತಪ್ಪಿಸಲು ಸಾಧ್ಯವಿಲ್ಲ. ಪ್ರಾಣಿಗಳು ನಿದ್ರೆಯಲ್ಲಿದ್ದಾಗಲೂ ಉಸಿರಾಟದ ಕಾರ್ಯ ನಡೆದೇ ಇರುತ್ತದೆ ಎಂಬುದನ್ನು ಗಮನಿಸಬೇಕು.

ಕರ್ಮತ್ಯಾಗ ಮಾಡುತ್ತೇನೆ ಎಂದು ಹೇಳುವವನು ಮಾಡುವುದು ಕರ್ಮಾಂತರ-ವನ್ನೇ ಹೊರತು ಕರ್ಮತ್ಯಾಗವನ್ನಲ್ಲ. ಎಲ್ಲ ಕರ್ಮಗಳನ್ನೂ ತ್ಯಜಿಸಿ ಸುಮ್ಮನೆ ಕೂಡುವುದು ಸಹ ಕರ್ಮತ್ಯಾಗವೆನಿಸಲಾರದು. ಸುಮ್ಮನೇ ಕೂಡುವುದೂ ಸಹ ಒಂದು ಕರ್ಮವೇ ಅಲ್ಲವೇ? ಮೂಕನೆಂದು ತನ್ನನ್ನು ಘೋಷಿಸಿಕೊಳ್ಳುವುದು ಸಹ ಅವನು ಮೂಕನಲ್ಲ ಎಂಬುದಕ್ಕೆ ಪುರಾವೆ ಎನ್ನಿಸುವುದಲ್ಲವೇ! ಅವನು ಮೂಕನಾಗಿರದೇ ಮೂರ್ಖನೇ ಆಗಿರುವನು ಎಂದು ರುಜುವಾತಾಗುವದಲ್ಲವೇ. ಕರ್ಮತ್ಯಾಗವೂ ಒಂದು ಕರ್ಮವೇ ತಾನೇ. ಅಸಂಪ್ರಜ್ಞಾತಸಮಾಧಿಸ್ಥಿತಿಯನ್ನು ಸಾಧಿಸಿದ ಯೋಗಿಯು ಸಹ ಆ ಸ್ಥಿತಿಯಲ್ಲೂ ಬ್ರಹ್ಮದರ್ಶನವೆಂಬ ಕರ್ಮವನ್ನು ಮಾಡುತ್ತಲೇ ಇರುತ್ತಾನೆ. ಹೀಗೆ ಸಕಲಕರ್ಮಗಳನ್ನೂ ಮುಮುಕ್ಷು ವಾದವನು ತೊರೆಯುವ ವಿಚಾರವು ಅಸಾಧುವಾಗಿರುವಂತೆ ಅಸಾಧ್ಯವೂ ಆಗಿದೆ. ಅಂತಹ ಕರ್ಮತ್ಯಾಗದ ಕಲ್ಪನೆ ನಿಜವಾದ ಅರ್ಥದಲ್ಲಿ ಮರಣವೇ ಸರಿ; ಅದಕ್ಕಾಗಿ ಮಾಡುವ ಪ್ರಯತ್ನ ನಿಜವಾದ ಅರ್ಥದಲ್ಲಿ 'ಆತ್ಮಹತ್ಯೆ'ಯೇ ಸರಿ.

*****

## ಮಿಥ್ಯಾಚಾರವು ಕರ್ಮತ್ಯಾಗವಲ್ಲ

ಹೀಗೆ ಅಸಾಧ್ಯವಾದ ಕರ್ಮತ್ಯಾಗವನ್ನು ಸಾಧಿಸಿಯೇ ಬಿಡುತ್ತೇನೆ ಎಂದು ಸುಮ್ಮನೇ ಕೂಡುವ ಪ್ರವೃತ್ತಿಯು ಕರ್ಮತ್ಯಾಗವಾಗಿರದೆ ಮಿಥ್ಯಾಚಾರವೆನ್ನಿಸುತ್ತದೆ. ಏಕೆಂದರೆ ಅಂತಹವನು ಸುಮ್ಮನೇ ಕೂಡುವುದು ನಿಜವಾದರೂ ಅವನ ಮನಸ್ಸು ಮಾತ್ರ ಸುಮ್ಮನೇ ಕೂತಿರುವುದಿಲ್ಲ, ತನಗೆ ಇಷ್ಟವಾದ ರೂಪರಸಾದಿ ವಿಷಯಗಳನ್ನು ಮೆಲಕು ಹಾಕುತ್ತಲೇ ಇರುತ್ತದೆ;[೧] ಆಷಾಢಭೂತಿ, ಗೋಮುಖವ್ಯಾಘ್ರ, ಡಾಂಭಿಕ ಮೊದಲಾದ ಪದಗಳು ಇಂತಹ ಮಿಥ್ಯಾಚಾರಿಗಳನ್ನು ಕುರಿತೇ ಹೊರಟಿರುವುದು. ಇಂತಹವರ ನಡತೆಗೆ 'ಬಕವೃತ್ತಿ' ಎಂದು ಹೆಸರು. ಶ್ರೀಪುರಂದರದಾಸರು 'ಉದರ ವೈರಾಗ್ಯವಿದು', 'ನಗೆಯು ಬರುತಿದೆ ಎನಗೆ ನಗೆಯು ಬರುತಿದೆ' ಎಂದು ಹಾಡಿದ್ದು ಸಹ ಇಂತಹವರನ್ನು ಕುರಿತೇ.

---

೧. ಕರ್ಮೇಂದ್ರಿಯಾಣಿ ಸಂಯಮ್ಯ ಯ ಆಸ್ತೇ ಮನಸಾ ಸ್ಮರನ್ ।
ಇಂದ್ರಿಯಾರ್ಥಾನ್ ವಿಮೂಢಾತ್ಮಾ ಮಿಥ್ಯಾಚಾರಃ ಸ ಉಚ್ಯತೇ ॥ – ಗೀತಾ (೩/೬)

ಆದ್ದರಿಂದ ತೊರೆಯಬೇಕಾದದ್ದು ಕರ್ಮತ್ಯಾಗದ ವಿಚಾರವನ್ನೇ ಹೊರತು ಕರ್ಮವನ್ನಲ್ಲ.[೨] ವಿಹಿತ ಕರ್ಮವನ್ನು ತಪ್ಪದೇ ಆಚರಿಸುವ ಪ್ರವೃತ್ತಿಯನ್ನು ಬೆಳೆಸಿಕೊಳ್ಳುವುದರಲ್ಲೇ ನಿಜವಾದ ಒಳಿತು ಅಡಗಿದೆ. ವಿವೇಕಿಯು ಎಚ್ಚರ ವಹಿಸ-ಬೇಕಾದದ್ದು ಸಕಲ ಕರ್ಮಗಳನ್ನು ತೊರೆಯುವ ಬಗೆಗಲ್ಲ, ತನ್ನ ಅಧಃಪತನಕ್ಕೆ ಕಾರಣವಾಗುವ ನಿಷಿದ್ಧ ಕರ್ಮಗಳನ್ನು ತೊರೆಯುವ ಬಗ್ಗೆ ಮಾತ್ರ.

ಹಾಗೆಯೇ ಯಥೋಚಿತವಾಗಿ ಕಾಮ್ಯಕರ್ಮಗಳ ತ್ಯಾಗಕ್ಕೂ ಅವುಗಳಿಂದ ಬರುವ ಕ್ಷುದ್ರಫಲಗಳ ಅಭಿಲಾಷೆಯನ್ನು ತೊರೆಯುವುದಕ್ಕೂ [೩]ನಿರಂತರ ಪ್ರಯತ್ನವನ್ನು ಮಾಡುತ್ತಲೇ ಇರಬೇಕು. ಅಂತೂ ಏನನ್ನೂ ಮಾಡದವನು ನಿಷ್ಕ್ರಿಯನೆನ್ನಿಸುವನೇ ಹೊರತು ಕರ್ಮಯೋಗಿ ಎಂದಲ್ಲ.

ಸರ್ವಕಾಮನೆಗಳ ತ್ಯಾಗವು ಎಷ್ಟು ಅವ್ಯವಹಾರವೋ ಸರ್ವಕರ್ಮಗಳ ತ್ಯಾಗವೂ ಸಹ ಅಷ್ಟೇ ಅವ್ಯವಹಾರವಾಗಿದೆ. ಸಕಲ ಕರ್ಮಗಳನ್ನೂ ತೊರೆಯ ಹೊರಟವನು ಹೊಟ್ಟೆಪಾಡಿಗೂ ಗತಿಯಿಲ್ಲದವನಾಗುತ್ತಾನೆ; ಅವನು ಬದುಕುವುದಾದರೂ ಎಂತು?

## ನಿಷ್ಕಾಮಕರ್ಮವು ಬಂಧಕವಲ್ಲ

ಕರ್ಮವು ಸಂಸಾರದ ಬೀಜವೆಂದ ಮೇಲೆ ಅದನ್ನು ಮಾಡುತ್ತಲೇ ಇದ್ದರೆ ಅದರಿಂದ ಬಿಡುಗಡೆ ದೊರೆಯುವುದೆಂತು ? ಈ ಬಗ್ಗೆಯೂ ಯೋಗಿಯು ಚಿಂತಿಸಬೇಕಿಲ್ಲ; ಕರ್ಮವನ್ನು ಬಂಧಕವೆಂದು ಹೇಳಿದ ಶಾಸ್ತ್ರಗಳೇ ಅದನ್ನು ಮೋಚಕವೆಂದೂ ಸಾರಿವೆ. **'ಕರ್ಮಣಾ ಬಧ್ಯತೇ ಜಂತುಃ' 'ಕರ್ಮಣಾ ಜ್ಞಾನಮಾಪ್ನೋತಿ'** ಒಂದೇ ಕರ್ಮವು ಬಂಧಕ ಮತ್ತು ತಾರಕ ಹೇಗಾದೀತು? ಎಂಬ ಯೋಚನೆಗೂ ಇಲ್ಲಿ ಅವಕಾಶವಿಲ್ಲ. ನಿಷಿದ್ಧವಾದ ಕರ್ಮ ಬಂಧಕವಾದರೆ ವಿಹಿತವಾದ ಕರ್ಮ ತಾರಕವಾಗುತ್ತದೆ. ವಿಹಿತಕರ್ಮವೂ ಸಹ ಫಲಾಪೇಕ್ಷೆಯಿಂದ ಮಾಡಲ್ಪಟ್ಟಾಗ ಬಂಧಕವಾದರೆ ಭಗವತ್ಪ್ರೀತಿಗಾಗಿ ಆಚರಿಸಲ್ಪಟ್ಟಾಗ ತಾರಕವಾಗುತ್ತದೆ.

ಒಂದೇ ಬೀಗದ ಕೈ ಬೀಗವನ್ನು ಹಾಕಲೂ ಬರುವುದು; ತೆರೆಯಲೂ ಬರುವುದು. ಎಡಕ್ಕೆ ತಿರುಗಿಸಿದಾಗ ಅದು ಮೋಚಕ; ಎಡಕ್ಕೆ ತಿರುಗುವುದು ಎಂದರೆ ವಾಮಾಚಾರ (ದುರಾಚಾರ) ನಿಷಿದ್ಧಕರ್ಮ ಎಂದರ್ಥ. ಬಲಕ್ಕೆ ತಿರುಗುವುದು ಸದಾಚಾರ, ವಿಹಿತ ಕರ್ಮ ಎಂದರ್ಥ. ದುರಾಚಾರ ಮಾರಕವಾದರೆ ಸದಾಚಾರ ತಾರಕವಾದುದು. ದಡ್ಡ

---

೨. ಯಸ್ತ್ವಿಂದ್ರಿಯಾಣಿ ಮನಸಾ ನಿಯಮ್ಯಾರಭತೇಽರ್ಜುನ ।
ಕರ್ಮೇಂದ್ರಿಯೈಃ ಕರ್ಮಯೋಗಮಸಕ್ತಃ ಸ ವಿಶಿಷ್ಯತೇ ॥ – ಗೀತಾ(೩/೭)

೩.. ನಿಯತಂ ಕುರು ಕರ್ಮ ತ್ವಂ ಕರ್ಮ ಜ್ಯಾಯೋ ಹ್ಯಕರ್ಮಣಃ ।
ಶರೀರಯಾತ್ರಾಽಪಿ ಚ ತೇ ನ ಪ್ರಸಿದ್ಧ್ಯೇದಕರ್ಮಣಃ ॥ – ಗೀತಾ(೩/ ೮)

ವಿದ್ಯಾರ್ಥಿಯು ಫೇಲಾಗುವುದು ಬರೆದೇ; ಜಾಣ ವಿದ್ಯಾರ್ಥಿಯು ಪಾಸಾಗುವುದು ಸಹ ಬರೆದೇ; ತಪ್ಪು ಉತ್ತರವು ಮಾರಕವಾದರೆ ಸರಿಯಾದ ಉತ್ತರವು ತಾರಕ; ಅದರಂತೆ ಇದೂ ಸಹ.

ಶ್ರೀರಾಮಸೀತೆಯರನ್ನು ವಂಚಿಸಲೆಂದು ರಾವಣನ ಆದೇಶದಂತೆ ಮಾರೀಚನು ಮಾಯಾಜಿಂಕೆಯ ವೇಷದಲ್ಲಿ ತೆರಳಿ ಕೊನೆಗೆ ಶ್ರೀರಾಮನಿಂದ ಹತನಾಗುತ್ತಾನೆ. ರಾವಣನ ಸೀತಾ ಅಪಹರಣದ ಪ್ರಯತ್ನವನ್ನು ತಪ್ಪಿಸಲೆಂದು ಬಹಳವಾಗಿ ಪ್ರಯತ್ನಿಸಿ ಜಟಾಯುವು ರಾವಣನಿಂದ ಹತನಾಗುತ್ತಾನೆ. ಇಬ್ಬರು ಹತರಾದದ್ದು ದಂಡಕಾರಣ್ಯ ಪ್ರಾಂತದಲ್ಲಿ, ಗೋದಾವರಿ ತೀರದಲ್ಲಿ, ಅದೂ ಒಂದೇ ದಿನದಲ್ಲಿ, ರಾವಣನಿಂದ ಹತನಾದ ಜಟಾಯು ಸದ್ಗತಿಗೆ ತೆರಳಿದರೆ, ಶ್ರೀರಾಮನಿಂದ ಹತನಾದ ಮಾರೀಚನು ದುರ್ಗತಿಗೆ ತೆರಳುವನು. ಜಟಾಯು ಹತನಾದದ್ದು ರಾಮನ ಪ್ರೀತಿಗೆಂದು. ಮಾರೀಚನು ಹತನಾದದ್ದು ರಾವಣನ ಪ್ರೀತಿಗೆಂದು. ಅದರಿಂದಾಗಿಯೇ ಜಟಾಯುಗೆ ಸದ್ಗತಿಯಾದರೆ ಮಾರೀಚನಿಗೆ ದುರ್ಗತಿಯಾಯಿತು. ಇಬ್ಬರಿಗೂ ಸಾವು, ಸತ್ತ ಸ್ಥಳ ಮೊದಲಾದವು ಒಂದೇ ಆದರೂ ಫಲವು ಭಿನ್ನವಾಗಲು ಅವರ ಮುಖ್ಯ ಉದ್ದೇಶದಲ್ಲಿನ ಅಂತರವು ಕಾರಣವಾಯಿತು. ಜಟಾಯುವಿನ ಸಾವು ಯಜ್ಞವಾಗಿ ತಾರಕವಾದರೆ, ಮಾರೀಚನ ಸಾವು ಯಜ್ಞವೆನ್ನಿಸದೇ ಮಾರಕವಾಯಿತು.

[೧]ಯಜ್ಞ ಎಂಬ ಬುದ್ಧಿಯಿಂದ ಆಚರಿಸಲ್ಪಡುವ ಕರ್ಮಗಳು ಎಂದಿಗೂ ಬಂಧಕವಾಗಲಾರವು. ಅಗ್ನಿಯಲ್ಲಿ ಹವಿಸ್ಸನ್ನು ಹೋಮಿಸುವುದೇ ಯಜ್ಞ ಎಂಬ ಅರ್ಥದಲ್ಲಿ ಯಜ್ಞ ಶಬ್ದವು ಲೋಕದಲ್ಲಿ ರೂಢಿಯಲ್ಲಿದೆ. ಆದರೆ ಗೀತೆಯು ಈ ಪ್ರಸಂಗದಲ್ಲಿ ಅದನ್ನು ತ್ಯಾಗ ಎಂಬ ವಿಶಾಲವಾದ ಅರ್ಥದಲ್ಲಿ ಬಳಸಿದೆ. ಈ ಅರ್ಥದಲ್ಲಿ ಅಶ್ವಮೇಧಾದಿ ಯಜ್ಞಗಳು ಮಾತ್ರವಲ್ಲದೆ ಜೀವನದ ಪ್ರತಿಯೊಂದು ಕರ್ಮವೂ ಯಜ್ಞವಾಗಲು ಸಾಧ್ಯವಿದೆ. ಅಷ್ಟೇ ಏಕೆ? ಇಡೀ ಜೀವನವನ್ನೇ ಒಂದು ಯಜ್ಞವೆಂದು ಕರೆಯುವ ಉದಾತ್ತ ದೃಷ್ಟಿಯೂ ಇದರಲ್ಲಿದೆ.

ಒಂದು ಯಜ್ಞದಲ್ಲಿ ಅಗ್ನಿ, ತುಪ್ಪ ಮೊದಲಾದವುಗಳು ಇದ್ದು, ಋತ್ವಿಕ್ಕುಗಳು ಮೊದಲಾದವರು ನೆರೆದಿದ್ದು, ವೇದಮಂತ್ರಗಳ ಘೋಷ ನಡೆದಿದ್ದರೂ ಸಹ ಕೃಷ್ಣಾರ್ಪಣ ಬುದ್ಧಿ ಇಲ್ಲವಾದಾಗ ಅದು ಯಜ್ಞವಾಗದೆ ಬರೀ ಬಂಧಕವಾದ ಒಂದು ದುಷ್ಕರ್ಮವೇ ಆದೀತು.

ಆದರೆ ಅವಾವು ಇಲ್ಲದೆಯೂ ಭಗವದರ್ಪಣ ಬುದ್ಧಿಯೊಂದು ಜಾಗೃತವಾಗಿದ್ದಲ್ಲಿ ಬಂಧಕವಾಗಬಹುದಾಗಿದ್ದ ಸಾಮಾನ್ಯ ಕರ್ಮವೊಂದು ನಿಜವಾದ ಅರ್ಥದಲ್ಲಿ ಯಜ್ಞ-

---

೧. ಯಜ್ಞಾರ್ಥಾತ್ ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬಂಧನಃ। – ಗೀತಾ (೩/೯)

ವಾಗಬಲ್ಲದು ಎಂಬುದನ್ನು ಭಗವದ್ಗೀತೆಯು ಪ್ರತಿಪಾದಿಸಿದೆ. ಸಾಮಾನ್ಯ ಯಜ್ಞಕ್ಕೆ ಅಗ್ನಿ ಆಜ್ಯಗಳು ಅವಶ್ಯವಿರುವಂತೆ ಈ ಯಜ್ಞದಲ್ಲಿ ತ್ಯಾಗಬುದ್ಧಿ ಮತ್ತು ಭಗವನ್ನಿಷ್ಠೆಗಳು ಮುಖ್ಯವಾಗಿವೆ.

ಭಗವಂತ ಎಂಬ ಅರ್ಥದಲ್ಲೂ ಇಲ್ಲಿ ಯಜ್ಞ ಶಬ್ದವು ಪ್ರಯೋಗಿಸಲ್ಪಟ್ಟಿದೆ ಎಂಬುದನ್ನು ಶ್ರೀಮದಾಚಾರ್ಯರು ತೋರಿಸಿಕೊಟ್ಟಿರುವರು; ಭಗವಂತನನ್ನು ಮೆಚ್ಚಿಸಬೇಕೆಂಬ ಮಹೋನ್ನತ ಧ್ಯೇಯದಿಂದ ಆಚರಿಸಲ್ಪಡುವ ಯಾವ ಕರ್ಮವೂ ಎಂದೂ ಬಂಧಕವಾಗಲಾರದು. ಇಂಥ ದೃಷ್ಟಿ ಇಲ್ಲವಾದಾಗ ಯಾವ ಕರ್ಮವೂ ತಾರಕವೂ ಆಗಲಾರದು. ಆದ್ದರಿಂದ ವಿಹಿತ ಕರ್ಮಗಳನ್ನೆಲ್ಲ ವಿಷ್ಣು ಪ್ರೀತಿಯನ್ನು ಉದ್ದೇಶಿಸಿ ತಪ್ಪದೆ ಆಚರಿಸಲೇಬೇಕು ಎಂದು ಭಾವ.

ವೈದಿಕವಾಙ್ಮಯದಲ್ಲಿ ಯಜ್ಞದ ಬಗ್ಗೆ ಸಾಕಷ್ಟು ವಿವರಗಳಿದ್ದರೂ ಅದರ ಹಿನ್ನೆಲೆಯನ್ನು ಪರಿಣಾಮಕಾರಿಯಾಗಿ ಹೀಗೆ ನಿರೂಪಿಸಿದ ಯಶಸ್ಸು ಮಾತ್ರ ಭಗವದ್ಗೀತೆಯದೇ ಆಗಿದೆ.

*****

## ಯಜ್ಞದ ಪರಿಕಲ್ಪನೆ ಮತ್ತು ಅದರ ಮಹತ್ವ

ಒಂದು ಕರ್ಮವು ಹೀಗೆ ಯಜ್ಞವಾದಾಗಲೇ ಅದು ತಾರಕವಾಗುವುದು ಎಂದು ಹೇಳಿದ ಭಗವಂತನು ಯಜ್ಞದ ಮಹತ್ವವನ್ನು ಮತ್ತೊಂದು ರೀತಿಯಲ್ಲೂ ಸ್ಫುಟಪಡಿಸುವನು. ಆದಿಯಲ್ಲಿ ಭಗವಂತ ಬ್ರಹ್ಮನನ್ನು ಸೃಷ್ಟಿಸಿದ. ಬ್ರಹ್ಮನು ಪ್ರಜೆಗಳನ್ನು ಸೃಷ್ಟಿಸಿದ. ಜೊತೆಗೆ ಯಜ್ಞವನ್ನೂ ಸೃಷ್ಟಿಸಿದ. ತಾನು ಸೃಷ್ಟಿಸಿದ ಪ್ರಜೆಗಳಿಗೆ ಅಪ್ಪಣೆ ಮಾಡಿದ.[೧] ''ಇನ್ನು ಮುಂದೆ ನೀವು ಉನ್ನತಿಯನ್ನು ಸಾಧಿಸಬೇಕಾದದ್ದು ಈ ಯಜ್ಞದಿಂದ; ಇದು ನಿಮ್ಮ ಪಾಲಿಗೆ ಬಯಸಿದ್ದನ್ನೆಲ್ಲ ಕೊಡುವ ಕಾಮಧೇನು. ಇದರಿಂದ ನೀವು ದೇವತೆಗಳನ್ನು ಆರಾಧಿಸಿರಿ. ಸಂತುಷ್ಟರಾಗುವ ದೇವತೆಗಳು ನಿಮಗೆ ಬೇಡಿದ್ದನ್ನೆಲ್ಲಾ ನೀಡಿ ಅನುಗ್ರಹಿಸುವರು.

ಅವರು ನೀಡಿದ ಭೋಗಗಳನ್ನು ಯೋಗ್ಯರೀತಿಯಲ್ಲಿ ಅವರಿಗೆ ಸಮರ್ಪಿಸುವುದೇ ಯಜ್ಞ. ಹಾಗೆ ಮಾಡದೆ, ಸುಮ್ಮನೆ ತಿನ್ನುತ್ತಾ ಹೋಗುವುದು ಮಾತ್ರ ನಿಜವಾದ ಅರ್ಥದಲ್ಲಿ ಕಳ್ಳತನವೇ ಆಗುವುದು. ದೇವತೆಗಳಿಗೆ ಕೊಟ್ಟು ಮಿಕ್ಕಿದ್ದನ್ನು ತಿನ್ನುವುದು

---

೧. ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ।
ಅನೇನ ಪ್ರಸವಿಷ್ಯಧ್ವಮೇಷ ವೋಽಸ್ತ್ವಿಷ್ಟಕಾಮಧುಕ್ ॥
ದೇವಾನ್ ಭಾವಯತಾನೇನ ತೇ ದೇವಾ ಭಾವಯಂತು ವಃ।
ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ ॥ – ಗೀತಾ(೩/೧೦,೧೧)

ಅಮೃತಭೋಜನವೇ ಸರಿ. ಅದರಲ್ಲಿ ಭೋಗದ ಆನಂದವಿದೆ. ಪಾಪದ ಭೀತಿ ಮಾತ್ರ ಇರುವುದೇ ಇಲ್ಲ. ಹಾಗೆ ಮಾಡದೆ ತನಗೆಂದು ಮಾತ್ರ ಅನ್ನ ಬೇಯಿಸಿಕೊಳ್ಳುವವನು ತಿನ್ನುವುದು ಪಾಪದ ರಾಶಿಯನ್ನೇ ಹೊರತು ಅನ್ನವನ್ನಲ್ಲ".

ಮಾನವನ ಸುಖಜೀವನಕ್ಕೆ ಶಾಸ್ತ್ರಗಳು ಸಾರಿರುವ ಪರಮೋಪಾಯಗಳಲ್ಲಿ ಈ ಯಜ್ಞಕ್ಕೆ ತುಂಬ ವಿಶಿಷ್ಟವಾದ ಸ್ಥಾನವಿದೆ. ವೈದಿಕ ವಾಙ್ಮಯದಲ್ಲಿ ಮನುಷ್ಯನ ಅಪೂರ್ವ ಶ್ರೇಯಸ್ಸಾಧನವೆಂದು ಬಹು ಬಗೆಯಲ್ಲಿ ಪ್ರತಿಪಾದಿಸಲ್ಪಟ್ಟಿರುವ ಯಜ್ಞವು ಹೇಗೆ ಅಗತ್ಯ ಕರ್ಮವಾಗಿದೆ, ಎಂಬುದರ ಹಿನ್ನೆಲೆಯನ್ನು ತಿಳಿಸುವ ಭಗವದ್ಗೀತೆಯು ಅದನ್ನು ತೊರೆದಲ್ಲಿ ಆಗುವ ಅನರ್ಥವನ್ನೂ ಸಾರಿದೆ.

ಇಂತಹ ಯಜ್ಞವು ಅಶ್ವಮೇಧ, ರಾಜಸೂಯ, ಜ್ಯೋತಿಷ್ಟೋಮ ಮೊದಲಾಗಿ ಒಂದುರೀತಿಯದಾದರೆ ಪ್ರತಿನಿತ್ಯ ಗೃಹಸ್ಥ, ವಾನಪ್ರಸ್ಥರು ತಪ್ಪದೆ ಆಚರಿಸಬೇಕಾದ ದೇವಯಜ್ಞ, ಋಷಿಯಜ್ಞ, ಪಿತೃಯಜ್ಞ, ಭೂತಯಜ್ಞ ಮತ್ತು ಮನುಷ್ಯಯಜ್ಞ ಎಂಬುದಾಗಿ ಮತ್ತೊಂದು ರೀತಿಯಲ್ಲಿ ಐದುತೆರನಾಗಿದೆ, ಈ ಎರಡನೆ ತೆರನಾದ ಯಜ್ಞಗಳು ಪಂಚಮಹಾಯಜ್ಞಗಳು ಎಂದೇ ಪ್ರಸಿದ್ಧವಾಗಿವೆ. ವೈಶ್ವದೇವದ ಮೂಲಕ ದೇವತಾರಾಧನೆ, ಬ್ರಹ್ಮಯಜ್ಞ ಮತ್ತು ತರ್ಪಣಗಳ ಮೂಲಕ ಋಷಿಗಳ ಆರಾಧನೆ, ಶ್ರಾದ್ಧ-ತರ್ಪಣಗಳ ಮೂಲಕ ಪಿತೃಗಳ ಆರಾಧನೆ, ಬಲಿಹರಣದ ಮೂಲಕ ಪ್ರಾಣಿಗಳ ಆರಾಧನೆ, ಅತಿಥಿಪೂಜೆಯ ಮೂಲಕ ಮಾನವರ ಆರಾಧನೆ  ಇವೇ ಈ ಪಂಚ ಮಹಾಯಜ್ಞಗಳಾಗಿವೆ

ಈ ಎರಡು ತೆರನಾದ ಯಜ್ಞಗಳಿಗಿಂತ ಬೇರೆಯದಾದ ಇನ್ನೂ ವ್ಯಾಪಕವಾದ ಯಜ್ಞವು ಮೇಲೆ ಹೇಳಿದ ಭಗವತ್ಪೂಜಾರೂಪವಾದ ಕರ್ತವ್ಯಪಾಲನೆಯೇ ಆಗಿದೆ.

ರಾಜಕೀಯಪರಿಭಾಷೆಯ ತೆರಿಗೆಯು ಆಧ್ಯಾತ್ಮಿಕ ಪ್ರಪಂಚದಲ್ಲಿ ಈ ಯಜ್ಞವಾಗಿದೆ. ಸರಕಾರಕ್ಕೆ ತೆರಿಗೆ ಸಲ್ಲಿಸುವಂತೆ, ದೇವತೆಗಳಿಗೆ ಯಜ್ಞದ ಮೂಲಕ ಪೂಜೆ ಸಲ್ಲಿಸಬೇಕು. ಯಜ್ಞವನ್ನು ತೊರೆಯುವುದು ಆಧ್ಯಾತ್ಮಿಕ ರೀತಿಯಲ್ಲಿ ತೆರಿಗೆಗಳ್ಳತನವೇ ಸರಿ.[೧] ತೆರಿಗೆ ಸಲ್ಲಿಸದ ಹಣವು ಕಪ್ಪುಹಣ ಎನ್ನಿಸುವಂತೆ ಯಜ್ಞವನ್ನು ತೊರೆದ ಜೀವನವು ಆಧ್ಯಾತ್ಮಿಕವಾಗಿ ಕಪ್ಪು ಜೀವನವೇ ಸರಿ.

ಸರಕಾರವು ಒದಗಿಸುವ ರಕ್ಷಣೆ ಅನುಕೂಲತೆ ಮೊದಲಾದವುಗಳಿಗೋಸ್ಕರ ತೆರಿಗೆಯು ಅಗತ್ಯವಾದರೆ ದೇವತೆಗಳು ನೀಡುವ ಮಳೆ, ಬೆಳೆ, ಗಾಳಿ, ಬೆಳಕು ಮೊದಲಾದವುಗಳಿಗಾಗಿ ಸಲ್ಲಿಸಬೇಕಾದ ಕರ್ತವ್ಯವೇ ಯಜ್ಞವಾಗಿದೆ.

---

೧. ತೈರ್ದತ್ತಾನಪ್ರದಾಯೈಭ್ಯೋ ಯೋ ಭುಂಕ್ತೇ ಸ್ತೇನ ಏವ ಸಃ ।
ಯಜ್ಞಶಿಷ್ಟಾಶಿನಃ ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ ।
ಭುಂಜತೇ ತೇ ತ್ವಘಂ ಪಾಪಾ ಯೇ ಪಚಂತ್ಯಾತ್ಮಕಾರಣಾತ್ । – ಗೀತಾ (೩/೧೨,೧೩)

ಗಾಳಿ ಬೆಳಕು ಮೊದಲಾದವುಗಳೆಲ್ಲ ಮನುಷ್ಯನ ಹತೋಟಿಯಲ್ಲಿದೆ ಎಂಬ ಮಾತು ಕಾಲಕಾಲಕ್ಕೆ ಒದಗುವ ಅತಿವೃಷ್ಟಿ ಅನಾವೃಷ್ಟಿ ಕ್ಷಾಮ-ಡಾಮರಗಳು ಮೊದಲಾದವು-ಗಳಿಂದಾಗಿ ಎಷ್ಟು ಪೊಳ್ಳು ಎಂದು ಚಿಂತನಶೀಲರಿಗೆಲ್ಲ ವೇದ್ಯವೇ ಆಗಿದೆ. ಇಂದಿನ ಯಾವ ಸಾಧನೆಗೂ ಪ್ರಕೃತಿಯ ನಿಯಂತ್ರಣ ಸಾಧ್ಯವಾಗಿಲ್ಲ[೧] ಎಂಬುದನ್ನು ಗಮನಿಸಬೇಕು.

ವಿಜ್ಞಾನ, ತಂತ್ರಜ್ಞಾನಗಳು ಇಷ್ಟು ಮುಂದುವರೆದಿರುವ ಈಗಿನ ಕಾಲದಲ್ಲೂ ಇವುಗಳು ಯಾವ ರೀತಿಯಲ್ಲೂ ಮನುಷ್ಯನ ನಿಯಂತ್ರಣಕ್ಕೆ ಸಿಲುಕಿಲ್ಲ ಎನ್ನುವುದು ದೇವರು ಮೊದಲಾದ ಅತೀಂದ್ರಿಯ ಪದಾರ್ಥಗಳನ್ನು ಅಂಗೀಕರಿಸುವಂತೆ ಮಾಡುವ ಒಂದು ಮೂಲಭೂತ ಪುರಾವೆಯಾಗಿದೆ.

ಅಂತಹ ದೈವೀಶಕ್ತಿಗೆ ತಲೆಬಾಗದೆ ಯಜ್ಞಯಾಗಾದಿಗಳನ್ನು ತೊರೆದು ಬದುಕುವುದು ನಿಜವಾದ ಅರ್ಥದಲ್ಲಿ ಕೃತಘ್ನತೆಯೇ ಸರಿ. ಅಂತಹ ಕೃತಘ್ನತೆಯನ್ನೇ ಭಗವಂತನು ಇಲ್ಲಿ ಕಳ್ಳತನ, ಪಾಪ ತಿನ್ನುವ ಕಾರ್ಯ ಎಂಬುದಾಗಿ ಕಟುವಾಗಿ ಟೀಕಿಸಿದ್ದಾನೆ.

*****

ಭಾರತೀಯ ತತ್ತ್ವಜ್ಞಾನದ ಇತಿಹಾಸದಲ್ಲಿ ಯಜ್ಞದ ಮಹತ್ವವನ್ನು ಗುರುತಿಸಿದರೂ, ಅದರ ಬಾಹ್ಯರೂಪವನ್ನು ಮಾತ್ರ ಉಳಿಸಿಕೊಂಡವರು ಮೀಮಾಂಸಕರು; ಯಜ್ಞವು ಮೂಲತಃ ಭಗವತ್ಪೂಜೆ ಎಂಬ ಯಜ್ಞದ ಹೃದಯವನ್ನೇ ಮರೆತದ್ದು ಅವರ ದುರಂತ. ಅವರ ಯಜ್ಞದ ಕಲ್ಪನೆಯಲ್ಲಿ ಅಗ್ನಿ ಮತ್ತು ತುಪ್ಪಗಳು ಉಳಿದುಕೊಂಡರೂ ತತ್ತ್ವಜ್ಞಾನ ಮತ್ತು ಸಮರ್ಪಣ ಭಾವಗಳು ಹೆಸರಿಗೂ ಇಲ್ಲದಂತೆ ಮರೆಯಾದವು. ಜೀವನವೇ ಒಂದು ಯಜ್ಞ ಎಂಬ ಭಗವದ್ಗೀತೆಯ ಉದಾತ್ತ ಆದರ್ಶಕ್ಕೆ ಹತ್ತಿರವೂ ಸುಳಿಯದ್ದು ಅವರ ಇನ್ನೂ ಹೆಚ್ಚಿನ ವೈಫಲ್ಯ.

*****

## ಜಗಚ್ಚಕ್ರದ ವಿವರ

ಜೀವನದಲ್ಲಿ ಕರ್ಮಾಚರಣೆಯ ಮಹತ್ವವನ್ನು ಜಗಚ್ಚಕ್ರದ ಪರಿಕಲ್ಪನೆಯ ಮೂಲಕ ಭಗವದ್ಗೀತೆಯು ಪ್ರತಿಪಾದಿಸಿರುವುದು. ಯಾವುದೇ ಪ್ರಾಣಿಯ ಬದುಕು ಸಾಧ್ಯ-ವಾಗಿರುವುದು ಅನ್ನದಿಂದ, ಅಂತಹ ಅನ್ನವು ದೊರೆಯಲು ಕಾಲಕಾಲಕ್ಕೆ ಮಳೆಬೆಳೆಗಳನ್ನು ತಂದು ಕೊಡುವ ಮುಖ್ಯ ಸಾಧನಗಳೆಂದರೆ ಯಜ್ಞಯಾಗಗಳೇ ಆಗಿವೆ. ಇಂತಹ ಯಜ್ಞ ಕ್ರಿಯೆಯು ಸಾಧ್ಯವಾಗುವುದು ಪ್ರತಿಯೊಬ್ಬನೂ ತನ್ನ ಪಾಲಿನ ಕರ್ಮವನ್ನು ನಡೆಸಿದಾಗ ಮಾತ್ರ; ಅಸ್ವತಂತ್ರರಾದ ಜನರಿಗೆ ಯಾವುದೇ ಕರ್ಮಾಚರಣೆಯ ಹಿಂದೆಯೂ

---

೧. ಸುನಾಮಿ, ಭೂಕಂಪ, ಮೊದಲಾದವುಗಳು ಮನುಷ್ಯನ ನಿಯಂತ್ರಣಕ್ಕಿರಲಿ, ಮನುಷ್ಯನ ಅರಿವಿಗೂ ಸಹ ನಿಲುಕದ ಪ್ರಾಕೃತಿಕ ಘಟನೆಗಳಾಗಿವೆ ಎಂಬುದು ಎಲ್ಲರಿಗೂ ವೇದ್ಯವಾಗಿರುವ ಸಂಗತಿ.

ಸ್ವತಂತ್ರನಾದ ಭಗವಂತನ ಅನುಗ್ರಹವು ಅತ್ಯವಶ್ಯ. ಅಂತಹ ಭಗವಂತನನ್ನು ತಿಳಿಯಲು ಅತ್ಯಂತ ಪ್ರಮುಖ ಸಾಧನವೆಂಬುದು ವೇದಾದಿಶಾಸ್ತ್ರಗಳ ಹಿರಿಮೆ. ಅಂತಹ ಶಾಸ್ತ್ರಗಳನ್ನು ಯಥೋಚಿತವಾದ ಅಧ್ಯಯನ ಮತ್ತು ಅಧ್ಯಾಪನಗಳಿಂದ ಉಳಿಸಿಕೊಳ್ಳಬೇಕಾದ ಹೊಣೆ ಪ್ರತಿಯೊಬ್ಬ ಮಾನವನಿಗೂ ಸದಾ ಇದೆ; ಹೀಗೆ ಜಗತ್ತಿನ ಉಳಿವಿಗೆ ಕಾರಣವಾದ ಒಂದು ಸರಪಳಿಯೇ ಇದೆ. ಇದನ್ನೇ ಭಗವದ್ಗೀತೆಯು [೧]ಜಗಚ್ಚಕ್ರವೆಂದು ಕರೆದಿದೆ.

"ಅನ್ನದಿಂದ ಪ್ರಾಣಿಗಳು, ಮಳೆಯಿಂದ ಅನ್ನ, ಯಜ್ಞದಿಂದ ಮಳೆ, ಕರ್ಮದಿಂದ ಯಜ್ಞ, ಭಗವಂತನಿಂದ ಕರ್ಮ, ಶಾಸ್ತ್ರಗಳಿಂದ ಭಗವಂತ, ಮಾನವನಿಂದ ಶಾಸ್ತ್ರಗಳ ಅಧ್ಯಯನ, ಅಂತಹ ಮಾನವನ ಬದುಕಿಗೆ ಪುನಃ ಅನ್ನ" ಎಂಬುದು ಈ ಜಗಚ್ಚಕ್ರದ ಸ್ಥೂಲರೂಪ.

ಇದರಲ್ಲಿ ಭಗವಂತನೂ ಒಬ್ಬನು. ಆದರೆ ಆ ಒಬ್ಬನ ಅಧೀನದಲ್ಲೇ ಉಳಿದೆಲ್ಲವೂ ಇವೆ. ಅವುಗಳಲ್ಲಿದ್ದು ಜಗಚ್ಚಕ್ರವನ್ನು ನಡೆಸುವವನು ಸಹ ಪುನಃ ಭಗವಂತನೇ ಆಗಿರುವನು. ಯಜ್ಞವೇ ಅವನ ಆರಾಧನೆಗೆ ವಿಹಿತವಾದ ಪ್ರಮುಖ ಸಾಧನ. ಅಂತಹ ಯಜ್ಞವು ಸಾಧ್ಯವಾಗುವುದು ಸ್ವವಿಹಿತ ಕರ್ಮಾಚರಣೆಯಿಂದ ಮಾತ್ರ. ಆದ್ದರಿಂದ ಕರ್ಮವನ್ನು ತೊರೆಯುವುದು ಎಂದರೆ ಯಜ್ಞದ ನಾಶವೇ ಸರಿ, ಅದರಿಂದ ಮಳೆಬೆಳೆಗಳೂ, ಅನ್ನವೂ ನಾಶವಾಗಿ ಸಮಸ್ತ ಪ್ರಾಣಿಗಳೂ ಇಲ್ಲವಾಗುತ್ತವೆ. ಜಗಚ್ಚಕ್ರ ನಿಂತುಹೋಗುತ್ತದೆ. ಆದ್ದರಿಂದ ತನ್ನ ಪಾಲಿನ ವಿಹಿತಕರ್ಮವನ್ನು ತೊರೆಯುವವನು ಜಗಚ್ಚಕ್ರವನ್ನೇ ನಿಲ್ಲಿಸಿಬಿಡುವ ಮಹಾಪಾತಕಿಯಾಗುವನು.[೨]

ಅವನ ಬದುಕಿನುದ್ದಕ್ಕೂ ಬೆಳೆಯುತ್ತಾ ಹೋಗುವುದು ಪಾಪಗಳ ರಾಶಿ ಮಾತ್ರ. ಇಂದ್ರಿಯಲೋಲುಪನಾಗಿ ಬದುಕುವ ಅಂಥವನ ಜೀವನ ನಿಜವಾದ ಅರ್ಥದಲ್ಲಿ ವ್ಯರ್ಥವೇ ಸರಿ. ಆದ್ದರಿಂದ ಕರ್ಮದ ವಿನಾಯತಿಯು ಈ ಜಗತ್ತಿನಲ್ಲಿ ಯಾರಿಗೂ ಇಲ್ಲ ಎಂದು ಭಾವ.

*****

## ಕರ್ಮದ ವಿನಾಯತಿ

ಇಂತಹ ಕರ್ತವ್ಯಕರ್ಮದಿಂದ ವಿನಾಯತಿ ಉಂಟೇ? ಉಂಟು; ಆದರೆ ಅದು ಎಲ್ಲರಿಗೂ ಅಲ್ಲ, ಅಜ್ಞಾನಿಗಳಿಗಂತೂ ಅಲ್ಲವೇ ಅಲ್ಲ; ಜ್ಞಾನಿಗೂ ವಿನಾಯತಿ ಇಲ್ಲ.

---

೧. ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನಸಂಭವಃ ।
ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ।
ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರಸಮುದ್ಭವಮ್ ।
ತಸ್ಮಾತ್ ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಮ್ । –ಗೀತಾ (೩/೧೪,೧೫)

೨. ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ ।
ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ ॥ – ಗೀತಾ(೩/ ೧೬)

ಆದರೆ ಸ್ಥಿತಪ್ರಜ್ಞನಾದವನು ಅಸಂಪ್ರಜ್ಞಾತಸಮಾಧಿಸ್ಥಿತಿಯಲ್ಲಿ ನಿರತನಾಗಿ ಭಗವಂತನನ್ನು ಸಾಕ್ಷಾತ್ತಾಗಿ ಕಾಣುತ್ತಾ ಆನಂದ ಸಮುದ್ರದಲ್ಲಿ ಮುಳುಗಿರುತ್ತಾನೆ. ಪೂರ್ಣ ಸಂತೃಪ್ತಿಯನ್ನು ಗಳಿಸಿರುತ್ತಾನೆ. ಬಾಹ್ಯಜಗತ್ತಿನ ಪರಿವೆಯೇ ಅವನಿಗಿರುವುದಿಲ್ಲ. ಅಂತಹವನಿಗೆ ಮಾತ್ರ ಕರ್ಮದಿಂದ ವಿನಾಯತಿ ಉಂಟು.[೧] ಪರೀಕ್ಷೆಯಲ್ಲಿ ಬರೆಯುವಾಗ ವಿದ್ಯಾರ್ಥಿಗೆ ಓದಿನಿಂದ ಪೂರ್ಣ ವಿನಾಯತಿ ದೊರೆಯುವಂತೆ.

ಆದರೆ ಇಂತಹ ವಿನಾಯತಿಯು ಅವನಿಗಿರುವುದು ಅಂತಹ ಸಮಾಧಿ ಸ್ಥಿತಿಯು ಮುಗಿಯುವವರೆಗೆ ಮಾತ್ರ. ಅದು ಮುಗಿದು ಪುನಃ ಬಹಿರ್ಮುಖನಾಗುತ್ತಲೇ ಅವನ ವರ್ಣ, ಆಶ್ರಮ ಮೊದಲಾದವುಗಳಿಗೆ ವಿಹಿತವಾದ ಕರ್ಮವು ಪುನಃ ಕಡ್ಡಾಯವೇ ಆಗುತ್ತದೆ. ಆದ್ದರಿಂದ ಎಂದಿನಂತೆ ಅವನು ಪುನಃ ಕರ್ತವ್ಯ ಪರಾಯಣನಾಗಲೇಬೇಕು.

*****

## ಜ್ಞಾನಿಗೇಕೆ ಕರ್ಮ?

ಆತ್ಮೋನ್ನತಿಗೆ ಪರಮ ಸಾಧನವಾದ ತತ್ತ್ವಜ್ಞಾನವನ್ನು ಸಂಪಾದಿಸಲು ಕರ್ಮವು ಅತ್ಯಗತ್ಯವಾದ್ದರಿಂದ, ಜ್ಞಾನವನ್ನು ಪಡೆಯದ ಜನರು ಅದಕ್ಕೋಸ್ಕರ ಕರ್ಮವನ್ನು ಆಚರಿಸಲೇಬೇಕು ಎಂಬುದನ್ನು ಒಪ್ಪಬಹುದು. ಎಂದರೆ ಜಿಜ್ಞಾಸುವಿಗೆ ಕರ್ಮವು ಅನಿವಾರ್ಯ ಎಂದಾಯಿತು. ಆದರೆ ಜ್ಞಾನವನ್ನು ಸಾಧಿಸಿದ ಸ್ಥಿತಪ್ರಜ್ಞನಿಗೇಕೆ ಕರ್ಮಾಚರಣೆಯ ನಿರ್ಬಂಧ? ಅವನು ಆಗಲೇ ಜ್ಞಾನವನ್ನು ಸಂಪಾದಿಸಿ ಆಗಿದೆ. ಆದ್ದರಿಂದ ಅವನಿಗೆ ಮೋಕ್ಷ ಖಚಿತವೂ ಆಗಿದೆ, ಅವನಿಗೇಕೆ ಕರ್ಮವು ಕಡ್ಡಾಯ? ಈ ಮಹತ್ವದ ಪ್ರಶ್ನೆಯನ್ನು ಭಗವಂತನು ಜನಕಾದಿಗಳ ದೃಷ್ಟಾಂತವನಿತ್ತು ಪರಿಹರಿಸಿರುವನು.

ಜನಕಾದಿಗಳು ಬ್ರಹ್ಮ ಸಾಕ್ಷಾತ್ಕಾರ ಪಡೆದ ಜ್ಞಾನಿಗಳೇ ಆದರೂ ಅವರು ತಮ್ಮ ಪಾಲಿನ ಕರ್ತವ್ಯವನ್ನು ತೊರೆದವರಲ್ಲ, ಬದಲಾಗಿ ತುಂಬುಶ್ರದ್ಧೆಯಿಂದ ಅದನ್ನು ಆಚರಿಸಿದವರೇ ಆಗಿರುವರು.[೨] ಜಿಜ್ಞಾಸುಗಳ ಪಾಲಿಗೆ ಕರ್ಮವು ಜ್ಞಾನಸಾಧನವಾದರೆ ಜ್ಞಾನಿಗಳ ಪಾಲಿಗೆ ಮೋಕ್ಷದಲ್ಲಿ ಆನಂದಾತಿಶಯಕ್ಕೆ ಕಾರಣವಾಗುವುದು.

ಪಾಸಾಗುವುದು ಖಚಿತವಾದರೂ ಸಹ ಬುದ್ಧಿವಂತ ವಿದ್ಯಾರ್ಥಿಯು ಬರೆಯುವುದು ಮತ್ತೂ ಹೆಚ್ಚಿನ ಅಂಕಗಳನ್ನು ಗಳಿಸಲೆಂದೇ ಅಲ್ಲವೇ. ಉತ್ತಮ ವಿದ್ಯಾರ್ಹತೆಯನ್ನು ಪಡೆದು ಉದ್ಯೋಗವನ್ನು ಸಂಪಾದಿಸಿದವನೂ ಸಹ ತನ್ನ ವಿಭಾಗಕ್ಕೆ ಸಂಬಂಧಿಸಿದ ಮತ್ತೂ

---

೧. ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚ ಮಾನವಃ।
ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ ॥ - ಗೀತಾ(೩/ ೧೭ )

೨. ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ। - ಗೀತಾ(೩/೨೦)

ಕೆಲವು ಪರೀಕ್ಷೆಗಳಲ್ಲಿ ಉತ್ತೀರ್ಣನಾಗಲು ಯತ್ನಿಸುವುದು ಹೆಚ್ಚಿನ ಬಡ್ತಿ ಮೊದಲಾದವುಗಳನ್ನು ಸಂಪಾದಿಸಲೆಂದು ಹೇಗೋ, ಹಾಗೆ.

ಹೀಗೆ ಜ್ಞಾನಿಗಳ ಕರ್ಮಾಚರಣೆಯ ಹಿಂದಿನ ರಹಸ್ಯವನ್ನು ಶ್ರೀಮನ್ಮಧ್ವಾಚಾರ್ಯರು ಮಾತ್ರವೇ ತೋರಿಸಿಕೊಟ್ಟವರು ಎಂಬುದನ್ನು ಗಮನಿಸಬೇಕು. ಬೇರಾವ ದರ್ಶನದಲ್ಲೂ ಸಹ ಇಷ್ಟು ಸಮರ್ಪಕ ಉತ್ತರ ಈ ಸಮಸ್ಯೆಗೆ ದೊರೆಯುವುದಿಲ್ಲ.

*****

## ಜ್ಞಾನಿ ಮತ್ತು ಅಜ್ಞಾನಿಗಳ ಕರ್ಮದ ಅಂತರ

ಅಜ್ಞಾನಿಯಂತೆ ಜ್ಞಾನಿಗಳೂ ಕರ್ಮವನ್ನು ಆಚರಿಸುವುದಾದಲ್ಲಿ ಅವರಿಬ್ಬರಲ್ಲಿನ ವ್ಯತ್ಯಾಸವೇನು? ಮೇಲ್ನೋಟಕ್ಕೆ ಅವರಿಬ್ಬರ ಕರ್ಮಗಳು ಒಂದೇ ತೆರನಾಗಿ ಕಂಡರೂ ಅಜ್ಞಾನಿಗಳ ಕರ್ಮದಲ್ಲಿ ಫಲಾಶೆಯ ಸೋಂಕು ತುಂಬಿರುತ್ತದೆ. ಅದರೊಂದಿಗೆ ಅಹಂಕಾರ ಮಮಕಾರಗಳೂ ಮನೆ ಮಾಡಿಕೊಂಡಿರುವುವು.

ಆದರೆ ಜ್ಞಾನಿಗಳ ಕರ್ಮಗಳ ಹಿಂದೆ ಇಂತಹ ದೋಷಗಳಿಗೆ ಅವಕಾಶವೇ ಇರುವುದಿಲ್ಲ. ಭಗವನ್ನಿಷ್ಠೆ ಮತ್ತು ತ್ಯಾಗಬುದ್ಧಿಗಳು ಅವರಲ್ಲಿ ತುಂಬಿರುತ್ತವೆ.[೧] ಗಾಜು ಮತ್ತು ವಜ್ರಗಳು ಮೇಲ್ನೋಟಕ್ಕೆ ಒಂದೇ ತೆರನಾಗಿ ಕಂಡರೂ ಅವುಗಳ ಮೌಲ್ಯದಲ್ಲಿ ಅಪಾರ ವ್ಯತ್ಯಾಸವಿರುವಂತೆ ಅವರಿಬ್ಬರ ಕರ್ಮಗಳಿಗೆ ಹೀಗೆ ಮೌಲಿಕವಾದ ಅಂತರ ಇದ್ದೇ ಇರುವುದು[೨].

*****

## ಲೋಕ ಸಂಗ್ರಹ

ಜನಸಾಮಾನ್ಯರಿಗೆ ತಮ್ಮ ತಮ್ಮ ಕರ್ತವ್ಯ ಕರ್ಮಗಳಲ್ಲಿ ಆಸಕ್ತಿ ಹುಟ್ಟಿಸಬೇಕೆಂಬ ಮತ್ತೊಂದು ಉದಾತ್ತ ಧ್ಯೇಯವೂ ಸಹ ಜ್ಞಾನಿಯ ಕರ್ಮಾಚರಣೆಯ ಇನ್ನೊಂದು ಮುಖ ಎಂಬುದನ್ನು ಭಗವಂತನು ಪ್ರತಿಪಾದಿಸಿರುವನು.

ಸ್ವಂತವಿಚಾರವನ್ನು ಮಾಡಲು ಸಾಮರ್ಥ್ಯವನ್ನು ಹೊಂದಿರದ ಸಾಮಾನ್ಯ ಜನರು ತಿಳಿದು ಮಾಡುವುದಕ್ಕಿಂತ ನೋಡಿ ಮಾಡುವುದೇ ಹೆಚ್ಚು. ಅದರಲ್ಲೂ ಸಮಾಜದಲ್ಲಿ ತಿಳಿದವರು ಎನ್ನಿಸಿಕೊಂಡ ಜನರ ನಡತೆ ಅವರ ಪಾಲಿಗೆ ದೊಡ್ಡ ಆದರ್ಶವಾಗಿರುತ್ತದೆ.

---

೧. ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ ಕುರ್ವಂತಿ ಭಾರತ।
ಕುರ್ಯಾದ್ವಿದ್ವಾಂಸ್ತಥಾಽಸಕ್ತಶ್ಚಿಕೀರ್ಷುರ್ಲೋಕಸಂಗ್ರಹಮ್ ॥ -ಗೀತಾ(೩/೨೫)

೨. ಕೆಲವರು ಜ್ಞಾನ ಪ್ರಾಪ್ತಿಯೆಂದರೆ ಕರ್ಮಕ್ಕೆ ವಿನಾಯಿತಿ ಎಂದು ಭಾವಿಸಿರುವುದು ಉಂಟು ಅದು ಸರಿಯಲ್ಲ. ಜ್ಞಾನ ಪ್ರಾಪ್ತಿಯ ಬಳಿಕವೇ ಕರ್ಮದ ಪರಿಪೂರ್ಣ ರೀತಿ ಆಚರಣೆ ಸಾಧ್ಯವಾಗಿ ಅದು ಯೋಗವೆನ್ನಿಸುವುದು ಎಂಬ ವಿವರ ಗೀತೆಯಲ್ಲಿ ಅನೇಕ ಬಾರಿ ನಿರೂಪಿತವಾಗಿದೆ.

ಅಂತಹವರು ನಡೆದಂತೆ ನಡೆಯುವುದರಲ್ಲೇ ತಮ್ಮ ಶ್ರೇಯಸ್ಸು ಅಡಗಿದೆ ಎಂಬ ಖಚಿತ ವಿಚಾರ ಅವರದು.

ಅಂತಹ ಜನರನ್ನು ಸನ್ಮಾರ್ಗದಲ್ಲಿ ತೊಡಗಿಸಬೇಕೆಂಬ ಹೊಣೆಗಾರಿಕೆಯ ಬುದ್ಧಿಯಿಂದಲೂ ಸಹ ಜ್ಞಾನಿಯಾದವನು ಕರ್ಮವನ್ನು ತಪ್ಪದೇ ಆಚರಿಸಲೇಬೇಕಾಗುತ್ತದೆ.[೧] ಇಲ್ಲವಾದಲ್ಲಿ ಅವರೆಲ್ಲ ಅವನಲ್ಲಿಯ ಜ್ಞಾನದ ಅಂಶವನ್ನು ಮರೆತು ನಡತೆಯನ್ನು ಮಾತ್ರ ಗಮನಿಸಿ ತಾವೂ ಕರ್ತವ್ಯವನ್ನು ತೊರೆಯುವ ಅಪಾಯವಿದೆ. ಉನ್ನತ ಸ್ಥಾನಮಾನಗಳ ಜನಗಳ ನಡತೆಯೂ ಸಹ ಉನ್ನತವಾಗಿರುತ್ತದೆ ಎಂಬ ಖಚಿತ ವಿಶ್ವಾಸ ಅವರದು.[೨] ಮಠಾಧೀಶನೇ ಏಕಾದಶೀವ್ರತ ಮೊದಲಾದವುಗಳನ್ನು ತೊರೆದಲ್ಲಿ ಇತರರಿಂದ ಅವುಗಳನ್ನು ನಿರೀಕ್ಷಿಸಲು ಹೇಗೆ ಸಾಧ್ಯ?

ಸಾಮಾನ್ಯರನ್ನು ಸನ್ಮಾರ್ಗದಲ್ಲಿ ತೊಡಗಿಸುವ ಇಂತಹ ಲೋಕಸಂಗ್ರಹಕ್ಕೆ ಭಗವಂತನು ತನ್ನನ್ನೇ ದೃಷ್ಟಾಂತವನ್ನಾಗಿ ಇತ್ತಿರುವನು. "ಅವನಿಗೆ ಆಗಬೇಕಾದ್ದು ಯಾವುದೂ ಇಲ್ಲ; ಆಗದಿರುವುದೂ ಯಾವುದೂ ಇಲ್ಲ; ಅವನು ಸದಾ ಪರಿಪೂರ್ಣ; ಆಪ್ತಕಾಮ. ಆದರೂ ತಾನು ಕಾಲಕಾಲಕ್ಕೆ ಯಥೋಚಿತವಾದ ಕರ್ಮಗಳನ್ನು ತನ್ನ ಎಲ್ಲ ಅವತಾರಗಳಲ್ಲೂ ಮಾಡುತ್ತಲೇ ಇರುವನು ಎಂಬುದನ್ನು ಗಮನಿಸಬೇಕು.

ಹಿರಿಯರು ಸರಿಯಾಗಿ ನಡೆದಾಗಲೂ ತಪ್ಪು ದಾರಿಯನ್ನೇ ತುಳಿಯುವ ಜನರಿರುವಾಗ ಹಿರಿಯರೇ ದಾರಿತಪ್ಪಿದಲ್ಲಿ ಆಗುವ ಪರಿಣಾಮವನ್ನು ಊಹಿಸಲೂ ಅಸಾಧ್ಯ; ಅಲ್ಲವೇ?

*****

## ದುಷ್ಕರ್ಮವು ಯಜ್ಞವಾಗದು

ಸತ್ಕರ್ಮವು ತ್ಯಾಗ ಮತ್ತು ಭಗವದರ್ಪಣ ಬುದ್ಧಿಗಳಿಂದ ಆಚರಿಸಲ್ಪಟ್ಟಾಗ ಯಜ್ಞವಾಗುವಂತೆ ಅದೇ ರೀತಿ ಆಚರಿಸಿದಾಗ ದುಷ್ಕರ್ಮಗಳೂ ಯಜ್ಞವಾಗಬಲ್ಲುದೇ ಎಂಬುದು ಇಲ್ಲಿ ಉದ್ಭವಿಸಬಹುದಾದ ಮಹತ್ವದ ಪ್ರಶ್ನೆಗಳಲ್ಲೊಂದಾಗಿದೆ;ಆಗಲಾರದು ಎನ್ನುತ್ತದೆ ಭಗವದ್ಗೀತೆ.

ದುಷ್ಕರ್ಮಗಳಿಗೆ ಯಜ್ಞವಾಗುವ ಅರ್ಹತೆ ಸರ್ವಥಾ ಇರದು. ಅವುಗಳಲ್ಲಿ ತ್ಯಾಗ ಬುದ್ಧಿ ಮತ್ತು ಸಮರ್ಪಣಭಾವಗಳಿಗೆ ಅವಕಾಶವೇ ಇರುವುದಿಲ್ಲ. ಅದು ಕತ್ತಲೆಯು ಬೆಳಕು ಕೊಡುವುದು ಎಂಬಷ್ಟೇ ಅಸಂಭಾವಿತ. ದುಷ್ಕರ್ಮಗಳ ಮೂಲಭೂತ ಹಿನ್ನೆಲೆ

---

೧. ನ ಬುದ್ಧಿಭೇದಂ ಜನಯೇದಜ್ಞಾನಾಂ ಕರ್ಮಸಂಗಿನಾಮ್ ।
ಜೋಷಯೇತ್ ಸರ್ವಕರ್ಮಾಣಿ ವಿದ್ವಾನ್ ಯುಕ್ತಃ ಸಮಾಚರನ್ ॥ — ಗೀತಾ (೩/ ೨೬)

೨. ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ ।
ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥ —ಗೀತಾ(೩/೨೧)

ರಾಗ ದ್ವೇಷಗಳೇ ಹೊರತು ತ್ಯಾಗ ಮತ್ತು ಭಗವದಾರಾಧನೆಗಳಲ್ಲ. ಅವುಗಳನ್ನು ಯಜ್ಞವಾದೀತು ಎಂದು ವಾದಿಸುವದು ಕಳ್ಳತನ, ದರೋಡೆ ಮತ್ತು ಭ್ರಷ್ಟಾಚಾರಗಳನ್ನು ದೇಶಸೇವೆ, ಸಮಾಜಸೇವೆ ಎಂದು ಕರೆಯುವಷ್ಟೇ ಅಭಾಸವಾಗುತ್ತದೆ.

ಜಗತ್ತಿನಲ್ಲಿ ನಡೆಯುವ ಪ್ರತಿಯೊಂದು ಕಾರ್ಯಕ್ಕೂ ಆಯಾ ಜೀವರ ಸ್ವರೂಪ ಗುಣಗಳು, ಭಗವಂತನ ಸ್ವಾತಂತ್ರ್ಯಾದಿಗುಣಗಳು ಮತ್ತು ಪ್ರಕೃತಿಯ ಸತ್ವ ರಜಸ್ಸು ಮತ್ತು ತಮಸ್ಸು ಎಂಬ ಗುಣಗಳು ಕಾರಣವಾಗಿರುತ್ತವೆ. [೧]ಇವಿಲ್ಲದೆ ಯಾವ ಒಂದು ಕಾರ್ಯವೂ ಎಂದೂ ನಡೆಯಲಾರದು. ಇದನ್ನು ಅರಿಯದ ಅಜ್ಞಾನಿಗಳು ಅಹಂಕಾರದಿಂದ ಮೈಮರೆತು ಎಲ್ಲ ಕಾರ್ಯಕ್ಕೂ ತಾನೇ ಸ್ವತಂತ್ರ ಕರ್ತೃ ಎಂಬ ಭ್ರಮೆಗೆ ಒಳಗಾಗುತ್ತಾರೆ.

ಆದರೆ ಜ್ಞಾನಿಯು ಎಂದೂ ಹಾಗೆ ಭ್ರಮಿಸದೆ ತನ್ನ ಪ್ರತಿಯೊಂದು ಕಾರ್ಯದಲ್ಲೂ ಮೇಲೆ ಹೇಳಿದ ಸತ್ವಾದಿ ಗುಣಗಳ ವ್ಯಾಪಾರವನ್ನು ಕಾಣುವನು. ಮತ್ತು ಅವುಗಳಲ್ಲೂ ಪ್ರಧಾನವಾಗಿ ಭಗವಂತನ ಸ್ವಾತಂತ್ರ್ಯವನ್ನು ಪುನಗಾಣುವನು. ಆದ್ದರಿಂದ ಅವನ ಪಾಲಿಗೆ ಕರ್ಮಾಚರಣೆಯು ತಾರಕವಾದರೆ ಅಜ್ಞಾನಿಯ ಪಾಲಿಗೆ ಅದು ಬಂಧಕವಾಗುವುದು.

ಇಂಥ ಅಜ್ಞಾನಿಗಳಲ್ಲೂ ಎರಡು ವಿಧ. ತಿಳಿಯುವ ಅವಕಾಶವಿಲ್ಲದ ಕಾರಣ ಅಜ್ಞಾನಿಗಳಾಗಿ ಉಳಿಯುವವರು ಒಂದು ಗುಂಪಿನವರು. ಆದರೆ ತಿಳಿಯುವ ಅವಕಾಶವಿದ್ದರೂ ತಮಗೆ ತಿಳಿದಿಲ್ಲ ಎಂಬ ಎಚ್ಚರವೂ ಇಲ್ಲದೆ ತಮಗೆ ಸಮರಿಲ್ಲ ಎಂದು ಬೀಗುವ ಜನ ಮತ್ತೊಂದು ವರ್ಗದವರು.

ಮೊದಲನೆ ವರ್ಗದವರಿಗೆ ಯೋಗ್ಯರೀತಿಯಲ್ಲಿ ಜ್ಞಾನದ ಮಾರ್ಗಕ್ಕೆ ಹಚ್ಚುವ ಹೊಣೆ ತಿಳಿದವರಿಗೆ ಇದ್ದೇ ಇರುತ್ತದೆ. ಆದರೆ ಎರಡನೇ ವರ್ಗದ ಜನಗಳಿಗೆ ಮಾತ್ರ ಜ್ಞಾನಿಗಳು ತತ್ತ್ವೋಪದೇಶ ಮಾಡುವ ಶ್ರಮವನ್ನು ಎಂದೂ ತೆಗೆದುಕೊಳ್ಳಬೇಕಿಲ್ಲ ಎಂದು ಗೀತೆಯು ಎಚ್ಚರಿಸುತ್ತದೆ.[೨] ತಿಳಿಯುವಲ್ಲಿ ಆಸಕ್ತಿ ಮತ್ತು ಆದರಗಳನ್ನು ಹೊಂದದವರಿಗೆ ತಿಳಿಹೇಳಬೇಡಿ ಎಂಬ ಮಾತು ಅವರ ಮೇಲಿನ ದ್ವೇಷವಾಗಿರದೆ ತತ್ತ್ವಜ್ಞಾನದ ಮೇಲಿನ ಪ್ರೀತಿಯೇ ಆಗಿದೆ. ಎಂದರೆ ಕಣ್ಣಿನ ದೋಷವಿದ್ದವನನ್ನು ತಿದ್ದಬಹುದೇ ಹೊರತು ಹುಟ್ಟು ಕುರುಡನಿಗೆ ರೂಪ ಜ್ಞಾನವನ್ನು ಹುಟ್ಟಿಸಲು ಸರ್ವಥಾ ಅಸಾಧ್ಯ; ಬೆಂಕಿ ಇದ್ದಲ್ಲಿ ಗಾಳಿ ಹಾಕಿದಾಗ ಅದು ಪ್ರಜ್ವಲಿಸಲು ಸಾಧ್ಯ, ಬರಿ ಬೂದಿಗೆ ಗಾಳಿ ಹಾಕಿದರೆ ಬೂದಿ ಹಾರೀತೇ ಹೊರತು ಬೆಂಕಿ ಹುಟ್ಟದು; ಹಾಲನ್ನು ಕಾಯಿಸಿ ಹೆಪ್ಪು ಹಾಕಿದ್ದಲ್ಲಿ ಮೊಸರಾದೀತೇ

---

೧. ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ।
ಅಹಂಕಾರವಿಮೂಢಾತ್ಮಾ ಕರ್ತಾಽಹಮಿತಿ ಮನ್ಯತೇ॥ – ಗೀತಾ (೩/೨೭)

೨. ತಾನಕೃತ್ಸ್ನವಿದೋ ಮಂದಾನ್ ಕೃತ್ಸ್ನವಿನ್ನ ವಿಚಾಲಯೇತ್। – ಗೀತಾ (೩/೨೯)

ಹೊರತು, ನೀರನ್ನು ಕಾಯಿಸಿ ಹೆಪ್ಪಾಕಿದಾಗ ಅಲ್ಲ. ಇವುಗಳನ್ನು ಗಮನಿಸಿದಾಗ ಸ್ವರೂಪದಲ್ಲಿಯೇ ವಿವೇಕವಿಲ್ಲದ ಅವಿವೇಕಿಗೆ ಧರ್ಮ ಬೋಧನೆ ಸಂಪೂರ್ಣ ನಿರರ್ಥಕ ಎಂದು ಅರಿವಾಗುವುದು.

ಕೋತಿಯ ಕೈಗೆ ಮಾಣಿಕ್ಯ ಕೊಡಬೇಡಿ ಎನ್ನುವುದು ಕೋತಿಗೆ ಮಾಡುವ ಅವಮಾನವಾಗಿರದೆ ಮಾಣಿಕ್ಯದ ಮಹತ್ತ್ವಕ್ಕೆ ಸಲ್ಲಿಸುವ ಗೌರವವಾಗಿದೆ; ಅಲ್ಲವೇ? ಕಳ್ಳನ ಕೈಗೆ ಶಸ್ತ್ರ ಕೊಡಬೇಡಿ ಎಂಬ ಮಾತಿನಲ್ಲಿ ಇರುವುದು ವ್ಯಕ್ತಿ ದ್ವೇಷವಾಗಿರದೆ ಸಾಮಾಜಿಕ ಹಿತದ ಬಗೆಗಿನ ಅಪಾರ ಕಳಕಳಿಯೇ ಅಲ್ಲವೇ?

## ಹರಿಯ ಮತ

''ಪ್ರತಿಯೊಬ್ಬನೂ ತನ್ನ ಪಾಲಿನ ಸಕಲವಿಧ ಕರ್ಮಗಳನ್ನೂ ತಪ್ಪದೇ ಆಚರಿಸಲೇಬೇಕು. ಅಂತಹ ಆಚರಣೆಯ ಹಿನ್ನೆಲೆಯಾಗಿ ಭಗವಂತನ ಸರ್ವೋತ್ತಮತ್ವ ಮತ್ತು ಸ್ವಾತಂತ್ರ್ಯಾದಿ ಗುಣಗಳ ಅನುಸಂಧಾನದೊಂದಿಗೆ ಅವೆಲ್ಲಾ ಅವನ ಪೂಜೆ ಎಂಬ ಎಚ್ಚರವನ್ನು ಹೊಂದಿರಬೇಕು. ಭಗವತ್ಪ್ರೀತಿ ಮತ್ತು ತತ್ತ್ವಜ್ಞಾನಗಳ ಹೊರತು ಬೇರಾವ ಫಲಗಳ ಅಪೇಕ್ಷೆಗೂ ಅವಕಾಶವಿರಕೂಡದು. ಹೀಗೆ ಮಾಡುವ ಕರ್ಮಾಚರಣೆ ಎಂದೂ ವಿಷಾದಕ್ಕೆ ಕಾರಣವಾಗಲಾರದು.

[೧]ಇಂತಹ ಮನೋಭಾವವಿದ್ದವನು ಯುದ್ಧ ಮಾಡಲು ಸಹ ಚಿಂತಿಸಬೇಕಿಲ್ಲ ಎಂದ ಮೇಲೆ ಬೇರಾವ ಕಾರ್ಯದಲ್ಲೂ ಸಹ ದುಃಖದ ಪ್ರಸಕ್ತಿ ಇರದು. ತನ್ನ ಮತವನ್ನು ಹೀಗೆ ತಿಳಿಸಿದ ಪರಮಾತ್ಮನು ಅದರಲ್ಲಿ ವಿಶ್ವಾಸವನ್ನಿರಿಸಿ ದೇವರು ಎಂತಹ ಕಷ್ಟಕರವಾದ ಕರ್ಮದಲ್ಲಿ ನಮ್ಮನ್ನು ತೊಡಗಿಸುತ್ತಿರುವನಲ್ಲ ಎಂಬ ದೋಷದೃಷ್ಟಿಯನ್ನು ಹೊಂದದೆ ಸದಾಕಾಲವೂ ಅನುಷ್ಠಾನ ಮಾಡುವ ಜನರು ಕರ್ಮಬಂಧನಕ್ಕೆ ಎಂದೂ ಒಳಗಾಗುವುದಿಲ್ಲ.

ಹಾಗಿಲ್ಲದೆ ದೇವರು ನಮ್ಮನ್ನು ಕಷ್ಟಕರವಾದ ಕಾರ್ಯದಲ್ಲಿ ತೊಡಗಿಸಿರುವನು ಎಂದು ದೋಷಗಳನ್ನು ಆರೋಪಿಸುತ್ತಾ ಅವನ ಮತವನ್ನು ಅನುಷ್ಠಾನ ಮಾಡದೆ ಹೋಗುವ ಜನರು ಎಲ್ಲ ವಿಷಯಗಳಲ್ಲೂ ಜ್ಞಾನಶೂನ್ಯರಾಗಿ ಮಿಥ್ಯಾಜ್ಞಾನಿಗಳೂ ಆಗಿ ನರಕಾದಿ ಅನರ್ಥಗಳಿಗೆ ಗುರಿಯಾಗುವರು. ತನ್ನ ಮತವನ್ನು ತಿಳಿಸಿದ ಕೃಷ್ಣನು ಅದರ ಅನುಷ್ಠಾನದಿಂದಾಗುವ ಒಳಿತನ್ನೂ, ತೊರೆದಲ್ಲಿ ಆಗುವ ಕೆಡುಕನ್ನೂ ಹೀಗೆ ಸ್ಫುಟವಾಗಿ ತಿಳಿಸಿರುವನು.

*****

---

೧. ಮಯಿ ಸರ್ವಾಣಿ ಕರ್ಮಾಣಿ ಸನ್ನ್ಯಸ್ಯಾಧ್ಯಾತ್ಮಚೇತಸಾ।
ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ। – ಗೀತಾ (೩/೩೦)

# ಸ್ವಭಾವದ ಪ್ರಾಬಲ್ಯ

ಮನುಷ್ಯನು ಎಷ್ಟು ತಿಳಿದಿದ್ದರೂ ಸಹ ಅವನು ವರ್ತಿಸುವುದು ತನ್ನ ಸ್ವಭಾವಕ್ಕೆ ಅನುಗುಣವಾಗಿಯೇ ಹೊರತು ಕೇವಲ ಬೋಧನೆಗೆ ತಕ್ಕಂತೆ ಅಲ್ಲ. ಆದ್ದರಿಂದ ಹೊರಗಿನ ಯಾವುದೇ ನಿಯಂತ್ರಣವೂ ಸಹ ಪೂರ್ಣಪ್ರಮಾಣದಲ್ಲಿ ಪರಿಣಾಮಕಾರಿಯಾಗುವುದಿಲ್ಲ ಎಂದು ಭಗವಂತನು ಈ ಹಂತದಲ್ಲಿ ತಿಳಿಸುತ್ತಾನೆ.

ಪ್ರತಿಯೊಬ್ಬ ಚೇತನನಿಗೂ ಸಹ ತನ್ನದೇ ಆದ ಸಹಜ ಗುಣಧರ್ಮಗಳು ಇರುತ್ತವೆ. ಅಂತಹ ಧರ್ಮಗಳನ್ನು ಸಾತ್ವಿಕ, ರಾಜಸ, ತಾಮಸ ಎಂಬುದಾಗಿ ಶಾಸ್ತ್ರಗಳು ವಿಂಗಡಿಸಿವೆ. ಹೊರಗಿನಿಂದ ಬರುವ ಉಪದೇಶವು ಎಷ್ಟೇ ಪ್ರಭಾವಶಾಲಿಯಾಗಿದ್ದರೂ ಸಹ ಅದರ ನಿಜವಾದ ಉಪಯೋಗವನ್ನು ಪಡೆಯಲು ಸಾಧ್ಯವಾಗುವುದು ಸಾತ್ವಿಕ ಚೇತನರಿಗೇ ಹೊರತು ರಾಜಸ ತಾಮಸರಿಗಲ್ಲ.

ಅವರಿಗೆ ಸರಿಯಾದ ವಿಷಯವು ತಿಳಿದಿರುವುದಿಲ್ಲ ಎಂಬುದಕ್ಕಿಂತ ಹೆಚ್ಚಾಗಿ ಅದನ್ನು ಸರಿಯಾಗಿ ತಿಳಿದುಕೊಳ್ಳುವ ಸಾಮರ್ಥ್ಯವೇ ಅವರಿಗಿರುವುದಿಲ್ಲ. ಒಂದು ವೇಳೆ ಸರಿಯಾದ ತಿಳುವಳಿಕೆ ಲಭಿಸಿದರೂ ಅದನ್ನು ಅನುಷ್ಠಾನಕ್ಕೆ ತರಲು ಎಂದೂ ಅವರಿಗೆ ಸಾಧ್ಯವಾಗುವುದೇ ಇಲ್ಲ ಎಂದು ಭಾವ.

ಭ್ರಷ್ಟಾಚಾರ ಮಾಡಿ ಸಿಕ್ಕಿ ಬೀಳುವ ಜನರಲ್ಲಿ ಹೆಚ್ಚಿನವರೆಲ್ಲ ಭ್ರಷ್ಟಾಚಾರವನ್ನು ಶಿಕ್ಷಾರ್ಹವಾದ ಒಂದು ದೊಡ್ಡ ಅಪರಾಧ ಎಂದು ತಿಳಿದವರೇ ಹೊರತು ತಿಳಿಯದವರಾಗಿರುವುದಿಲ್ಲ. ಅಷ್ಟೇ ಏಕೆ, ಒಂದೆರಡು ಬಾರಿ ಭ್ರಷ್ಟಾಚಾರ ಮಾಡಿ ಶಿಕ್ಷೆ ಅನುಭವಿಸಿದ ಅನಂತರವೂ ಅವರಿಗೆ ಅದನ್ನು ತೊರೆಯಲು ಸಾಧ್ಯವಾಗುವುದಿಲ್ಲ ಎಂಬುದನ್ನು ಇತಿಹಾಸ ರುಜುವಾತು ಪಡಿಸಿದೆ; ಧೂಮಪಾನ ಮಾಡುವವರಿಗೆ ಅದು ಮಾರಕ ಎಂಬ ಪರಿಜ್ಞಾನ ಸಾಮಾನ್ಯವಾಗಿ ಇದ್ದೇ ಇರುವುದಲ್ಲವೇ! ಅದೇಕೆ ಅದನ್ನು ಧೂಮಪಾನವು ಕೆಟ್ಟದು ಎಂಬುದು ಸಂವಿಧಾನ ನೀಡಿದ ಎಚ್ಚರಿಕೆ ಎಂಬ ಮಾತನ್ನು ತಿಳಿಸಿಯೇ ಮಾರುವುದು ನಡೆದಿದೆಯಲ್ಲವೇ? ಅದನ್ನು ಹಾಗೆ ತಿಳಿಸಿ ಮಾರುವವನು ತಿಳಿದು ಅದನ್ನು ಕೊಳ್ಳುವವನು, ಅಂತಹ ಮಾರಾಟಕ್ಕೆ ಅವಕಾಶ ನೀಡಿದವನೂ ವಿವೇಕಿಗಳ ಸಾಲಿಗೆ ಸೇರಲು ಸಾಧ್ಯವೇ?

ಅದರಂತೆ ಭಗವತ್ತತ್ತ್ವವನ್ನು ತಿಳಿದರೂ ದುರಹಂಕಾರಕ್ಕೆ ವಶರಾಗಿ ಬದುಕುವ ಜನ ಕೊನೆಗೂ ವಿನಾಶವನ್ನು ಕಾಣುವುದು ತಪ್ಪಿದ್ದಲ್ಲ. ಬೇವಿಗೆ ಸಿಹಿನೀರು, ಬೆಲ್ಲ, ಜೇನುತುಪ್ಪಗಳನ್ನೇ ಹಾಕಿ ಬೆಳೆಸಿದರೂ ಅದು ಕಹಿಯಾಗಿ ಉಳಿಯುವುದೇ ಹೊರತು ಎಂದೂ ಸಿಹಿಯಾಗಲಾರದಲ್ಲವೇ!

ಇದರ ಅರ್ಥ ಉಪದೇಶ ವ್ಯರ್ಥ ಎಂದಾಗಲೀ, ಯಾರಿಗೂ ಉಪದೇಶ ಮಾಡಬಾರದೆಂದಾಗಲೀ ಅಲ್ಲ. ಆದರೆ ಉಪದೇಶ ಮಾಡುವ ಉತ್ಸಾಹದಲ್ಲಿ ಅನರ್ಹರಿಗೂ ಅದನ್ನು ತಲುಪಿಸುವ ಆತುರ ಮತ್ತು ಅವಿವೇಕಗಳನ್ನು ಮಾತ್ರ ಎಂದೂ ಹೊಂದಬಾರದು ಎಂಬುದು ಮಾತ್ರವೇ ಆಗಿದೆ.

*****

## ಸ್ವಧರ್ಮೇ ನಿಧನಂ ಶ್ರೇಯಃ

ಮಾಡಲು ಯತಿಧರ್ಮದಂತಹ ಸರಳ ನಿವೃತ್ತಕರ್ಮಗಳಿರುವಾಗ ರಾಗದ್ವೇಷಗಳಿಂದ ತುಂಬಿರುವ ಯುದ್ಧದಂತಹ ಘೋರಕರ್ಮದಲ್ಲೇ ಏಕೆ ನನ್ನನ್ನು ತೊಡಗಿಸಬೇಕು ಎಂಬುದು ಅರ್ಜುನನ ಎರಡನೆಯ ಪ್ರಶ್ನೆ. ಅದನ್ನು ಭಗವಂತ ''ಸ್ವಧರ್ಮೇ ನಿಧನಂ ಶ್ರೇಯಃ'' ಎಂಬುದಾಗಿ ಉತ್ತರಿಸಿರುವನು.

ಸರಳ ಕರ್ಮ, ಘೋರ ಕರ್ಮ, ಉತ್ತಮ ಕರ್ಮ, ಅಧಮ ಕರ್ಮ ಮೊದಲಾದ ಮಾತುಗಳೆಲ್ಲ ಇಲ್ಲಿ ಅಪ್ರಸ್ತುತ. ಪ್ರತಿಯೊಬ್ಬನಿಗೂ ತನ್ನ ಪಾಲಿಗೆ ವಿಹಿತವಾದ ಕರ್ತವ್ಯ ಕರ್ಮದ ಆಚರಣೆಯೇ ಸಿದ್ಧಿಯ ಪರಮೋಪಾಯ. ಅದು ಸರಳವಾಗಿರಬಹುದು, ಘೋರವಾಗಿರಬಹುದು, ಉತ್ತಮವಾಗಿರಬಹುದು. ಅಧಮವಾಗಿರಬಹುದು. ಆದರೆ ಸ್ವಧರ್ಮ ಮಾತ್ರ ಆಗಿರಲೇಬೇಕು.[೧] ಗೀತೆಯು ಬರೀ ಧರ್ಮಾನುಷ್ಠಾನವನ್ನು ಮಾತ್ರ ಬೋಧಿಸದೆ ಸ್ವಧರ್ಮಾನುಷ್ಠಾನವನ್ನು ಬೋಧಿಸುವ ಅಪೂರ್ವ ಗ್ರಂಥವಾಗಿದೆ.

ಎಲ್ಲರ ಕರ್ತವ್ಯವೂ ಒಂದೇ ತೆರನಾಗಿರುವುದಿಲ್ಲ. ವರ್ಣ, ಆಶ್ರಮ, ದೇಶ, ಕಾಲ ಮೊದಲಾದ ಹಿನ್ನಲೆಗಳಿಗೆ ಅನುಗುಣವಾಗಿ ಅನೇಕ ತೆರನಾಗಿರುತ್ತದೆ. ಯತಿ-ಗಳಂತಹವರಿಗೆ ಜಪತಪಗಳ ಅನುಷ್ಠಾನ, ಅಧ್ಯಯನ - ಅಧ್ಯಾಪನಗಳೇ ಮುಖ್ಯ ಕರ್ಮಗಳಾದರೆ; ಗೃಹಸ್ಥರಿಗೆ ಸಂಸಾರ ನಿರ್ವಹಣೆ, ಯಜ್ಞ ಯಾಗಗಳ ಆಚರಣೆ ಮೊದಲಾದವುಗಳು ಮುಖ್ಯ ಕರ್ಮಗಳಾಗುತ್ತವೆ. ಜ್ಞಾನಕಾರ್ಯವು ಬ್ರಾಹ್ಮಣನ ಪ್ರಧಾನ ಕರ್ತವ್ಯವಾದರೆ ಕ್ಷತ್ರಿಯನಿಗೆ ಪ್ರಜಾಪಾಲನೆಯು ಪ್ರಧಾನ ಕರ್ಮವೆನ್ನಿಸುತ್ತದೆ. ವಾದದಲ್ಲಿ ಪ್ರತಿವಾದಿಯನ್ನು ಜಯಿಸುವುದು ಬ್ರಾಹ್ಮಣನಿಗೆ ವಿಹಿತವಾದರೆ, ಸಮರದಲ್ಲಿ ಎದುರಾಳಿಯನ್ನು ಮಣ್ಣುಮುಕ್ಕಿಸುವುದು ಕ್ಷತ್ರಿಯನಿಗೆ ವಿಹಿತವಾಗಿದೆ. ಇವುಗಳಲ್ಲೆಲ್ಲ ಗಮನಿಸಬೇಕಾದದ್ದು ವಿಹಿತ ಮತ್ತು ಅವಿಹಿತ ಎಂಬುದನ್ನು ಮಾತ್ರ.

ದೇಶರಕ್ಷಣೆಗೋಸ್ಕರ ಸೇರುವ ಯೋಧನು ಯುದ್ಧಕಾಲಕ್ಕೆ ವ್ಯವಸಾಯ ಮಾಡುತ್ತೇನೆ ಎಂದು ಹೋಗುವುದು ಧರ್ಮವಾದೀತೇ? ಪರೀಕ್ಷೆಯನ್ನು ತೊರೆದು ವಿದ್ಯಾರ್ಥಿಯು

---

೧. ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ।
ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ ॥ - ಗೀತಾ (೩/ ೩೫)

ಪುಣ್ಯಕಾರ್ಯ ಎಂದು ದೇವಸ್ಥಾನಕ್ಕೆ ಹೋದರೆ ಹೇಗಿರುತ್ತದೆ? ಶಸ್ತ್ರ ಚಿಕಿತ್ಸೆ ಮಾಡುವುದನ್ನು ಬಿಟ್ಟು ವೈದ್ಯನು ತುಂಬಾ ಶ್ರೇಷ್ಠವಾದ ಕಾರ್ಯ ಎಂದು ಜಪ ಮಾಡುತ್ತಾ ಕೂರುವುದು ಯೋಗ್ಯವೆನ್ನಿಸಬಹುದೇ?

ಇವುಗಳಲ್ಲಿ ಕೃಷಿ, ದೇವದರ್ಶನ ಮತ್ತು ಜಪಗಳು ನಿಜಕ್ಕೂ ಶ್ರೇಷ್ಠ ಕಾರ್ಯಗಳೇ. ಆದರೆ ಸ್ವಕಾರ್ಯಗಳಲ್ಲ ಎಂಬುದನ್ನು ಗಮನಿಸಬೇಕು. ಅದರಂತೆ ನದಿಯ ತೀರದಲ್ಲಿ ಆಹ್ನೀಕ ಮಾಡುತ್ತಾ ಕುಳಿತ ಸನ್ಯಾಸಿಯು ಸಹ ಆ ಸಮಯದಲ್ಲಿ ಮಗು ಮೊದಲಾ-ದವರು ನೀರಿಗೆ ಬಿದ್ದರೆ ಅವರನ್ನು ಮೇಲೆತ್ತುವುದೇ ಸ್ವಧರ್ಮ; ಕಣ್ಣು ಮುಚ್ಚಿ ಜಪಮಾಡುತ್ತಾ ಕೂಡುವುದಲ್ಲ; ಆ ಮಗುವಿನ ಕುಲಗೋತ್ರ ವಿಚಾರಿಸುವುದೂ ಅಲ್ಲ.

ಹೀಗೆ ಧರ್ಮಾನುಷ್ಠಾನದಲ್ಲಿ ನಿರತನಾಗುವುದರಲ್ಲೇ ಯೋಧ, ವಿದ್ಯಾರ್ಥಿ ವೈದ್ಯ, ಯತಿ ಮೊದಲಾದವರ ಸಾರ್ಥಕ್ಯವಿದೆಯೇ ಹೊರತು ಶ್ರೇಷ್ಠ ಮೊದಲಾದ ಕಾರಣಗಳನ್ನು ಮುಂದಿಟ್ಟು ಇತರರ ಧರ್ಮಗಳನ್ನು ಆಚರಿಸುವುದರಲ್ಲಿ ಅಲ್ಲ.

ಇಲ್ಲಿಯ ಸ್ವಧರ್ಮ ಮತ್ತು ಪರಧರ್ಮ ಎಂಬ ಪದಗಳಿಗೆ ವ್ಯಕ್ತಿಯು ಹುಟ್ಟಿನಿಂದ ಪಡೆದ ಮತಧರ್ಮ ಎಂಬುದಾಗಿ ಕೆಲವರು ತಪ್ಪಾಗಿ ಅರ್ಥಮಾಡುವುದುಂಟು. ಅಂತಹ ಜನ ಹುಟ್ಟಿದ ಮತ ಹೇಗಿದ್ದರೂ ಅದರ ಧರ್ಮವು ಎಂತಹುದೇ ಆಗಿದ್ದರೂ ಅದನ್ನು ತೊರೆಯದೆ ಪಾಲಿಸಬೇಕು ಎಂದು ವಿಚಾರಶೀಲರನ್ನು ತಪ್ಪುದಾರಿಗೆ ಎಳೆದುಬಿಡುವರು.

ಆದರೆ ಗೀತೆಗೆ ಆ ಅರ್ಥ ಎಂದೂ ಸಮ್ಮತವಲ್ಲ ಎನ್ನುವುದು ಎರಡನೇ ಅಧ್ಯಾಯದಲ್ಲಿ ಬರುವ **"ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ"**[೧] ಎಂಬ ಮಾತಿನಲ್ಲಿ ಸ್ಪಷ್ಟವಾಗಿ ಬಂದಿದೆ. ಈ ಅಧ್ಯಾಯದಲ್ಲೂ ಸಹ ತನ್ನ ಮತವನ್ನು ಅನುಸರಿಸಿದರೆ ಮಾತ್ರವೇ ಯಶಸ್ಸು ಇಲ್ಲವಾದಲ್ಲಿ ಇಲ್ಲ ಎಂದು ಸ್ವತಃ ಭಗವಂತನೇ ಉಪದೇಶಿಸಿರುವನು.

ಮತಧರ್ಮವೇ ಸ್ವಧರ್ಮ ಎಂದು ಅರ್ಥವಾಗುವುದಿದ್ದಲ್ಲಿ ಮತಗಳ ಜಿಜ್ಞಾಸೆ ಎಂಬುದು ಅರ್ಥವಿಲ್ಲದ ಮಾತಾಗಿ ಮನುಷ್ಯನ ಬುದ್ಧಿಗೆ ಮಾಡುವ ದೊಡ್ಡ ಅವಮಾನವಾಗುವುದು. ಕಳ್ಳನ ಮಗ ಕಳ್ಳನಾಗಿಯೂ, ಸುಳ್ಳನ ಮಗ ಸುಳ್ಳನಾಗಿಯೂ ಇರುವುದೇ ಶ್ರೇಯಸ್ಸಿನ ಹಾದಿ ಎಂಬ ಅಪಾರ್ಥಕ್ಕೂ ಎಡೆಯಾಗಿ ಸಾಮಾಜಿಕ ನೀತಿ ನಿಯಮಗಳೆಲ್ಲ ಮಣ್ಣುಪಾಲಾಗುವುವು.

ಅರ್ಜುನನು ಕ್ಷತ್ರಿಯನಾದ್ದರಿಂದ ಧರ್ಮಯುದ್ಧ ಅವನ ಪಾಲಿಗೆ ಸ್ವಧರ್ಮ, ಆದ್ದರಿಂದ ಅದನ್ನು ಮಾಡುವುದು ಶ್ರೇಷ್ಠ ಪುಣ್ಯಕಾರ್ಯವಾಗಿರುವಂತೆ, ತೊರೆಯು-ವುದು ದೊಡ್ಡ ಪಾಪಕಾರ್ಯವೂ ಆಗುವುದು ಎಂಬುದು ಇಲ್ಲಿಯ ಭಾವ.

*****

---

೧. ಇದು Great men always think alike ಎಂಬ ಆಂಗ್ಲ ಮಾತಿಗೆ ಸ್ಫೂರ್ತಿಯಂತಿರುವ ಮಾತು

## ದುರಾಸೆಯು ಪಾಪದ ಮೂಲ

ಕರ್ತವ್ಯದ ಪರಿಜ್ಞಾನವಿದ್ದವರೂ ಪಾಪಮಾಡುವುದನ್ನು ಕಾಣುತ್ತೇವೆ. ಅದೇಕೆ? ಇಚ್ಛೆಯಿಲ್ಲದಿದ್ದರೂ, ಅದು ತಪ್ಪು ಎಂದು ತಿಳಿದಿದ್ದರೂ ಪಾಪಕಾರ್ಯಗಳಲ್ಲಿ ನಮ್ಮ ಮನಸ್ಸು ಧಾವಿಸುವುದು ನಮ್ಮ ಅನುಭವದಲ್ಲೇ ಕಂಡಿದೆ. ಇದಕ್ಕೆಲ್ಲ ಕಾರಣ ಯಾವುದು? ಎಂಬ ಮಹತ್ವದ ಪ್ರಶ್ನೆಯನ್ನು ಅರ್ಜುನನು ಈ ಹಂತದಲ್ಲಿ ಕೇಳುವನು. ಅದಕ್ಕೆ ಭಗವಂತನು ನೀಡಿದ ಉತ್ತರ: ''ಅದಕ್ಕೆಲ್ಲ ಕಾಮವೇ ಕಾರಣ''.

[೧]ಇಲ್ಲಿ ಕಾಮವೆಂದರೆ ಸಲ್ಲದ ಬಯಕೆ ಎಂದರ್ಥ. ದುರಾಶೆ ಎಂತಹ ವಿವೇಕಿಯನ್ನೂ ಅನ್ಯಾಯದ ಕಡೆಗೆ ಸೆಳೆಯುವುದು. ತಾನು ಬಯಸಿದ್ದು ಈಡೇರದಾಗ ಅದು ಕ್ರೋಧವಾಗಿ ಪರಿಣಮಿಸಿ ಹಿಂಸೆ ಮೊದಲಾದ ಇನ್ನೂ ಹೆಚ್ಚಿನ ಪಾಪಕರ್ಮಗಳಲ್ಲಿ ತೊಡಗುವುದನು.

ದುರಾಶೆಯ ಸ್ವಭಾವ ವಿಚಿತ್ರ. ಸಲ್ಲದ್ದನ್ನು ಬಯಸುವುದು, ಅದನ್ನು ಪಡೆಯಲೆಂದು ಸಲ್ಲದ ಹಾದಿಯನ್ನು ಹಿಡಿಯುವುದು, ಒಂದು ವೇಳೆ ದೊರೆತರೂ ಇನ್ನೂ ಹೆಚ್ಚು ದೊರೆಯಲಿ ಎಂದು ಅಪೇಕ್ಷಿಸುವುದು, ಅದು ಸಾಧ್ಯವಾಗದಾಗ ಕೊರಗುವುದು, ಅದಕ್ಕೆ ಅಡ್ಡಿಯಾದವರ ಮೇಲೆ ಕೆರಳುವುದು, ಈಡೇರುವ ಮುನ್ನವೂ ಮತ್ತು ಅನಂತರವೂ ಮನಸ್ಸಿನಲ್ಲಿ ತಳಮಳ ಹುಟ್ಟಿಸುವುದು ಅದರ ಸ್ವಭಾವ. ದುರಾಶೆ ಮೂಲತಃ ಅಯೋಗ್ಯವಾದ್ದರಿಂದ ಅದರ ಪರಿಣಾಮವಾಗಿ ಪಾಪಕರ್ಮಗಳು ಒಂದಾದ ಮೇಲೊಂದರಂತೆ ಘಟಿಸುತ್ತಲೇ ಹೋಗುತ್ತವೆ.

ದುಷ್ಟಕಾಮನೆಗಳನ್ನು ಪೂರೈಸಿ ತೃಪ್ತಿಪಡಿಸುವುದು, ತುಪ್ಪವನ್ನು ಹಾಕಿ ಬೆಂಕಿಯನ್ನು ನಂದಿಸುವ ಪ್ರಯತ್ನದಂತೆ ಅಶಕ್ಯ. ಅದು ದುಷ್ಪೂರ ಮತ್ತು ಅನಲ ಎಂದರೆ ಅದನ್ನು ಈಡೇರಿಸಲಾಗಲಿ, ಸಾಕು ಎನ್ನುವಂತೆ ತೃಪ್ತಿಪಡಿಸಲಾಗಲಿ ಸಾಧ್ಯವೇ ಇಲ್ಲ ಎಂದರ್ಥ.

## ಕಾಮದ ಆಕ್ರಮಣದ ರೀತಿ

ಜೀವರಿಗೆಲ್ಲ ಈ ಕಾಮದ ಬಂಧನ ತಪ್ಪಿದ್ದಲ್ಲ. ಆದರೆ ಸಾತ್ವಿಕ, ರಾಜಸ ಮತ್ತು ತಾಮಸ ಎಂಬುದಾಗಿ ತ್ರಿವಿಧ ಜೀವರನ್ನು ಇದು ಆಕ್ರಮಿಸುವ ರೀತಿ ಮಾತ್ರ ಬೇರೆ ಬೇರೆಯಾಗಿರುತ್ತದೆ. ಬೆಂಕಿಯನ್ನು[೨] ಹೊಗೆ ಕವಿಯುವಂತೆ ಸಾತ್ವಿಕರನ್ನು, ಕೊಳೆ ಕನ್ನಡಿಗೆ ಮೆತ್ತುವಂತೆ ರಾಜಸರನ್ನು, ಚರ್ಮದಚೀಲ ಗರ್ಭವನ್ನು ಬಿಗಿಯುವಂತೆ ತಾಮಸರನ್ನು

---

೧. ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ।
ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಮ್ ॥ – ಗೀತಾ (೩/೩೭)

೨. ಧೂಮೇನಾವ್ರಿಯತೇ ವಹ್ನಿರ್ಯಥಾಽಽದರ್ಶೋ ಮಲೇನ ಚ।
ಯಥೋಲ್ಬೇನಾವೃತೋ ಗರ್ಭಸ್ತಥಾ ತೇನೇದಮಾವೃತಮ್ ॥ – ಗೀತಾ (೩/೩೮)

ಇದು ಆವರಿಸಿರುವುದು. ಎಂದರೆ ಸಾತ್ವಿಕರಿಗಿಂತ ಹೆಚ್ಚಾಗಿ ರಾಜಸರನ್ನು, ರಾಜಸರಿಗಿಂತ ಹೆಚ್ಚಾಗಿ ತಾಮಸರನ್ನು ಆವರಿಸುತ್ತದೆ. ಹೊಗೆ ಕವಿದಿದ್ದರೂ ಬೆಂಕಿಯು ತುಸುವಾದರೂ ಗೋಚರಿಸುವಂತೆ ಅಂತಹ ಪರಿಸ್ಥಿತಿಯಲ್ಲೂ ಅದರ ಪರಿವೆ ಇರುತ್ತದೆ. ಕೊಳೆ ಕನ್ನಡಿಯನ್ನು ಮೆತ್ತಿದ್ದರೂ ತೀರ ಮಸಕಾದರೂ ಪ್ರತಿಬಿಂಬದ ಸುಳಿವು ಸಿಗುತ್ತದೆ. ಆದರೆ ಚರ್ಮದ ಚೀಲದ ಬಿಗಿತದಿಂದಾಗಿ ಮಗುವಿಗೆ ಅಲುಗಾಡಲೂ ಅಸಾಧ್ಯವೆನಿಸುತ್ತದೆ.

ಧೂಮದ ಆವರಣದಿಂದಾಗಿ ಬೆಂಕಿ ಗೋಚರಿಸುವುದಿಲ್ಲ, ಕೊಳೆಯಿಂದಾಗಿ ಕನ್ನಡಿಯಲ್ಲಿ ಪ್ರತಿಬಿಂಬ ಗೋಚರಿಸುವುದಿಲ್ಲ, ಚರ್ಮದ ಬಿಗಿತದಿಂದಾಗಿ ಗರ್ಭದಲ್ಲಿನ ಶಿಶು ಅಲುಗಾಡಲು ಸಾಧ್ಯವಾಗುವುದಿಲ್ಲ, ಎಂದರೆ ಕಾಮದ ಪ್ರಭಾವದಿಂದಾಗಿ ಭಗವಂತ ಅಗೋಚರನಾಗುತ್ತಾನೆ. ಮನಸ್ಸು ವಿವೇಕ ನೀಡುವಲ್ಲಿ ವಿಫಲವಾಗುತ್ತದೆ. ಶಿಶುವಿನಂತೆ ಜೀವ ಕರ್ತವ್ಯ ಭ್ರಷ್ಟನಾಗುತ್ತಾನೆ. ಈ ಕಾರಣದಿಂದಾಗಿ ಕಾಮವು ಸಾಧನೆಯಲ್ಲಿ ಪ್ರಬಲ ಶತ್ರುವಾಗುವುದು.

*****

## ಕಾಮಜಯದ ಉಪಾಯ

[೧]ಕಾಮ-ಕ್ರೋಧಗಳಿಗೆ ಇಂದ್ರಿಯಗಳೇ ನೆಲೆ; ಎಂದರೆ ಇಂದ್ರಿಯಗಳು ಹತೋಟಿಗೆ ಬಂದಾಗ ಮಾತ್ರ ಕಾಮ-ಕ್ರೋಧಗಳು ಅಳಿಯಲು ಸಾಧ್ಯ ಎಂದರೆ ಇಂದ್ರಿಯಜಯ ಕಾಮಜಯದ ಮೊದಲ ಮೆಟ್ಟಿಲು. ಜ್ಞಾನವು ಕಾಮ ಕ್ರೋಧಗಳ ಜಯಕ್ಕೆ ಪ್ರಧಾನ ಸಾಧನ. [೨]ತತ್ತ್ವಜ್ಞಾನದಿಂದ ಇಂದ್ರಿಯ ಜಯದೊಂದಿಗೆ ಕಾಮಜಯವೂ ಸಾಧ್ಯವಾಗುವುದು. ತತ್ತ್ವಜ್ಞಾನದಿಂದ ಭಗವಂತನ ಹಿರಿಮೆ ಮನವರಿಕೆಯಾಗುವಂತೆ ನಮ್ಮ ಇತಿಮಿತಿಗಳು ಗೋಚರಿಸುವುದು.

[೩]ಇಂದ್ರಿಯಗಳು, ವಿಷಯಗಳು ಮನಸ್ಸು ಬುದ್ಧಿ; ಮಹತ್ತತ್ತ್ವ ಮತ್ತು ಅವ್ಯಕ್ತ ತತ್ತ್ವ ಇವೆಲ್ಲಕ್ಕೂ ಒಂದಕ್ಕಿಂತ ಮತ್ತೊಂದು ಮಿಗಿಲು ಎಂದರೆ ಅವುಗಳ ಅಭಿಮಾನಿ ದೇವತೆಗಳು

---

೧. ಇಂದ್ರಿಯಾಣಿ ಮನೋಬುದ್ಧಿರಸ್ಯಾಧಿಷ್ಠಾನಮುಚ್ಯತೇ।
ಏತೈರ್ವಿಮೋಹಯತ್ಯೇಷ ಜ್ಞಾನಮಾವೃತ್ಯ ದೇಹಿನಮ್ ॥ – ಗೀತಾ (೩/೪೦)

೨. ತಸ್ಮಾತ್ ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ ।
ಪಾಪ್ಮಾನಂ ಪ್ರಜಹಿ ಹ್ಯೇನಂ ಜ್ಞಾನವಿಜ್ಞಾನನಾಶನಮ್ ॥ – ಗೀತಾ (೩/೪೧)

೩. ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ।
ಮನಸಸ್ತು ಪರಾ ಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ ॥ – ಗೀತಾ (೩/೪೨)
ಇಂದ್ರಿಯೇಭ್ಯಃ ಪರಾ ಹ್ಯರ್ಥಾ ಅರ್ಥೇಭ್ಯಶ್ಚ ಪರಂಮನಃ।
ಮನಸಸ್ತು ಪರಾ ಬುದ್ಧಿರ್ಬುದ್ಧೇರಾತ್ಮಾ ಮಹಾನ್ ಪರಃ ॥
ಮಹತಃ ಪರಮವ್ಯಕ್ತಮವ್ಯಕ್ತಾತ್ ಪುರುಷಃ ಪರಃ।
ಪುರುಷಾನ್ನ ಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾ ಗತಿಃ॥ –ಕಠೋಪನಿಷತ್

ಸಹ ಹಾಗೆಯೇ. ಎಂದರೆ ದೇವತಾತಾರತಮ್ಯದ ಪರಿಜ್ಞಾನ ಮುಮುಕ್ಷುವಿನ ಸಾಧನೆಯಲ್ಲಿ ಅತ್ಯಗತ್ಯವಾದ ಸಾಧನ. ಎಲ್ಲ ದೇವತೆಗಳಿಗಿಂತ ಮಿಗಿಲಾದವನು ಭಗವಂತ. ಅವನು ಸರ್ವತಂತ್ರ ಸ್ವತಂತ್ರ ಅಂತೆಯೇ ಸರ್ವೋತ್ತಮ. ಅವನನ್ನು ಸರ್ವಾತ್ಮನಾ ಶರಣು ಹೊಂದುವುದು ಇಂದ್ರಿಯಜಯ ಕಾಮಜಯ ಮೊದಲಾದ ಎಲ್ಲಕ್ಕೂ [೧]ಮೂಲಸಾಧನ. ತತ್ತ್ವಾಭಿಮಾನಿ ದೇವತೆಗಳ ಅನುಗ್ರಹವು ಇಂದ್ರಿಯ ಜಯಕ್ಕೆ ಕಾರಣವಾಗಿ ದುರಾಶೆಯ ಪ್ರಭಾವವನ್ನು ಸಂಪೂರ್ಣವಾಗಿ ಮೆಟ್ಟಿ ನಿಲ್ಲಲು ನೆರವಾಗುವುದು.

ಹೀಗೆ ಭಗವದ್ಗೀತೆಯ ಮೂರನೆಯ ಅಧ್ಯಾಯವು ಕರ್ಮಯೋಗದ ಸಮಗ್ರ ಸ್ವರೂಪವನ್ನು ವಿವಿಧ ಕೋನಗಳಿಂದ ಸ್ಪಷ್ಟಪಡಿಸುವ ಅಪೂರ್ವ ಅಧ್ಯಾಯವಾಗಿದೆ. ಅಂತೆಯೇ ಇದಕ್ಕೆ ಕರ್ಮಯೋಗವೆಂಬ ಹೆಸರು ಉಚಿತವಾಗಿದೆ.

*****

---

೧. ಏವಂ ಬುದ್ಧೇಃ ಪರಂ ಬುದ್ಧ್ವಾ ಸಂಸ್ತಭ್ಯಾತ್ಮಾನಮಾತ್ಮನಾ ।
ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಮ್ ॥ – ಗೀತಾ (೩/೪೩)

# ಅಧ್ಯಾಯ - ೪

## ಜ್ಞಾನಕ್ಕೆ ಪರಂಪರೆ ಆವಶ್ಯಕ[೧]

ಶ್ರೀಕೃಷ್ಣನು ತತ್ತ್ವಜ್ಞಾನವನ್ನು ಮೊದಲು ಸೂರ್ಯನಿಗೆ ನೀಡಿದ; ಅದನ್ನು ಅವನು ತನ್ನ ಮಗ ಮನುವಿಗೂ, ಅವನು ತನ್ನ ಮಗ ಇಕ್ಷ್ವಾಕುವಿಗೂ ತಿಳಿಸಿದ. ಅದು ಕ್ರಮವಾಗಿ ಸಮಸ್ತ ರಾಜರಿಗೂ, ಋಷಿಗಳಿಗೂ ತಲುಪಿತು. ಆದರಿಂದ ಅವರು ಸಿದ್ಧಿಯನ್ನು ಪಡೆಯಲು ಸಾಧ್ಯವಾಯಿತು. ಕಾಲಕ್ರಮೇಣ ಅದು ನಷ್ಟವಾಯಿತು. ಅಂತಹ ತತ್ತ್ವಜ್ಞಾನವನ್ನೇ ಅವನು ಅರ್ಜುನನಿಗೆ ಆ ಸಮರಾಂಗಣದಲ್ಲಿ ನೀಡಿದ.[೨]

ಜ್ಞಾನಕ್ಕೆ ಪರಂಪರೆ ಬೇಕು. ಧನವು ಅದರ ಮೂಲವನ್ನು ತಿಳಿಸದಾಗ 'ಕಪ್ಪುಹಣ' ಎನ್ನಿಸುತ್ತದೆ; ಅಂತೆಯೇ ಜ್ಞಾನವೂ ಸಹ. ಗುರುಪರಂಪರೆಯ ಮೂಲಕ ಬರದ ಜ್ಞಾನಕ್ಕೆ ಎಂದೂ ಮನ್ನಣೆ ಇರದು. ಅಂಗೀಕೃತ ವಿಶ್ವವಿದ್ಯಾನಿಲಯದ ಮನ್ನಣೆಯಿಲ್ಲದ ಪದವಿ ಅಮಾನ್ಯವೆನ್ನಿಸುನಂತೆ ಜ್ಞಾನವೂ ಸಹ. 'ಗುರುವಿನ ಗುಲಾಮನಾಗದ ತನಕ ದೊರೆಯದಣ್ಣ ಮುಕುತಿ', 'ಗುರೂಪದೇಶವಿಲ್ಲದ ಜ್ಞಾನ ಉರಗನ ಉಪವಾಸದಂತೆ ಕಾಣಿರೊ' ಎಂಬ ಮಾತುಗಳ ಅಂತರ್ಯವೂ ಇದೇ ಆಗಿದೆ.

## ಜೀವ-ಭಗವಂತರ ಅಂತರ

ಭಗವಂತನ ಅವತಾರಗಳು ಅನಂತ. ಜೀವನ ಹುಟ್ಟುಗಳೂ ಅಪರಿಮಿತ. ಜೀವನಿಗೆ ತನ್ನ ಹುಟ್ಟುಗಳ ಸಮಗ್ರ ಅರಿವು ಇರದು. ಭಗವಂತನ ಅವತಾರಗಳಂತೂ ಅವನಿಗೆ ತಿಳಿಯಲು ಖಂಡಿತ ಅಶಕ್ಯ. ಆದರೆ ಭಗವಂತನಿಗೆ ತನ್ನ ಸಮಸ್ತ ಅವತಾರಗಳ ಪರಿಜ್ಞಾನವೂ ಉಂಟು;[೩] ಜೊತೆಗೆ ಸಕಲಜೀವರ ಸಕಲಜನ್ಮಗಳ ಪರಿಜ್ಞಾನವೂ ಸಹ. ಆದಕ್ಕೆಂದೇ ಅವನು ಸರ್ವಜ್ಞ; ಜೀವನು ಅಲ್ಪಜ್ಞ.

*****

---

೧. ಬುದ್ಧೇಃ ಪರಸ್ಯ ಮಾಹಾತ್ಮ್ಯಂ ಕರ್ಮಭೇದೋ ಜ್ಞಾನಮಾಹಾತ್ಮ್ಯಂ ಚೋಚ್ಯತೇऽಸ್ಮಿನ್ನಧ್ಯಾಯೇ ।
– ಗೀ. ಭಾ.

ಉಕ್ತಯೋರ್ಜ್ಞಾನಕರ್ಮಣೋರುಭಯೋರ್ವಿಶೇಷವಿಸ್ತರಾತ್ಮಕೋऽಯಮಧ್ಯಾಯಃ । –ಗೀ.ತಾ.

೨. ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಮ್ ।
ವಿವಸ್ವಾನ್ ಮನವೇ ಪ್ರಾಹ ಮನುರಿಕ್ಷ್ವಾಕವೇऽಬ್ರವೀತ್ –ಗೀತಾ (೪/೧)

೩. ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ ।
ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ –ಗೀತಾ (೪/೫)

## ಭಗವದವತಾರದ ರಹಸ್ಯ

ಭಗವಂತ ಹುಟ್ಟಿರದವನು.[೧] ಅವನ ದೇಹಕ್ಕೂ ಎಂದೂ ಅಳಿವಿಲ್ಲ. ಅವನು ಸಕಲಪ್ರಾಣಿಗಳಿಗೂ ಒಡೆಯ. ಆದರೂ ಅವನು ಅನಂತರೂಪಗಳನ್ನು ತಳೆಯುವನು. ಅವನಿಗೆ ಪ್ರಾಕೃತದೇಹ ಮಾತ್ರ ಎಂದೂ ಇರದು. ಅವನ ಅವತಾರದ ಕಾರಣವೂ ಅಪೂರ್ವ. ಜೀವರು ತಮ್ಮ ಕರ್ಮವನ್ನು ಸವೆಸಲೆಂದು ಹುಟ್ಟಿದರೆ, ಅವನು ಅಧರ್ಮವನ್ನು ಮೆಟ್ಟಿ ಧರ್ಮವನ್ನು ಪುನರುಜ್ಜೀವನಗೊಳಿಸಲೆಂದು ಅವತರಿಸುವನು.[೨] ಸಜ್ಜನರ ಸಂರಕ್ಷಣೆ, ದುರ್ಜನರ ವಿನಾಶ ಅವನ ಅವತಾರದ ಗುರಿ. ಅವನ ಜನ್ಮದಂತೆಯೇ ಅವನ ಕರ್ಮಗಳೂ ಅಲೌಕಿಕ. ಹಾಗೆ ಅವನನ್ನು ಅರಿತವನಿಗೂ ಮತ್ತೆ ಹುಟ್ಟು ಬರದು.

ಜೀವನ ಸ್ವರೂಪದೇಹ ಅಪ್ರಾಕೃತವಾದರೂ, ಅವನು ಸಂಸಾರದಲ್ಲಿ ಪಡೆಯುವ ದೇಹಗಳು ಪ್ರಾಕೃತವಾದವುಗಳು; ಭಗವಂತನದು ಹಾಗಲ್ಲ. ಅವು ಅಪ್ರಾಕೃತ. ಅವನ ಎಲ್ಲ ಅವತಾರಗಳೂ ಅಪ್ರಾಕೃತವೇ. ಅವನಿಗೆ ಹುಟ್ಟುಸಾವುಗಳು ಇಲ್ಲವೇ ಇಲ್ಲ. ಜೀವರ ಹುಟ್ಟು ಹಳೆಯ ಕರ್ಮ ಸವೆಸಲು, ಹೊಸ ಕರ್ಮ ಮಾಡಲು. ಭಗವಂತನದು ಸ್ವೇಚ್ಛಾವತಾರ; ಕರ್ಮದ ಬಂಧನವೇ ಅವನಿಗೆ ಇಲ್ಲ. ಅದಕ್ಕೆಂದೇ ಭಗವಂತನ ಅವತಾರ ಹೀಗೆ ಅಲೌಕಿಕವೆಂದು ತಿಳಿಸಲೆಂದೇ ಶ್ರೀರಾಮನವಮೀ, ಶ್ರೀಕೃಷ್ಣಜಯಂತಿ ಮೊದಲಾದ ಭಗವದವತಾರಜಯಂತಿಗಳ ಆಚರಣೆ ವಿಹಿತವಾಗಿದೆ. ಭಗವಂತನಿಗೆ ನಮ್ಮಂತಹ ಹುಟ್ಟು ಇಲ್ಲ, ಅವನದು ಅವತಾರ, ಅವನ ಕರ್ಮಗಳು ಇಲ್ಲ, ಎಂದು ತಿಳಿದವನಿಗೂ ಸಹ ಮತ್ತೊಮ್ಮೆ ಹುಟ್ಟುವ ಪ್ರಸಂಗ ಸರ್ವಥಾ ಬಾರದು.[೩]

ಭಗವಂತನು ಅನುಗ್ರಹಿಸುವುದು ಉಪಾಸನೆಗೆ ಅನುಗುಣವಾಗಿ. ಉಪಾಸನೆ ನಿರ್ಮಲವಾಗಿದ್ದರೆ ದೊರಕುವ ಫಲವೂ ಉನ್ನತ. ಇಲ್ಲವಾದಲ್ಲಿ ಫಲವೂ ಅಲ್ಪವೇ. ಅರ್ಜುನ-ದುರ್ಯೋಧನರು ಇದಕ್ಕೆ ನಿದರ್ಶನ. ಶ್ರೀಕೃಷ್ಣನನ್ನು ಆಯ್ದುಕೊಂಡ ಅರ್ಜುನ ಜಯದೊಂದಿಗೆ ರಾಜ್ಯಕೋಶಾದಿಸಮಸ್ತವನ್ನೂ ಪಡೆದ. ಆದರೆ ಕೃಷ್ಣನನ್ನು

---

೧. ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್।
ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ —ಗೀತಾ (೪/೬)

೨. ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ।
ಅಭ್ಯುತ್ಥಾನಮಧರ್ಮಸ್ಯ ತದಾಽಽತ್ಮಾನಂ ಸೃಜಾಮ್ಯಹಮ್॥ ೭ ॥
ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್।
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ —ಗೀತಾ (೪/೭, ೮)

೩. ಜನ್ಮ ಕರ್ಮ ಚ ಮೇ ದಿವ್ಯಮೇವಂ ಯೋ ವೇತ್ತಿ ತತ್ತ್ವತಃ।
ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ —ಗೀತಾ (೪/೯)

ಬಿಟ್ಟು ಸೇನೆಯನ್ನು ಮಾತ್ರ ಆರಿಸಿಕೊಂಡ ದುರ್ಯೋಧನ ಅದರೊಂದಿಗೆ ತನ್ನ ಸೇನೆಯನ್ನೂ, ಸರ್ವಸ್ವವನ್ನೂ ಕಳೆದುಕೊಂಡು ವಿನಾಶಹೊಂದಿದ[೧]. **'ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಮ್'.**

ಮನುಷ್ಯಲೋಕದಲ್ಲಿ ಸಿದ್ಧಿ ಬೇಗ ಲಭಿಸುವುದು. ಇತರ ದೇವತೆಗಳು ಬೇಗ ಸಿದ್ಧಿಯನ್ನು ನೀಡುವರು ಸಹ. ಅದಕ್ಕೆಂದೇ ಮನುಷ್ಯಲೋಕದ ಜನಕ್ಕೆ ಅನ್ಯದೇವತೆಗಳನ್ನು ಆರಾಧಿಸುವ ಹಂಬಲ. ಆದರೆ ವಿಷ್ಣುವಿನ ಆರಾಧನೆ ಹಾಗಲ್ಲ. ಅವನು ಫಲಕೊಡುವುದು ತಡವಾದರೂ, ಆ ಫಲ ಶಾಶ್ವತ. ಇತರ ದೇವತೆಗಳು ಬೇಗ ಫಲ ನೀಡಿದರೂ, ಅವು ನಶ್ವರ. ಆದ್ದರಿಂದಲೇ ಸಕಲರಿಗೂ ವಿಷ್ಣುವಿನ ಆರಾಧನೆಯೇ ವಿಹಿತ.

ಬ್ರಾಹ್ಮಣಾದಿ ನಾಲ್ಕು ವರ್ಣಗಳು ಭಗವಂತನ ಸೃಷ್ಟಿ[೨] ಆದ್ದರಿಂದಲೇ ಅವುಗಳು ಸಾರ್ಥಕ ಸಹ. ಅವುಗಳನ್ನು ಅವನು ನಿರ್ಮಿಸಿರುವುದು ಸಹ ಗುಣಕರ್ಮಗಳ ಪ್ರಭೇದನ್ನು ಅನುಸರಿಸಿ.

ವರ್ಣವ್ಯವಸ್ಥೆಯೂ ವಿಶಿಷ್ಟವಾದುದು. ಜೀವರು ತಮ್ಮ ಯೋಗ್ಯತೆಗನುಸರಿಸಿ, ಸ್ವರೂಪತಃ ಬ್ರಾಹ್ಮಣಾದಿವರ್ಣಗಳನ್ನು ಹೊಂದಿರುವರು. ಹುಟ್ಟಿನಿಂದ ಬರುವ ವರ್ಣ ನೈಮಿತ್ತಿಕವಾದದ್ದು. ಸ್ವರೂಪದ ವರ್ಣಕ್ಕೇ ಪ್ರಾಧಾನ್ಯ.

ಈ ನಾಲ್ಕು ವರ್ಣದವರೂ ಮುಕ್ತಿಯೋಗ್ಯರೇ. ಕೆಲವೊಮ್ಮೆ ಬ್ರಾಹ್ಮಣದೇಹದಲ್ಲಿ ಶೂದ್ರಜೀವ ಇರಬಹುದು; ಶೂದ್ರದೇಹದಲ್ಲಿ ಬ್ರಾಹ್ಮಣಜೀವ ಇರಬಹುದು. ಹಾಗೆಯೇ ಇತರ ವರ್ಣಗಳಲ್ಲೂ. ಆಯಾ ವರ್ಣಗಳ ವಿಭಾಗ ಕರ್ಮಾಚರಣೆಯ ಸೌಕರ್ಯಕ್ಕೆಂದು ಮಾತ್ರ. ಮೋಕ್ಷಕ್ಕೆ ಅರ್ಹತೆ ನೀಡುವುದು ತತ್ತ್ವಜ್ಞಾನವೇ ಹೊರತು, ಕೇವಲ ಕರ್ಮಾಚರಣೆಯಲ್ಲ.

ಮನ್ನಣೆ ಮೊದಲಾದವುಗಳಿಗೆ ಸ್ವರೂಪವರ್ಣವೇ ಪ್ರಧಾನ; ಕರ್ಮಾಚರಣೆಗೆ ಮಾತ್ರ ಬಾಹ್ಯವರ್ಣವೇ ಮುಖ್ಯ. ವಿದುರನು ಶೂದ್ರನಾಗಿದ್ದೂ ಭೀಷ್ಮಾದಿಗಳಿಗಿಂತ ಶ್ರೀಕೃಷ್ಣನಿಗೆ ಹೆಚ್ಚು ಪ್ರಿಯನೆನಿಸಿದ. ಅದಕ್ಕೆ ಅವನ ಸ್ವರೂಪಸಾಧನೆಯೇ ಮುಖ್ಯಕಾರಣ[೩].

---

೧. ಪರಮ ಸತ್ಪುರುಷಾರ್ಥ ರೂಪನು ಹರಿಯು ಲೋಕಕೆ ಎಂದು ಪರಮಾ;
ದರದಿ ಸದುಪಾಸನೆಯ ಮಾಳ್ಪರಿಗಿತ್ತಪನು ತನ್ನ।
ಮರೆದು ಧರ್ಮಾರ್ಥಗಳ ಕಾಮಿಸುವರಿಗೆ ನಗುತತಿ ಶೀಘ್ರದಿಂದಲಿ
ಸುರಪತನಯ ಸುಯೋಧನರಿಗಿತ್ತಂತೆ ಕೊಡುತಿಪ್ಪ॥ -ಹರಿಕಥಾಮೃತಸಾರ(೨/೭)

೨. ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ।
ತಸ್ಯ ಕರ್ತಾರಮಪಿ ಮಾಂ ವಿದ್ಧ್ಯಕರ್ತಾರಮವ್ಯಯಮ್ -ಗೀತಾ (೪/೧೩)

೩. 'ಸ್ವಾಭಾವಿಕೋ ಬ್ರಾಹ್ಮಣಾದಿಃ ಶಮಾದ್ಯೈರೇವ ಭಿದ್ಯತೇ।

"ಭಗವಂತನಿಗೆ ಕರ್ಮಗಳ ಲೇಪವಿಲ್ಲ; ಕರ್ಮಫಲದಲ್ಲಿ ಅವನಿಗೆ ಅಪೇಕ್ಷೆಯೂ ಇಲ್ಲ, ಅವನು ಪರಿಪೂರ್ಣ". ಹೀಗೆಂದು ತಿಳಿಯುವವನೂ ಸಹ ಕರ್ಮಲೇಪಕ್ಕೆ ಒಳಗಾಗನು[೧].

ಹಿಂದೆ ಸಿದ್ಧಿ ಪಡೆದ ಎಲ್ಲ ಮುಮುಕ್ಷುಗಳೂ ಜ್ಞಾನಪೂರ್ವಕವಾಗಿ ಕರ್ಮಾಚರಣೆ ಮಾಡಿದವರೇ[೨]. ಕರ್ಮ, ಅಕರ್ಮ ಮತ್ತು ವಿಕರ್ಮ ಎಂಬ ಮೂರರ ಸ್ವರೂಪ ತುಂಬ ಜಟಿಲ. ಅವುಗಳನ್ನು ಸರಿಯಾಗಿ ತಿಳಿಯಲು ಜ್ಞಾನಿಗಳಿಗೂ ಆಗದು. '**ಗಹನಾ ಕರ್ಮಣೋ ಗತಿಃ**'.

ಕರ್ಮವಿರಲಿ,[೩] ಅಕರ್ಮವಿರಲಿ, ವಿಕರ್ಮವೇ ಆಗಲಿ, ಅವುಗಳಿಗೆಲ್ಲ ಮೂಲತಃ ಭಗವಂತನೇ ಮುಖ್ಯಕಾರಣ. 'ಜೀವನು ಮುಖ್ಯಕರ್ತೃವಲ್ಲ' ಎಂದು ಅರಿಯುವವನೇ ಮುಕ್ತಿ ಪಡೆಯುವ ಜ್ಞಾನಿ.

ಸಕಲಕಾರ್ಯಗಳನ್ನೂ ಫಲದ ಬಯಕೆಯನ್ನು ತೊರೆದು ಆಚರಿಸುವವನೇ ಪಂಡಿತ. ಅವನು ಎಂತಹ ಕರ್ಮಗಳಲ್ಲಿ ತೊಡಗಿದರೂ, ಅವುಗಳ ಬಂಧನಕ್ಕೆ ಒಳಪಡನು.

ದೊರೆತದ್ದರಲ್ಲಿ ಸಂತೃಪ್ತನಾಗುವವನು, (ಸುಖದುಃಖಾದಿ)ದ್ವಂದ್ವಗಳನ್ನು ಮೆಟ್ಟಿದ-ವನು, ಅಸೂಯೆಯನ್ನು ನೀಗಿದವನು, ಆಗುಹೋಗುಗಳನ್ನು ಸಮಭಾವದಿಂದ ಕಾಣುವವನು ಕರ್ಮ ಮಾಡಿದರೂ ಬಂಧನಕ್ಕೆ ಒಳಗಾಗನು.

ಫಲದ ಹಂಬಲವಿಲ್ಲದೆ, ದೇಹಾದಿಗಳ ಮೇಲೆ ಅಭಿಮಾನವನ್ನು ತೊರೆದು, ಬ್ರಹ್ಮ ಜ್ಞಾನದಲ್ಲಿ ಮನಸ್ಸನ್ನು ತೊಡಗಿಸಿ, ಭಗವತ್ಪ್ರೀತಿಗೆಂದು ಕರ್ಮವನ್ನು ಆಚರಿಸಿದವನಿಗೆ ಯಾವ ಕರ್ಮವೂ ಬಂಧಕವಾಗದು.

[೪]ಕೆಲವು ಯೋಗಿಗಳು ಭಗವದುಪಾಸನೆಯನ್ನೇ ಯಜ್ಞವೆಂದು ಭಾವಿಸುವರು. ಕೆಲವರು ಬ್ರಹ್ಮರೂಪದ ಅಗ್ನಿಯಲ್ಲಿ ಅಗ್ನಿಹೋತ್ರಾದಿಯಜ್ಞಗಳಿಂದ ಹೋಮಿಸುತ್ತಾ

---

ಯೋನಿಭೇದಕೃತೋ ಭೇದೋ ಜ್ಞೇಯ ಔಪಾಧಿಕಸ್ತ್ವಯಮ್ ।
ವಿಷ್ಣುಭಕ್ತಿಶ್ಚಾನುಗತಾ ಸರ್ವವರ್ಣೇಷು ವಿಶ್ರುತಿಮ್ ।
ಆರಭ್ಯ ಹೀಯತೇऽಥಾಪಿ ಭೇದಃ ಸ್ವಾಭಾವಿಕಸ್ತತಃ' ಇತಿ ನಾರದೀಯೇ ॥ - ಗೀ.ತಾ. (೪/೧೩)

೧. ನ ಮಾಂ ಕರ್ಮಾಣಿ ಲಿಂಪಂತಿ ನ ಮೇ ಕರ್ಮಫಲೇ ಸ್ಪೃಹಾ ।
ಇತಿ ಮಾಂ ಯೋऽಭಿಜಾನಾತಿ ಕರ್ಮಭಿರ್ನ ಸ ಬದ್ಧ್ಯತೇ ॥ - ಗೀತಾ (೪/೧೪)

೨. ಏವಂ ಜ್ಞಾತ್ವಾ ಕೃತಂ ಕರ್ಮ ಪೂರ್ವೈರಪಿ ಮುಮುಕ್ಷುಭಿಃ ।
ಕುರು ಕರ್ಮೈವ ತಸ್ಮಾತ್ ತ್ವಂ ಪೂರ್ವೈಃ ಪೂರ್ವತರಂ ಕೃತಮ್ -ಗೀತಾ (೪/೧೫)

೩. ಕರ್ಮಣೋ ಹ್ಯಪಿ ಬೋದ್ಧವ್ಯಂ ಬೋದ್ಧವ್ಯಂ ಚ ವಿಕರ್ಮಣಃ ।
ಅಕರ್ಮಣಶ್ಚ ಬೋದ್ಧವ್ಯಂ ಗಹನಾ ಕರ್ಮಣೋ ಗತಿಃ -ಗೀತಾ (೪/೧೭)

೪. ಬ್ರಹ್ಮಾರ್ಪಣಂ ಬ್ರಹ್ಮಹವಿರ್ಬ್ರಹ್ಮಾಗ್ನೌ ಬ್ರಹ್ಮಣಾ ಹುತಮ್ ।
ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮಸಮಾಧಿನಾ -ಗೀತಾ (೪/೨೪)

ಯಜ್ಞನಾಮಕ ಭಗವಂತನನ್ನು ಯಜ್ಞದಿಂದಲೇ ಆರಾಧಿಸುವರು. ಕೆಲವರು ಕಿವಿ ಮೊದಲಾದ ಇಂದ್ರಿಯಗಳನ್ನು ಇಂದ್ರಿಯನಿಗ್ರಹವೆಂಬ ಬೆಂಕಿಯಲ್ಲಿ ಹೋಮಿಸುವರು; ಕೆಲವರು ಶಬ್ದ ಮೊದಲಾದ ವಿಷಯಗಳನ್ನು ಇಂದ್ರಿಯಗಳೆಂಬ ಅಗ್ನಿಯಲ್ಲಿ ಹೋಮಿಸುವರು.

ಕೆಲವರುಎಲ್ಲಾಕರ್ಮೇಂದ್ರಿಯವ್ಯಾಪಾರಗಳನ್ನು ಪ್ರಾಣಾಪಾನಾದಿವ್ಯಾಪಾರಗಳನ್ನೂ ಬ್ರಹ್ಮಜ್ಞಾನದಿಂದ ಪ್ರಜ್ವಲಿಸುವ ಆತ್ಮಸಂಯಮವೆಂಬ ಅಗ್ನಿಯಲ್ಲಿ ಹೋಮಿಸುವರು. ಕೆಲವರು ದ್ರವ್ಯಗಳಿಂದ ಯಜ್ಞ ಮಾಡುವವರು; ಕೆಲವರು ಕೃಚ್ಛ್ರಚಾಂದ್ರಾಯಣಾದಿ ತಪಸ್ಸುಗಳನ್ನು ಭಗವದರ್ಪಣಬುದ್ಧಿಯಿಂದ ಆಚರಿಸುವರು; ಮತ್ತೆ ಕೆಲವರಿಗೆ ಧ್ಯಾನವೇ ಯಜ್ಞ; ಕೆಲವರು ವೇದಾಧ್ಯಯನಾದಿಗಳನ್ನು ಭಗವತ್ಪೂಜೆಯೆಂದು ಮಾಡುವರು. ಮತ್ತೆ ಕೆಲವರು ಶ್ರವಣಾದಿಜ್ಞಾನಯಜ್ಞದಲ್ಲಿ ನಿರತರು. ಇವರೆಲ್ಲರೂ ತೀಕ್ಷ್ಣವ್ರತರಾದ ಪ್ರಯತ್ನಶೀಲರು. ಕೆಲವರು ಪ್ರಾಣಾಯಾಮನಿರತರಾದ ಸಾಧಕರು. ಅವರು ಪ್ರಾಣಾಪಾನದ ಗತಿಯನ್ನು ತಡೆದು, ಅಪಾನದಲ್ಲಿ ಪ್ರಾಣನನ್ನೂ, ಪ್ರಾಣದಲ್ಲಿ ಅಪಾನನನ್ನೂ ಹೋಮಿಸುತ್ತಾ ಕುಂಭಕದಲ್ಲೇ ಇದ್ದುಬಿಡುವರು. ಕೆಲವರು ಪರಿಮಿತವಾದ ಆಹಾರವನ್ನು ಸ್ವೀಕರಿಸುತ್ತಾ ಇಂದ್ರಿಯ- ವೃತ್ತಿಗಳನ್ನು ಇಂದ್ರಿಯಗಳಲ್ಲಿ ಹೋಮಿಸುವರು. ಈ ಎಲ್ಲರೂ ಯಜ್ಞಗಳನ್ನು ಬಲ್ಲವರು ಮತ್ತು ಅಂತಹ ಯಜ್ಞಗಳ ಆಚರಣೆಯಿಂದ ಕರ್ಮದ ಬಂಧವನ್ನು ಕಳೆದುಕೊಂಡವರು.[೧]

ಯಜ್ಞ ಮಾಡಿದ ಮೇಲೆ ಉಳಿಯುವ ಅನ್ನ ಅಮೃತವೇ ಸರಿ. ಅದನ್ನು ತಿನ್ನುವವನಿಗೆ ಭಗವಂತ ಒಲಿಯುವನು. ಇಂತಹ ಯಜ್ಞದ ಪರಿಕಲ್ಪನೆಯಿಲ್ಲದ ಜನ ಈ ಲೋಕದಲ್ಲೂ ಸುಖಪಡರು; ಸ್ವರ್ಗಾದಿ ಉತ್ತಮಲೋಕಗಳಂತೂ ಅವರ ಪಾಲಿಗೆ ಕನಸೇ.

ಯಜ್ಞ ಯಾವುದೇ ಇರಲಿ, ಅದನ್ನು ಸಾಧಿಸಲು ಕರ್ಮವು ಬೇಕೇ ಬೇಕು. ಅಂತಹ ಯಜ್ಞಗಳಲ್ಲೂ ದ್ರವ್ಯಮಯಯಜ್ಞಕ್ಕಿಂತ ಜ್ಞಾನಯಜ್ಞ ಮಿಗಿಲಾದುದು.[೨] ಕರ್ಮ ಅತ್ಯಲ್ಪ- ವಿದ್ದರೂ, ಜ್ಞಾನದ ಹಿನ್ನೆಲೆಯಿದ್ದಲ್ಲಿ ಅದು ಪರಿಪೂರ್ಣವೇ ಸರಿ. ಜ್ಞಾನವಿಲ್ಲದ ಕರ್ಮ ಎಷ್ಟೇ ದೊಡ್ಡದಿದ್ದರೂ, ಅಪೂರ್ಣವೇ ಸರಿ. ಸುದಾಮನ ಒಂದು ಹಿಡಿ ಅವಲಕ್ಕಿಯ ಸಮರ್ಪಣದ ಕಾರ್ಯ ಇದಕ್ಕೆ ನಿದರ್ಶನ. ಮೇಲ್ನೋಟಕ್ಕೆ ಅವನ ಕಾರ್ಯ ಅಲ್ಪ, ಆದರೆ ಅದರ ಹಿನ್ನೆಲೆಯಾಗಿದ್ದ ತತ್ತ್ವಜ್ಞಾನ ಅಪಾರ. ಅದಕ್ಕೆಂದೇ ಅವನ ಕರ್ಮ ಪರಿಪೂರ್ಣ. ಅವನಿಗೆ ಲಭಿಸಿದ ಅಪಾರಸಿದ್ಧಿ ಅದರ ಫಲ. ಕರ್ಮದ ಪ್ರಮಾಣಕ್ಕಿಂತ ಅದರ ಗುಣಮಟ್ಟ ಪ್ರಧಾನ ಎಂಬುದು ಇದರ ಭಾವ.

ಧನ ಇದ್ದವನು ಧನ ನೀಡುವಂತೆ, ಜ್ಞಾನವಿದ್ದವನು ಜ್ಞಾನ ನೀಡುವನು. ಅದಕ್ಕೆಂದೇ

---

೧. ಸರ್ವೇಽಪ್ಯೇತೇ ಯಜ್ಞವಿದೋ ಯಜ್ಞಕ್ಷಪಿತಕಲ್ಮಷಾಃ –ಗೀತಾ (೪/೩೦)

೨. ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ –ಗೀತಾ (೪/೩೩.)

ಜ್ಞಾನಾರ್ಥಿಗಳೆಲ್ಲ ಜ್ಞಾನಿಗಳನ್ನು ಓಲೈಸಬೇಕು.

ಧನ ಪಡೆಯಲು ಮಾರ್ಗವಿರುವಂತೆ ಜ್ಞಾನ ಪಡೆಯಲೂ ಮಾರ್ಗ ಉಂಟು. ವಂದನೆ, ಯೋಗ್ಯ ರೀತಿಯ ಪ್ರಶ್ನೆ ಹಾಗೂ ಸೇವೆ – ಇವು ಜ್ಞಾನಪ್ರಾಪ್ತಿಯ ಸಾಧನಗಳು. ಈ ಮೂರಕ್ಕೆ ಮೆಚ್ಚುವ ಜ್ಞಾನಿಗಳು ಬ್ರಹ್ಮಜ್ಞಾನವನ್ನು ಉಪದೇಶಿಸುವರು.[೧]

ಎಂತಹ ಪಾಪಿಗಳಿಗಿಂತಲೂ ಮಿಗಿಲಾದ ಪರಮಪಾಪಿಯನ್ನೂ ತತ್ತ್ವಜ್ಞಾನ ಪಾವನ-ಗೊಳಿಸುವುದು.[೨] ದೊಡ್ಡ ಸಾಗರವನ್ನು ದೋಣಿಯಿಂದ ದಾಟಲು ಸಾಧ್ಯವಾಗುವಂತೆ, ಜ್ಞಾನವನ್ನು ನೆಚ್ಚಿದವನು ಪಾಪಗಳೆಂಬ ಸಮುದ್ರವನ್ನು ದಾಟಿಬಿಡಬಲ್ಲನು. ಉರಿಯುವ ಬೆಂಕಿ ಕಟ್ಟಿಗೆಯನ್ನು ಸುಟ್ಟುಹಾಕುವಂತೆ ಜ್ಞಾನಾಗ್ನಿ ಸಕಲದುಷ್ಕರ್ಮಗಳನ್ನು ಬೂದಿ ಮಾಡುವುದು.[೩]

ಜ್ಞಾನವು[೪] ಲಭಿಸುವುದು ಶ್ರದ್ಧೆ ಉಳ್ಳವನಿಗೆ; ಭಗವಂತನನ್ನು ನೆರೆನಂಬಿದವನಿಗೆ; ಇಂದ್ರಿಯಗಳ ಮೇಲೆ ಹತೋಟಿ ಸಾಧಿಸಿದವನಿಗೆ. ಜ್ಞಾನ ಸಿದ್ಧಿಸಿದ ಮೇಲೆ ಆನಂದದ ನೆಲೆಯಾದ ಮುಕ್ತಿಯು ಲಭಿಸುವುದು.

ಜ್ಞಾನವಿಲ್ಲದವನು, ಶ್ರದ್ಧೆಯಿಲ್ಲದವನು ಮತ್ತು ತತ್ತ್ವದಲ್ಲಿ ಸಂಶಯಪಡುವ ಸ್ವಭಾವದವನು ನಾಶ ಹೊಂದುವರು. ಅಂತಹ ಜನರಿಗೆ ಈ ಲೋಕವಾಗಲಿ, ಪರಲೋಕವಾಗಲಿ, ಸುಖಶಾಂತಿಗಳಾಗಲಿ ಎಂದೂ ಲಭಿಸವು[೫].

*****

---

೧. ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।
ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ – ಗೀತಾ (೪/೩೪)

೨. ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ ।
ತತ್ ಸ್ವಯಂ ಯೋಗಸಂಸಿದ್ಧಃ ಕಾಲೇನಾತ್ಮನಿ ವಿಂದತಿ ॥ – ಗೀತಾ (೪/೩೮)

೩. ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ ಕುರುತೇಽರ್ಜುನ ।
ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇ ತಥಾ ॥ – ಗೀತಾ (೪/೩೭)

೪. ಶ್ರದ್ಧಾವಾನ್ ಲಭತೇ ಜ್ಞಾನಂ ಮತ್ಪರಃ ಸಂಯತೇಂದ್ರಿಯಃ ।
ಜ್ಞಾನಂ ಲಬ್ಧ್ವಾ ಪರಾಂ ಶಾಂತಿಮಚಿರೇಣಾಧಿಗಚ್ಛತಿ ॥ – ಗೀತಾ (೪/೩೯)

೫. ಅಜ್ಞಶ್ಚಾಶ್ರದ್ದಧಾನಶ್ಚ ಸಂಶಯಾತ್ಮಾ ವಿನಶ್ಯತಿ ।
ನಾಯಂ ಲೋಕೋಽಸ್ತಿ ನ ಪರೋ ನ ಸುಖಂ ಸಂಶಯಾತ್ಮನಃ ॥ – ಗೀತಾ (೪/೪೦)

# ಅಧ್ಯಾಯ - ೫

## ಕರ್ಮಯೋಗ - ಕರ್ಮಸನ್ನ್ಯಾಸ[೧]

ಕರ್ಮಯೋಗ, ಕರ್ಮಸನ್ನ್ಯಾಸ – ಇವೆರಡು ಸೇರಿಯೇ ಮೋಕ್ಷದ ಸಾಧನ. ಅವುಗಳಲ್ಲಿ ಕರ್ಮಯೋಗವು ಕರ್ಮಸನ್ನ್ಯಾಸಕ್ಕಿಂತ ಮಿಗಿಲು. ಕರ್ಮಯೋಗ, ಕರ್ಮಸನ್ನ್ಯಾಸ ಎರಡೂ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಎರಡೂ ಸೇರಿಯೇ ಮೋಕ್ಷದ ಸಾಧನ. ನಾಣ್ಯದಲ್ಲಿ ಹಿಂಭಾಗ, ಮುಂಭಾಗವಿದ್ದಂತೆ ಇವುಗಳ ಈ ಭಾಗ. ನಾಣ್ಯದ ಮುಂಭಾಕ್ಕೆ ಪ್ರಾಶಸ್ತ್ಯವಿರುವಂತೆ, ಕರ್ಮಯೋಗಕ್ಕೇ ಈ ಎರಡರಲ್ಲಿ ಪ್ರಾಶಸ್ತ್ಯ

ಸಾಂಖ್ಯ ಮತ್ತು ಯೋಗಗಳನ್ನು ಬೇರೆ ಬೇರೆ ಎಂದು ಹೇಳುವವರು ಅವಿವೇಕಿಗಳು. ಆದರೆ ಪಂಡಿತರು ಹಾಗೆನ್ನರು.[೨] ಆ ಎರಡರಲ್ಲಿ ಒಂದನ್ನು ಸರಿಯಾಗಿ ಅವಲಂಬಿಸಿದವನು ಸಹ ಎರಡರ ಫಲವನ್ನು ಪಡೆದುಕೊಳ್ಳುವನು. ಅವೆರಡರ ಗುರಿ ಒಂದೇ ಎಂದು ತಿಳಿದವನೇ ನಿಜವಾದ ಜ್ಞಾನಿ. ಇಬ್ಬರಿಗೂ ಲಭಿಸುವ ಸದ್ಗತಿ ಒಂದೇ ಆಗಿದೆ.

ನೋಡುವಾಗ, ಕೇಳುವಾಗ, ಸ್ಪರ್ಶಿಸುವಾಗ, ಮೂಸುವಾಗ, ತಿನ್ನುವಾಗ, ಸಂಚರಿಸುವಾಗ, ಮಲಗುವಾಗ, ಉಸಿರಾಡುವಾಗ, ಮಾತನಾಡುವಾಗ, ವಿಸರ್ಜಿಸುವಾಗ, ಹಿಡಿದುಕೊಳ್ಳುವಾಗ, ರೆಪ್ಪೆಹಾಕುವಾಗ, ಇಂದ್ರಿಯಗಳು ಭಗವಂತನ ಪ್ರೇರಣೆಯಿಂದ ತಮ್ಮ ತಮ್ಮ ಕಾರ್ಯಗಳಲ್ಲಿ ತೊಡಗುವುವು; ಅವನೊಬ್ಬನೆ ಸ್ವತಂತ್ರನು. ನಾನು ಸ್ವತಂತ್ರವಾಗಿ ಏನನ್ನೂ ಮಾಡುತ್ತಿಲ್ಲ ಎಂಬುದಾಗಿ ತತ್ತ್ವ ತಿಳಿದ ಯೋಗಿಯು ಭಾವಿಸುತ್ತಿರಬೇಕು[೩].

ಭಗವಂತನು ನನ್ನ ಒಳಿತಿಗೋಸ್ಕರ, ನನ್ನಿಂದ ತನ್ನ ಪೂಜಾರೂಪವಾಗಿ ಕರ್ಮಗಳನ್ನು

---

೧. ತೃತೀಯಾಧ್ಯಾಯೋಕ್ತಮೇವ ಕರ್ಮಯೋಗಂ ಪ್ರಪಂಚಯತ್ಯನೇನಾಧ್ಯಾಯೇನ – 'ಯದೃಚ್ಛಾಲಾಭಸಂತುಷ್ಟ' ಇತ್ಯಾದಿ ಸಂನ್ಯಾಸಮ್, 'ಕುರು ಕರ್ಮೈವ' ಇತ್ಯಾದಿ ಕರ್ಮಯೋಗಂ ಚ ।
– ಗೀ. ಭಾ.

ಯೋಗಸಂನ್ಯಾಸಯೋರ್ಲಕ್ಷಣಂ ಸ್ಪಷ್ಟಯತ್ಯನೇನಾಧ್ಯಾಯೇನ । – ಗೀ. ತಾ.

೨. ಸಾಂಖ್ಯಯೋಗೌ ಪೃಥಗ್ಬಾಲಾಃ ಪ್ರವದಂತಿ ನ ಪಂಡಿತಾಃ ।
ಏಕಮಪ್ಯಾಸ್ಥಿತಃ ಸಮ್ಯಗುಭಯೋರ್ವಿಂದತೇ ಫಲಮ್
ಯತ್ ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ಯೋಗೈರಪಿ ಗಮ್ಯತೇ ।
ಏಕಂ ಸಾಂಖ್ಯ ಯಂ ಚ ಯೋಗಂ ಚ ಯಃ ಪಶ್ಯತಿ ಸ ಪಶ್ಯತಿ –ಗೀತಾ (೫/೫)

೩. ನೈವ ಕಿಂಚಿತ್ ಕರೋಮೀತಿ ಯುಕ್ತೋ ಮನ್ಯೇತ ತತ್ತ್ವವಿತ್ ।
ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್ನಶ್ನನ್ ಗಚ್ಛನ್ ಸ್ವಪನ್ ಶ್ವಸನ್॥
ಪ್ರಲಪನ್ ವಿಸೃಜನ್ ಗೃಹ್ಣನ್ನುನ್ಮಿಷನ್ ನಿಮಿಷನ್ನಪಿ ।
ಇಂದ್ರಿಯಾಣೀಂದ್ರಿಯಾರ್ಥೇಷು ವರ್ತಂತ ಇತಿ ಧಾರಯನ್॥ – ಗೀತಾ (೫/೮,೯)

ಮಾಡಿಸುತ್ತಿರುವನು ಎಂದು ಭಾವಿಸಿ, ಫಲದ ಹಂಬಲ ತೊರೆದು ಕರ್ಮಗಳನ್ನು ಮಾಡುವವನು ತಾವರೆ ಎಲೆಯು ನೀರಿನಿಂದ ಹೇಗೋ ಹಾಗೆ ಪಾಪಗಳ ಲೇಪಕ್ಕೆ ಒಳಗಾಗನು[1]. 'ಪ್ರತಿಯೊಂದು ಕಾರ್ಯದಲ್ಲೂ ಭಗವಂತನ ಚಿಂತನೆ ಅಗತ್ಯವೇ?'; ಈ ಪ್ರಶ್ನೆಗೆ 'ಪ್ರತಿಯೊಂದು ಕಾರ್ಯದಲ್ಲೂ ಉಸಿರಾಟ ಇರಲೇಬೇಕೆ?' ಎಂಬ ಪ್ರಶ್ನೆಯೇ ಉತ್ತರ. ಪ್ರತಿಯೊಂದು ಕಾರ್ಯದಲ್ಲೂ 'ಭಗವಂತನ ಚಿಂತನೆ ಸಾಧ್ಯವೆ?'; ಇದಕ್ಕೂ 'ಪ್ರತಿಕಾರ್ಯ ಮಾಡುವಾಗಲೂ ಉಸಿರಾಟ ಸಾಧ್ಯವೇ?' ಎಂಬ ಮತ್ತೊಂದು ಪ್ರಶ್ನೆಯೇ ಉತ್ತರ. ವಾಹನ ಚಾಲಕನು ಪ್ರತಿಕ್ಷಣದಲ್ಲೂ ಮಾರ್ಗವನ್ನು ಗಮನಿಸುತ್ತಿರಲೇ ಬೇಕೆ.

ವಾಹವನ್ನು ನಿಯಂತ್ರಿಸುತ್ತಿರಲೇ ಬೇಕೇ? ಎಂದು ಕೇಳುವುದು ಸಹ ಇದರಂತಹುದೇ. ಅವನು ಮಾರ್ಗವನ್ನು ಗಮನಿಸಲೂ ಬೇಕೂ, ವಾಹವನ್ನು ನಿಯಂತ್ರಿಸಲೂ ಬೇಕು. ಅದರಲ್ಲಿ ವಿಫಲನಾದ ಕ್ಷಣದಲ್ಲಿ ಅವನು ಅಪಘಾತಕ್ಕೆ ತುತ್ತಾಗುವುದು ನಿಶ್ಚಿತ. ಅದರಂತೆ ಪ್ರತಿಯೊಬ್ಬ ಸಾಧಕನೂ ತನ್ನ ದೇಹದ ಮೇಲೆ ನಿಯಂತ್ರಣನ್ನೂ ಮೋಕ್ಷ ಸಾಧನೆಯ ಗುರಿಯನ್ನು ಸದಾ ಗಮನಿಸುತ್ತಿರಬೇಕು, ಎಂಬುದನ್ನು ಅರ್ಥ ಮಾಡಿಕೊಳ್ಳಬೇಕು.

ಯೋಗಿಗಳಾದವರು ಸ್ವಾತಂತ್ರ್ಯಾಭಿಮಾನವನ್ನು ತೊರೆದು ದೇಹದಿಂದ, ಮನಸ್ಸಿನಿಂದ, ಬುದ್ಧಿಯಿಂದ ಮತ್ತು ಇಂದ್ರಿಯಗಳಿಂದ, ಬೇರಾವ ಫಲವನ್ನೂ ಬಯಸದೆ, ಮನಃಶುದ್ಧಿಗೋಸ್ಕರ ಕರ್ತವ್ಯವನ್ನು ನಿರ್ವಹಿಸುವರು.

ಭಗವದರ್ಪಣಬುದ್ಧಿಯಿಂದ ಕರ್ತವ್ಯಪರಾಯಣನಾದವನು ಕರ್ಮಫಲವನ್ನು ತ್ಯಜಿಸಿ, ಸ್ಥಿರವಾದ ಶಾಂತಿಯನ್ನು ಪಡೆಯುವನು. ಯೋಗಿಯಲ್ಲದವನು ಫಲಕ್ಕಾಗಿ ಹಾತೊರೆಯುತ್ತಾ ಸಂಸಾರದಲ್ಲಿ ಸಿಲುಕಿಕೊಳ್ಳುವನು.

ಜಿತೇಂದ್ರಿಯನಾದವನು ಭಗವಂತನೇ ತನ್ನ ಪೂಜಾರೂಪವಾದ ಕರ್ಮಗಳನ್ನು ನನ್ನ ಒಳಿತಿಗೋಸ್ಕರ ಮಾಡಿಸುತ್ತಿರುವನು ಎಂದು ಭಾವಿಸಿ, ಸರ್ವಕರ್ಮಗಳನ್ನು ಮಾನಸಿಕವಾಗಿ ಭಗವಂತನಿಗೆ ಒಪ್ಪಿಸಿ, ಒಂಭತ್ತು (ಕಣ್ಣು ಕಿವಿ, ಮೂಗುಗಳ ಆರು ದ್ವಾರಗಳು, ಬಾಯಿ, ಪಾಯು ಮತ್ತು ಉಪಸ್ಥ) ಬಾಗಿಲುಗಳ ಈ ದೇಹವೆಂಬ ಪಟ್ಟಣದಲ್ಲಿ ತಾನಾಗಿ ಏನನ್ನೂ ಮಾಡದೆ, ಮಾಡಿಸದೆ, (ಕರ್ಮಲೇಪವಿಲ್ಲದೆ) ಹಾಯಾಗಿರುವನು.[3]

ಅಸ್ವತಂತ್ರನಾದ ಜೀವನು ತಾನಾಗಿ ಕರ್ಮಗಳನ್ನು ಮಾಡಲಾರನು; ಇತರರಿಂದಲೂ

---

೧. ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿ ಯಃ।
ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ ॥ ಗೀತಾ (೫/೧೦)

೨. ಈಸಬೇಕು ಇದ್ದು ಜಯಿಸಬೇಕು । ಹೇಸಿಗೆ ಸಂಸಾರದಲ್ಲಿ ಆಸೆ ಲೇಸ ಮಾಡದ್ಹಾಂಗೆ-
ಶ್ರೀಪುರಂದರದಾಸರು

೩. ನವದ್ವಾರೇ ಪುರೇ ದೇಹೀ ನೈವ ಕುರ್ವನ್ನ ಕಾರಯನ್ -ಗೀತಾ (೫/೧೩)
ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ। -ಗೀತಾ (೫/೧೪)

ಮಾಡಿಸಲಾರನು. ತಾನಾಗಿ ಫಲವನ್ನು ಪಡೆಯನು; ಇತರರಿಗೂ ತಂದುಕೊಡಲಾರನು. ಭಗವಂತನು ಜೀವರಿಗೆ ಕ್ರಿಯಾಸ್ವಾತಂತ್ರ್ಯವನ್ನು ನೀಡಿಲ್ಲ; ಕರ್ಮಾಚರಣೆಯ ಸ್ವಾತಂತ್ರ್ಯವನ್ನೂ ಕೊಟ್ಟಿಲ್ಲ; ಫಲ ಪಡೆಯುವ ಸ್ವಾತಂತ್ರ್ಯವನ್ನೂ ನೀಡಿಲ್ಲ. ಸ್ವತಂತ್ರನಾದ ಪರಮಾತ್ಮನೇ ಎಲ್ಲವನ್ನೂ ಮಾಡಿಸುವನು; ಅವನು ಕರ್ತುಂ ಅಕರ್ತುಂ ಅನ್ಯಥಾ ಕರ್ತುಂ ಸಮರ್ಥನಾದವನು; ಅದರಂತೆ ಅಕರ್ತುಂ ಅಕಾರಯತುಂ ಅನ್ಯಥಾ ಕಾರಯತುಂ ಸಹ ಸಮರ್ಥನಾದವನು. ಎಂದರೆ ಅವನು ಮಾಡಬಲ್ಲ, ಮಾಡದೇ ಇರಬಲ್ಲ, ವಿರುದ್ಧ ರೀತಿಯಲ್ಲೂ ಮಾಡಬಲ್ಲ; ಮಾಡಿಸಬಲ್ಲ, ಮಾಡಿಸದೇ ಇರಬಲ್ಲ, ವಿರುದ್ಧ ರೀತಿಯಲ್ಲೂ ಮಾಡಿಸಬಲ್ಲ.

ಜೀವನು ತಾನಾಗಿ ಯಾರ ಪಾಪವನ್ನು ಕಳೆಯನು; ಯಾರ ಪುಣ್ಯವನ್ನೂ ಪಡೆಯನು ಭಗವಂತನಿಗೆ ಯಾವ ಕರ್ಮದಿಂದಲೂ ಪುಣ್ಯವಾಗಲಿ, ಪಾಪವಾಗಲಿ ಘಟಿಸದು. ಜೀವರ ಜ್ಞಾನವು ಅಜ್ಞಾನದಿಂದ ಮರೆಯಾಗಿದೆ. ಅದರಿಂದಾಗಿ ಅವರು ಭಗವಂತನನ್ನು ಅರಿಯದಾಗಿರುವರು.

ಶಾಸ್ತ್ರಜ್ಞಾನದಿಂದ ಅಜ್ಞಾನವನ್ನು ಕಳೆದುಕೊಂಡವರಿಗೆ ಬ್ರಹ್ಮಜ್ಞಾನವು ಲಭಿಸುವುದು. ಭಗವಂತನಲ್ಲೇ ಮನಸ್ಸಿಟ್ಟು ಅವನನ್ನೇ ಸ್ವಾಮಿಯೆಂದು ನಂಬಿದವರು, ಅವನನ್ನೇ ಸರ್ವೋತ್ತಮನೆಂದು ತಿಳಿದು ಆರಾಧಿಸುವವರು ಬ್ರಹ್ಮಜ್ಞಾನಿಗಳಾಗುವರು; ಸಕಲಪಾಪಗಳನ್ನೂ ಕಳೆದುಕೊಂಡು, ಮುಕ್ತಿ ಹೊಂದುವರು.

[೧]ವಿದ್ಯೆ, ವಿನಯಗಳಿಂದ ತುಂಬಿದ ಬ್ರಾಹ್ಮಣ, ಹಸು, ನಾಯಿ, ಶ್ವಪಾಕ – ಇವರಲ್ಲೆಲ್ಲ ಭಗವಂತನು ಒಂದೇ ತೆರನಾಗಿ ಅಂತರ್ಯಾಮಿಯಾಗಿ ನೆಲೆಸಿರುವನು ಎಂದು ಅರಿಯುವವರು ಪಂಡಿತರು. ಈ ರೀತಿ ಭಗವಂತನನ್ನು ಅರಿಯಬಲ್ಲವರು ಆ ಜನ್ಮದಲ್ಲೇ ಮುಕ್ತಿ ಕಾಣುವರು. ದೋಷರಹಿತನಾದ ಭಗವಂತನನ್ನು ತಿಳಿದವರೂ ಸಹ ದೋಷರಹಿತರೇ ಆಗುವರು.

ಬಲ್ಬ್, ಶೈತ್ಯಯಂತ್ರ, ಫ್ಯಾನ್, ಒಗೆಯುವ ಯಂತ್ರ, ಹೀಟರ್ ಮೊದಲಾದ ವಿಭಿನ್ನ ಉಪಕರಣಗಳಿದ್ದರೂ, ಅವುಗಳ ಸಾಮರ್ಥ್ಯ ಯಾವುದೇ ಬಗೆಯಾಗಿದ್ದರೂ, ಆ ವಿದ್ಯುದುಪಕರಣಗಳು ತಮ್ಮ ಸಾಮರ್ಥ್ಯಕ್ಕೆ ತಕ್ಕಂತೆ ಕಾರ್ಯ ನಿರ್ವಹಿಸಿದರೂ, ಅವೆಲ್ಲವುಗಳಲ್ಲಿ ಪ್ರವಹಿಸುವ ವಿದ್ಯುತ್ತಿನ ಸಾಮರ್ಥ್ಯ ಒಂದೇ ತೆರನಾಗಿರುವಂತೆ ಭಗವಂತ ಎಲ್ಲೇ ಇದ್ದರೂ, ಅವನ ಸಾಮರ್ಥ್ಯ ಒಂದೇ ತೆರನಾಗಿರುವುದು ಸಹಜ.

ಬ್ರಹ್ಮಜ್ಞಾನಿಯಾದವನು ಹಿತ ಒದಗಿದಾಗ ಹಿಗ್ಗಬಾರದು; ಅಹಿತ ಒದಗಿದಾಗ ಕಂಗೆಡಬಾರದು. ಸದಾ ಭಗವಂತನನ್ನೇ ಸ್ವತಂತ್ರನೆಂದು ಭಾವಿಸಿ, ಅವನ ಸ್ಮರಣೆಯಲ್ಲೇ

೧. ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ।
ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ –ಗೀತಾ (೫/೧೮)

ಮಗ್ನನಾಗಬೇಕು.

## ಭೌತಿಕಭೋಗವು ನಶ್ವರ

[೧]ವಿಷಯಗಳ ಸಂಪರ್ಕದಿಂದ ಲಭಿಸುವ ಭೋಗಗಳು ಶಾಶ್ವತವಲ್ಲ. ಅವುಗಳ **ಕೊ**ನೆಯಂತೂ ಗೋಳೇ. ತಗ್ಗಿನಲ್ಲಿ ನಿಂತ ನೀರು ಬಾವಿ ಎನ್ನಿಸದು. ಮೇಲಿಂದ ಬೀಳುವ **ನೀ**ರು ಮುಂದೆ ಒಣಗುವುದೂ ಸಹ. ಭೌತಿಕಸುಖ ಈ ಬಗೆಯದು. ಆದರೆ **ಆ**ಧ್ಯಾತ್ಮಿಕಸುಖ ಶಾಶ್ವತ. ಅದು ಬಾವಿಯ ನೀರಿನಂತೆ. ಅದರ ನೀರಿನ ಸೆಲೆ ಒಳಗಿಂದಲೇ **ಬ**ರುವಂತಹುದು. ಅದಕ್ಕೆಂದೇ ಅದು ಶಾಶ್ವತ. ಜ್ಞಾನಿಯಾದವನು ಭೌತಿಕಸುಖಗಳನ್ನು **ತ್ಯ**ಜಿಸಿ, ಸದಾ ಆಧ್ಯಾತ್ಮಿಕಸುಖದಲ್ಲೇ ಮಗ್ನನಾಗುವನು. **'ತದಲಂ ಬಹುಲೋಕ-ವಿಚಿಂತನಯಾ ಪ್ರವಣಂ ಕುರು ಮಾನಸಮೀಶಪದೇ'** ಎಂಬ ಆಚಾರ್ಯವಾಣಿ ಇದರ ವಿವರಣೆಯಾಗಿದೆ.

ಪ್ರಹ್ಲಾದನು ಸಂಪತ್ತು, ಕೈಹಿಡಿದವರು, ಪಶುಗಳು, ಮಕ್ಕಳುಮೊದಲಾದವರು, ಮನೆಗಳು, ಭೂಮಿ, ಆನೆ, ಕೋಶ, ಮೊದಲಾಗಿ ಎಲ್ಲವೂ ಸಹ ನಶ್ವರ. ಅಂತಹ ನಶ್ವರ ಪದಾರ್ಥಗಳಿಂದ ಶಾಶ್ವತ ಸುಖ ಸರ್ವಥಾ ಲಭಿಸದು ಎಂದು ನೀಡಿರುವ ಸಂದೇಶ ಇದರ ವಿವರಣೆಯಂತಿದೆ[೨].

*****

## ದೇಹ ತೊರೆಯುವ ಮುನ್ನ ಸಾಧನೆ ಪೂರೈಸಬೇಕು

[೩]ದೇಹವಳಿಯುವ ಮುನ್ನ ಕಾಮಕ್ರೋಧಗಳ ಸೆಳೆತವನ್ನು ಗೆಲ್ಲಬೇಕು. ಯೋಗಿ ಎನ್ನಿಸುವುದು ಆಗಲೇ. ಪರೀಕ್ಷಾಕೇಂದ್ರವನ್ನು ತೊರೆಯುವ ಮುನ್ನವೇ ಉತ್ತರ ಬರೆದು ಪೂರೈಸಬೇಕು. ಅನಂತರ ಬರೆಯುವ ಬರವಣಿಗೆಗೆ ಬೆಲೆ ಇರದು. ಜೀವನದ ಸಾಧನೆಯೂ ಇಂತಹುದೇ. ಜೀವನದ ಕೊನೆಯ ಕ್ಷಣದವರೆಗೂ ಸಾಧನೆಗೆ ಅವಕಾಶವಿದೆ; ಬೆಲೆ ಇದೆ. **'ಕೋಳು ಹೋಗದ ಮುನ್ನ ಕೋಟೆ ರಕ್ಷಿಸಬೇಕು'** ಎಂಬ ದಾಸವಾಣಿಯ ಭಾವವೂ ಇದೇ ಆಗಿದೆ.

*****

---

೧. ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವ ತೇ ।
ಆದ್ಯಂತವಂತಃ ಕೌಂತೇಯ ನ ತೇಷು ರಮತೇ ಬುಧಃ ॥ ಗೀತಾ (೫/೨೨)

೨. ರಾಯಃ ಕಲತ್ರಂ ಪಶವಃ ಸುತಾದಯಃ ಗೃಹಾ ಮಹೀ ಕುಂಜರಕೋಶಭೂತಯಃ ।
ಸರ್ವೇऽರ್ಥ ಕಾಮಾ ಕ್ಷಣಭಂಗುರಾಯುಷಃ ಕುರ್ವಂತಿ ಮರ್ತ್ಯಸ್ಯ ಕಿಯತ್ಪ್ರಿಯಂ ಚಲಾಃ ॥
ಶ್ರೀಮದ್ಭಾಗವತ (೭/೭/೪೦)

೩. ಶಕ್ನೋತೀಹೈವ ಯಃ ಸೋಢುಂ ಪ್ರಾಕ್ ಶರೀರವಿಮೋಕ್ಷಣಾತ್ ।
ಕಾಮಕ್ರೋಧೋದ್ಭವಂ ವೇಗಂ ಸ ಯುಕ್ತಃ ಸ ಸುಖೀ ನರಃ ॥ – ಗೀತಾ (೫/೨೩)

ದೋಷಗಳನ್ನು ಗೆದ್ದವರೂ, ವಿಶಾಲವಾದ ಮನಸ್ಸುಳ್ಳವರೂ, ಮನಸ್ಸಿನಲ್ಲಿ ಗೊಂದಲ ಕ್ಕೊಳಗಾಗದವರೂ, ಸಕಲಪ್ರಾಣಿಗಳಿಗೂ ಹಿತಬಯಸುವವರೂ ಭಗವಂತನ ಬಳಿಗೆ ತೆರಳುವರು. ಹಾಗೆ ಪ್ರಯತ್ನಶೀಲರಾಗಿ ಮನಸ್ಸನ್ನು ನಿಯಂತ್ರಿಸಿ, ಕಾಮ-ಕ್ರೋಧಗಳನ್ನು ನೀಗಿದ ಬ್ರಹ್ಮಜ್ಞಾನಿಗಳಿಗೆ ಪರಬ್ರಹ್ಮನು ಸದಾ ಗೋಚರಿಸುವನು.

ಮೋಕ್ಷವನ್ನು ಸಾಧಿಸಬಯಸುವವನು ಮನಸ್ಸುಬುದ್ಧಿಗಳನ್ನು ಭೌತಿಕವಿಷಯಗಳತ್ತ ಧಾವಿಸದಂತೆ ನಿಗ್ರಹಿಸಬೇಕು. ತನ್ನ ದೃಷ್ಟಿಯನ್ನು ಹುಬ್ಬುಗಳ ಮಧ್ಯೆಯಾಗಲಿ, ಮೂಗಿನ ತುದಿಯಲ್ಲಾಗಲಿ ಕೇಂದ್ರೀಕರಿಸಬೇಕು. ಪ್ರಾಣ, ಅಪಾನಗಳನ್ನು ಕುಂಭಕದಲ್ಲಿ ನಿಲ್ಲಿಸಬೇಕು. ರಾಗದ್ವೇಷಗಳನ್ನು ಮೆಟ್ಟಬೇಕು. ಹಾಗಿದ್ದಲ್ಲಿ ಅವನು ಮುಕ್ತನೇ ಸರಿ. ಭಗವಂತನನ್ನು ಯಜ್ಞ ಮತ್ತು ತಪಸ್ಸುಗಳ ಭೋಕ್ತಾರನೆಂದು, ಸರ್ವಲೋಕಗಳಿಗೂ ಮಹಾಸ್ವಾಮಿಯೆಂದೂ, ಸಮಸ್ತಪ್ರಾಣಿಗಳಿಗೂ ಹಿತೈಷಿಯೆಂದೂ ಸದಾ ಆರಾಧಿಸಬೇಕು.[೧]

*****

೧. ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ।
ನ ತು ಮಾಮಭಿಜಾನಂತಿ ತತ್ತ್ವೇನಾತಶ್ಚ್ಯವಂತಿ ತೇ॥ -ಗೀತಾ (೯/೨೪)

# ಅಧ್ಯಾಯ - ೬

## ಸನ್ನ್ಯಾಸಿ - ಯೋಗಿ

ಕರ್ಮಫಲಕ್ಕೆ ಹಂಬಲಿಸದೆ, ತನ್ನ ಕರ್ತವ್ಯವನ್ನು ನಿರ್ವಹಿಸುವವನೇ ನಿಜವಾದ ಸನ್ನ್ಯಾಸಿ ಹಾಗೂ ನಿಜವಾದ ಯೋಗಿ. ಸನ್ನ್ಯಾಸವೆಂದರೂ ಒಂದೇ; [1]ಯೋಗವೆಂದರೂ ಒಂದೇ. ಬಯಕೆ ತೊರೆಯದೆ ಕರ್ಮಾಚರಣೆಯಲ್ಲಿ ತೊಡಗುವ ಯಾವನೂ ಯೋಗಿ ಎನ್ನಿಸಲಾರ.[2]

ಭಗವತ್ಸಾಕ್ಷಾತ್ಕಾರ ಮಾಡುವವನು ಕರ್ಮಯೋಗವನ್ನು ನೆಚ್ಚಲೇಬೇಕು. ಕರ್ಮ-ವೆಂದರೆ ಅನೇಕತೆರನಾದ ಜನಗಳ ಸೇವೆ. ದೊಡ್ಡವರನ್ನು ಗೌರವದಿಂದ, ಸಮಾನರನ್ನು ಸ್ನೇಹದಿಂದ, ಕಿರಿಯರನ್ನು ವಾತ್ಸಲ್ಯದಿಂದ ಕಾಣದ ಯಾವನೂ ಯೋಗಿಯಾಗಲಾರ. ಸಕಲಪ್ರಾಣಿಗಳಲ್ಲೂ ದಯೆ ತೋರುವುದು ಸಹ ಭಗವಂತನ ಒಲುಮೆಗೆ ಪ್ರಮುಖಸಾಧನ. ಇವೆಲ್ಲ ಭಗವಂತನಿಗೆ ಸಲ್ಲಿಸುವ ತೆರಿಗೆ ಇದ್ದಂತೆ. ಭಗವಂತನನ್ನು ಸಾಕ್ಷಾತ್ಕರಿಸಿಕೊಂಡ ಮೇಲೆ ಮಾತ್ರ ಬೇಕಾದರೆ ಕೇವಲ ಧ್ಯಾನದಲ್ಲೇ ತೊಡಗಬಹುದು :

> 'ನಾನಾಜನಸ್ಯ ಶುಶ್ರೂಷಾ ಕರ್ಮಾಖ್ಯಾ ಕರವನ್ಮಿತೇಃ ।
> ಯೋಗಾರ್ಥಿನಾ ತು ಸಾ ಕಾರ್ಯಾ ಯೋಗಸ್ಥೇನ ಹರೌ ಸ್ಥಿತಿಃ ।
> ತೇನಾಪಿ ಸ್ವೋತ್ತಮಾನಾಂ ತು ಕಾರ್ಯಾಽನ್ಯೈರಖಿಲೇಷ್ವಪಿ ।
> ಶಕ್ತಿತಃ ಕರಣೀಯೇತಿ ವಿಶೇಷೋಽಸಿದ್ಧಸಿದ್ಧಯೋಃ ।
> ಪ್ರಾಪ್ತೋಪಾಯಸ್ತು ಸಿದ್ಧಃ ಸ್ಯಾತ್ ಪ್ರೇಪ್ಸುಃ ಸಾಧಕ ಉಚ್ಯತೇ ।
> ತಸ್ಯ ಪ್ರಾಣ್ಯುಪಕಾರೇಣ ಸಂತುಷ್ಟೋ ಭವತೀಶ್ವರಃ ।
> ಸಿದ್ಧೋಪಾಯೇನ ವಿಷ್ಣೋಸ್ತು ಧ್ಯಾನವ್ಯಾಖ್ಯಾರ್ಚನಾದಿಕಮ್ ।
> ಕಾರ್ಯಂ ನಾನ್ಯತ್ ತಸ್ಯ ತೇನ ತುಷ್ಟೋ ಭವತಿ ಕೇಶವಃ'[3]

ಸಾಮಾನ್ಯವಾಗಿ ಸನ್ನ್ಯಾಸಿ ಎಂದರೆ ಸಂಸಾರ ತೊರೆದವನು, ಅಗ್ನಿ ಮೊದಲಾದ-ವುಗಳನ್ನು ಬಿಟ್ಟವನು ಎಂಬ ಅರ್ಥ ಲೋಕದಲ್ಲಿ ಇದೆ. ಆದರೆ ನಿಜಾರ್ಥದ ಸನ್ನ್ಯಾಸ ಫಲಾಪೇಕ್ಷೆಯನ್ನು ತೊರೆಯುವುದರಲ್ಲಿದೆ, ಎಂಬುದ ಇಲ್ಲಿಯ ಮುಖ್ಯ ಸಂದೇಶ. ದೇಹಕ್ಕಿಂತ ಮನಸ್ಸಿಗೆ ಒದಗುವ ತ್ಯಾಗ ಬುದ್ಧಿ ನಿಜವಾದ ಸನ್ನ್ಯಾಸ ಎಂಬ ಉದಾತ್ತವಾದ ಪರಿಕಲ್ಪನೆ ಇಲ್ಲಿಯದು. ಇಂತಹ ಅನುಸಂಧಾನವಿರದ ಸನ್ನ್ಯಾಸಿ ಸಂಸಾರಿಗಿಂತ ಭಿನ್ನ ಎನ್ನಿಸನು. ಇದನ್ನು ಸಾಧಿಸಿದ್ದಲ್ಲಿ ಸಂಸಾರಿಯೂ ಸಹ ಸನ್ನ್ಯಾಸಿ ಎನ್ನಿಸಬಲ್ಲ.

---

೧. ಜ್ಞಾನಾಂತರಂಗಂ ಸಮಾಧಿಯೋಗಮಾಹಾನೇನಾಧ್ಯಾಯೇನ । — ಗೀ. ಭಾ.
ಧ್ಯಾನಮತ್ರೋಚ್ಯತೇ । — ಗೀ. ತಾ.

೨. ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ ।
ಸ ಸಂನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನ ಚಾಕ್ರಿಯಃ — ಗೀತಾ (೬/೧)

೩. ಗೀತಾತಾತ್ಪರ್ಯನಿರ್ಣಯ ೬/೩

ಅಪ್ರಯತ್ನವಾಗಿ ಭೌತಿಕವಿಷಯಗಳಲ್ಲಿ ನಂಟು ನೀಗುವಂತಾದರೆ, ಯೋಗ ಸಿದ್ಧಿಸಿದೆ ಎಂದರ್ಥ. ಯಾವುದರಲ್ಲೂ ಮಮಕಾರವನ್ನು ಬೆಳೆಸಿಕೊಳ್ಳದೆ, ಎಲ್ಲವನ್ನೂ ಭಗವದಧೀನವೆಂದು ಭಾವಿಸುವವನು ಯೋಗಾರೂಢನೆನ್ನಿಸುವನು.

**ಉದ್ಧರೇದಾತ್ಮನಾಽಽತ್ಮಾನಂ ನಾತ್ಮಾನಮವಸಾದಯೇತ್ ।**
**ಆತ್ಮೈವ ಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ ॥ (೬/೫)**
**ಬಂಧುರಾತ್ಮಾಽಽತ್ಮನಸ್ತಸ್ಯ ಯೇನಾತ್ಮೈವಾತ್ಮನಾ ಜಿತಃ ।**
**ಅನಾತ್ಮನಸ್ತು ಶತ್ರುತ್ವೇ ವರ್ತೇತಾತ್ಮೈವ ಶತ್ರುವತ್ ॥ (೬/೬)**

ಜೀವನು ತನ್ನನ್ನು ತನ್ನ ಮನಸ್ಸಿನಿಂದಲೇ ಉದ್ಧರಿಸಿಕೊಳ್ಳಬೇಕು. ಎಂದೂ ತನ್ನನ್ನು ಸಂಕಟಕ್ಕೀಡುಮಾಡಿಕೊಳ್ಳಬಾರದು. ಜೀವನಿಗೆ ಮನಸ್ಸೇ ಬಂಧು; ಅವನಿಗೆ ಶತ್ರುವೂ ಅದೇ. ಮನಸ್ಸು ಗೆದ್ದವನಿಗೆ ಅದು ಅವನ ಬಂಧು; ಗೆಲ್ಲದವನಿಗೆ ಅದೇ ಅವನ ಶತ್ರು.

ಮನಸ್ಸಿಂದ ಉದ್ಧಾರವೆಂದರೆ ಮನೋಭಿಮಾನಿಯಾದ ರುದ್ರದೇವರಿಂದ ಉದ್ಧಾರವೆಂದರ್ಥ. ಅವರು ಒಲಿದರೆ ಬಂಧು; ಮುನಿದರೆ ಶತ್ರು. ಪರೀಕ್ಷಿದ್ರಾಜನನ್ನು ಬ್ರಹ್ಮಶಿರೋಸ್ತ್ರ ಹಿಡಿದು ಶತ್ರುವಿನಂತೆ ಕೊಲ್ಲಬಂದ ಅಶ್ವತ್ಥಾಮರು ಶಿವನ ಅವತಾರ. ಅದೇ ಪರೀಕ್ಷಿದ್ರಾಜನನ್ನು ಬಂಧುವಿನಂತೆ ಭಾಗವತ ಹಿಡಿದು ಉಳಿಸಬಂದ ಶುಕಮುನಿಗಳೂ ಶಿವನ ಅವತಾರ. ಅಶ್ವತ್ಥಾಮರು ದುರ್ಯೋಧನನ ಮಾತು ಕೇಳಿ ಅವನನ್ನು ಕೊಲ್ಲಲೆಂದು ಮುನಿದು ಬಂದಿದ್ದರೆ, ಶುಕಮುನಿಗಳು ವೇದವ್ಯಾಸರಿಂದ ಭಾಗವತವನ್ನು ಕೇಳಿ ಅವನಿಗೆ ಒಲಿದು ಬಂದಿದ್ದರು. ಮನಸ್ಸು ಮುನಿಯುವುದು, ಒಲಿಯುವುದು ಎಂಬುದರ ಭಾವ ಇದೇ. ಪರೀಕ್ಷಿದ್ರಾಜ ಅಳಿಯದೆ, ಉಳಿದದ್ದರ ಮರ್ಮವೂ ಇದೇ.

ಮನಸ್ಸಿನಿಂದ ಉದ್ಧಾರವೆಂದರೆ ಮನಸ್ಸು ಮೊದಲಾದ ಸಕಲ ಇಂದ್ರಿಯಗಳ ನಿಯಾಮಕನಾದ ಭಗವಂತನಿಂದ ಉದ್ಧಾರವೆಂಬುದು ಮತ್ತೊಂದು ಅರ್ಥ. ಇಂದ್ರಿಯಗಳನ್ನು ಭಗವಂತನ ಒಲುಮೆಗೆ ಉಪಯೋಗಿಸಿದಾಗ ಅವನು ಮಿತ್ರ. ಅವುಗಳನ್ನು ಭೌತಿಕಸುಖಕ್ಕೆ ಉಪಯೋಗಿಸಿ ಅವನನ್ನು ಮರೆತಾಗ, ಅವನು ಅದರ ಶತ್ರು. ಆದ್ದರಿಂದ ಸದಾ ಮನಸ್ಸನ್ನು ಭಗವಂತನ ಕಡೆಗೆ ತೊಡಗಿಸಿ, ಅವನ ಕೃಪೆಯಿಂದ ಜೀವನವನ್ನು ಸಾರ್ಥಕಪಡಿಸಿಕೊಳ್ಳಬೇಕು ಎಂದರ್ಥ. '**ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ**' ಎಂಬ ಪುರಾಣವಾಕ್ಯದ ಭಾವವೂ ಇದೇ.

## ಮನೋನಿಗ್ರಹದ ಫಲ

ಮನಸ್ಸನ್ನು ಹತೋಟಿಯಲ್ಲಿರಿಸಿಕೊಂಡವನಿಗೆ ಭಗವಂತ ಒಲಿಯುವನು. ಶೀತ-ಉಷ್ಣ ಸುಖ-ದುಃಖ, ಮಾನ-ಅವಮಾನ ಮೊದಲಾದ ದ್ವಂದ್ವಗಳಿಂದ ವಿಕಾರ

ಹುಟ್ಟದು. ಮನಸ್ಸಿನಲ್ಲಿ ತೃಪ್ತಿ ನೆಲೆಸುವುದು. ಮಣ್ಣು ಕಲ್ಲು, ಚಿನ್ನ ಮೊದಲಾದ ಸಕಲಭೌತಿಕವಿಷಯಗಳಲ್ಲೂ ವೈರಾಗ್ಯ ಹುಟ್ಟಿ ಸಮಭಾವ ಮೂಡುವುದು[೧].

*****

## ಸಮಭಾವದ ಅರ್ಥ

ಯೋಗಿಯಾದವನು ಬಂಧುಮಿತ್ರರು, ಸಜ್ಜನದುರ್ಜನರು ಮೊದಲಾಗಿ ಸಕಲರಲ್ಲೂ ಸಮಬುದ್ಧಿಯನ್ನು ಬೆಳೆಸಿಕೊಳ್ಳುವನು.[೨] ಅಂತಹ ಸಮಬುದ್ಧಿಯೆಂದರೆ ಎಲ್ಲರನ್ನೂ ಒಂದೇ ತೆರನಾಗಿ ಕಾಣುವುದು ಎಂದು ಅರ್ಥವಲ್ಲ. ಬಂಧುಗಳನ್ನು ಬಂಧುಗಳನ್ನಾಗಿಯೂ, ಶತ್ರುಗಳನ್ನು ಶತ್ರುಗಳನ್ನಾಗಿಯೂ, ದುರ್ಜನರನ್ನು ದುರ್ಜನರನ್ನಾಗಿಯೂ ಕಾಣುವುದು ಎಂದರ್ಥ. ಇಲ್ಲವಾದಲ್ಲಿ ಅದು ವಿವೇಕದ ಬದಲು ಅವಿವೇಕವೇ ಆಗುವುದು. ಯೋಗ್ಯತೆಯನ್ನು ಗುರುತಿಸಿ, ಅದಕ್ಕೆ ತಕ್ಕಂತೆ ವರ್ತಿಸುವುದೇ ನಿಜವಾದ ಸಮಬುದ್ಧಿ ಎಂಬುದು ಗೀತೆಯ ಭಾವ :

**ಗುಣಾನುಸಾರಿಣೀಂ ಪೂಜಾಂ ಸಮಾಂ ದೃಷ್ಟಿಂ ಚ ಯೋ ನರಃ ।**
**ಸರ್ವಭೂತೇಷು ಕುರುತೇ ತಸ್ಯ ವಿಷ್ಣುಃ ಪ್ರಸೀದತಿ ॥**[೩]

ನ್ಯಾಯಾಧೀಶನು ಸಮಭಾವದಿಂದ ತೀರ್ಪು ನೀಡುವುದು, ಪರೀಕ್ಷಕನು ಸಮಭಾವದಿಂದ ವಿದ್ಯಾರ್ಥಿಗಳಿಗೆ ಅಂಕ ನೀಡುವುದು ಈ ಸಮಭಾವದ ಹಿನ್ನೆಲೆಯಲ್ಲಿ ಅರ್ಥವತ್ತಾಗುವುದು. ಪಕ್ಷಪಾತವನ್ನು ತೊರೆದ ಧೋರಣೆ ಎಂಬುದು ಇದರ ಮುಖ್ಯ ಭಾವ. ಯೋಗ್ಯತೆಗೆ ಅನುಗುಣವಾಗಿ ವರ್ತಿಸುವುದು ಎಂಬುದು ಇದರ ಇನ್ನೊಂದು ಬಗೆಯ ಅರ್ಥ. ತನ್ನ ಬಳಿ ಬರುವ ರೋಗಿಗಳನ್ನು ವೈದ್ಯನು ಜಾತಿ, ಮತ, ಕುಲ, ಗೋತ್ರಗಳನ್ನು ಮೀರಿ ಚಿಕಿತ್ಸೆ ನೀಡುವುದು ನಿಷ್ಪಕ್ಷಪಾತ ಮನೋಭಾವದ ನಿದರ್ಶನವಾದರೆ ರೋಗಿಗಳಿಗೆ ಇರುವ ರೋಗಕ್ಕೆ ಅನುಗುಣವಾಗಿ ಮಾತ್ರೆ, ಚುಚ್ಚುಮದ್ದು, ಶಸ್ತ್ರಚಿಕಿತ್ಸೆ ಮೊದಲಾದವುಗಳನ್ನು ನೀಡುವುದ ಸಮಭಾವದ ಇನ್ನೊಂದು ಬಗೆಯ ಅರ್ಥ. ಇದರಂತೆ ಭೋಜನಕ್ಕೆ ಕುಳಿತ ಜನಗಳಿಗೆ ಪಕ್ಷಪಾತವಿಲ್ಲದೇ ಬಡಿಸುವವನ ಒಂದು ಕರ್ತವ್ಯವಾದರೆ, ಭೋಜನ ಮಾಡುವವರಲ್ಲಿ ಮಕ್ಕಳು,

---

೧. ಜಿತಾತ್ಮನಃ ಪ್ರಶಾಂತಸ್ಯ ಪರಮಾತ್ಮಾ ಸಮಾಹಿತಃ ।
ಶೀತೋಷ್ಣಸುಖದುಃಖೇಷು ತಥಾ ಮಾನಾಪಮಾನಯೋಃ ॥
ಜ್ಞಾನವಿಜ್ಞಾನತೃಪ್ತಾತ್ಮಾ ಕೂಟಸ್ಥೋ ವಿಜಿತೇಂದ್ರಿಯಃ ।
ಯುಕ್ತ ಇತ್ಯುಚ್ಯತೇ ಯೋಗೀ ಸಮಲೋಷ್ಟಾಶ್ಮಕಾಂಚನಃ ॥ - ಗೀತಾ (೬/೭,೮)

೨. ಸುಹೃನ್ಮಿತ್ರಾರ್ಯುದಾಸೀನಮಧ್ಯಸ್ಥದ್ವೇಷ್ಯಬಂಧುಷು ।
ಸಾಧುಷ್ವಪಿ ಚ ಪಾಪೇಷು ಸಮಬುದ್ಧಿರ್ವಿಶಿಷ್ಯತೇ -ಗೀತಾ (೬/೯)

೩. ಗೀತಾಭಾಷ್ಯ ೬/೯

ಹಿರಿಯರು, ರೋಗಿಗಳು ಮೊದಲಾದವರಿಗೆ ಅವರವರ ಅಪೇಕ್ಷೆ ಅರ್ಹತೆಗಳಿಗೆ ತಕ್ಕಂತೆ ಬಡಿಸುವುದು ಎಂಬುದು ಮತ್ತೊಂದು ಬಗೆಯ ಕರ್ತವ್ಯ. ಈ ಹಿನ್ನೆಲೆಯಲ್ಲಿ ಗೀತೆಯಲ್ಲಿ ನಿರೂಪಿತವಾಗಿರುವ ಸಮಭಾವ ಆತ್ಮೋದ್ಧಾರಕ್ಕೆ ಮಾತ್ರವಲ್ಲದೇ ಸಮಾಜದ ಪ್ರಗತಿಗೂ ಸಹ ಕಾರಣವಾಗುವ ಉದಾತ್ತ ತತ್ತ್ವವಾಗಿದೆ.

## ಧ್ಯಾನಯೋಗ

ಯೋಗಸಾಧನೆಯನ್ನು ಬಯಸುವವನು ಏಕಾಂತದಲ್ಲಿರುವುದನ್ನು ಅಭ್ಯಾಸ-ಮಾಡಬೇಕು. ದೇಹಮನಸ್ಸುಗಳನ್ನು ನಿಗ್ರಹಿಸಿ, ದುರಾಸೆಗೊಳಗಾಗದೆ, ಸಂತೃಪ್ತಿ-ಯಿಂದಿರುವುದನ್ನು ಕಲಿಯಬೇಕು. ಮತ್ತೊಬ್ಬರಿಗೆ ಕೈಯೊಡ್ಡದೆ ಬದುಕುವ ಕಲೆಯನ್ನು ರೂಢಿಸಿಕೊಳ್ಳಬೇಕು. ನಿರ್ಮಲವಾದ ಸ್ಥಳದಲ್ಲಿ ವಸ್ತ್ರ ಕೃಷ್ಣಾಜಿನ, ದರ್ಭೆಗಳ ಮೇಲೆ ಎತ್ತರವಲ್ಲದ, ತಗ್ಗೂ ಎನ್ನಿಸದ ಆಸನವನ್ನು ಅಣಿಮಾಡಿಕೊಳ್ಳಬೇಕು.[೧] ಅದರ ಮೇಲೆ ವೀರಾಸನ, ಸ್ವಸ್ತಿಕಾಸನ ಅಥವಾ ಪದ್ಮಾಸನದಲ್ಲಿ ಕುಳಿತು, ಮೈಮನಸ್ಸುಗಳ ಕ್ರಿಯೆಗಳ ಮೇಲೆ ಹಿಡಿತ ಸಾಧಿಸಬೇಕು. ಬೆನ್ನು ಕತ್ತುಗಳನ್ನು ನೆಟ್ಟಗೆ ನಿಲ್ಲಿಸಿ, ಅಲುಗದೆ ಸ್ಥಿರವಾಗಿ ಕುಳಿತುಕೊಳ್ಳಬೇಕು. ಬೇರೆಡೆ ನೋಡದೆ, ತನ್ನ ಮೂಗಿನತುದಿಯಲ್ಲೇ ದೃಷ್ಟಿಯನ್ನು ಕೇಂದ್ರೀಕರಿಸಬೇಕು. ಬ್ರಹ್ಮಚರ್ಯದಿಂದಿದ್ದು ಭಗವಂತನನ್ನೇ ಸರ್ವೋತ್ತಮನೆಂದು ನೆರೆನಂಬಿ ಧ್ಯಾನಿಸತೊಡಗಬೇಕು.[೨]

ಧ್ಯಾನಕ್ಕೆ ಆಸನವು ವಿಹಿತ. ಅಂತಹ ಆಸನವೂ ಸಹ ವಸ್ತ್ರ ದರ್ಭೆ ಮೊದಲಾಗಿ ಒಂದು ಬಗೆಯಾದರೆ, ಪದ್ಮಾಸನ, ವೀರಾಸನ ಮೊದಲಾಗಿ ಮತ್ತೊಂದು ಬಗೆ. ಮೊದಲನೆಯದು ಆಸರೆಯಾಗುವ ಆಸನದ ವಸ್ತುವಾದರೆ, ಎರಡನೆಯದು ಆಸನದ ಭಂಗಿಯಾಗುವುದು. ಎರಡೂ ಸಹ ಧ್ಯಾನಕ್ಕೆ ಅಗತ್ಯ.

ಧ್ಯಾನಕ್ಕೆ ಅರ್ಹವೆನ್ನಿಸುವ ಸ್ಥಾನವೂ ಸಹ ನಿರ್ಮಲವಾಗಿರಬೇಕು. ಬೆಟ್ಟದ ತುದಿ, ನದಿ ತೀರ ಮೊದಲಾದವುಗಳು ಅಂತಹ ವಿಹಿತ ಸ್ಥಳಗಳಾಗಿವೆ. ಅವುಗಳಲ್ಲಿ ತನ್ನ ಮನಸ್ಸಿಗೆ

---

೧. ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ।
ನಾತ್ಯುಚ್ಛ್ರಿತಂ ನಾತಿನೀಚಂ ಚೇಲಾಜಿನಕುಶೋತ್ತರಮ್ -ಗೀತಾ (೬/೧೧)

೨. ತತ್ರೈಕಾಗ್ರಂ ಮನಃ ಕೃತ್ವಾ ಯತಚಿತ್ತೇಂದ್ರಿಯಕ್ರಿಯಃ।
ಉಪವಿಶ್ಯಾಸನೇ ಯುಂಜ್ಯಾದ್ಯೋಗಮಾತ್ಮವಿಶುದ್ಧಯೇ ॥
ಸಮಂ ಕಾಯಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ।
ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ॥
ಪ್ರಶಾಂತಾತ್ಮಾ ವಿಗತಭೀರ್ಬ್ರಹ್ಮಚಾರಿವ್ರತೇ ಸ್ಥಿತಃ।
ಮನಃ ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ ॥ - ಗೀತಾ (೬/೧೨-೧೪)

ಹಿತವೆನ್ನಿಸುವ ಯಾವ ಸ್ಥಳವಾದರೂ ಸರಿಯೆ. ಮನಸ್ಸಿನ ಉದ್ವೇಗಕ್ಕೆ ಕಾರಣವಾಗುವಂತಹ ಪರಿಸರವು ಮಾತ್ರ ಧ್ಯಾನಕ್ಕೆ ಸರ್ವಥಾ ಯೋಗ್ಯವೆನ್ನಿಸದು.

*****

ಹಾಗೆ ಧ್ಯಾನಕ್ಕೆ ಕುಳಿತವನು ಭೋಗೇಚ್ಛೆಯನ್ನು ಸಂಪೂರ್ಣವಾಗಿ ತೊರೆಯಬೇಕು. ಇಂದ್ರಿಯಗಳನ್ನೆಲ್ಲ ವಶಕ್ಕೆ ತಂದುಕೊಳ್ಳಬೇಕು. ಮನಸ್ಸನ್ನು ವಿಷಯಗಳತ್ತ ಧಾವಿಸದಂತೆ ನಿಯಂತ್ರಿಸಿ, ಅದನ್ನು ಭಗವಂತನಲ್ಲೇ ನೆಲೆಗೊಳಿಸಬೇಕು. ಬೇರಾವ ವಸ್ತುವನ್ನೂ ಚಿಂತಿಸಬಾರದು. ಮನಸ್ಸು ಬೇರೆಡೆ ಹರಿದಂತೆಲ್ಲ ಅದನ್ನು ಅತ್ತಣಿಂದ ನಿಯಂತ್ರಿಸಿ, ಭಗವಂತನತ್ತಲೇ ಹಾಯಿಸಬೇಕು.

ಹೀಗೆ ಸದಾ ಭಗವಂತನನ್ನು ಧ್ಯಾನಿಸುವ ಯೋಗಿಯು ದೋಷದಿಂದ ಬಿಡುಗಡೆ ಹೊಂದುವನು. ಭಗವತ್ಸಂಪರ್ಕದಿಂದಾಗಿ ಅಭಿವ್ಯಕ್ತವಾಗುವ ಪರಮಸುಖವನ್ನು ಅನುಭವಿಸತೊಡಗುವನು.[೧]

## ಧ್ಯಾನದ ಫಲ

ಹೀಗೆ ಭಗವದ್ಧ್ಯಾನವನ್ನು ಸಾಧಿಸಿದಲ್ಲಿ ದೊರೆಯುವ ಸುಖ ಅನುಪಮವಾದದ್ದು. ದೇಹ ತೊರೆದಾದ ಮೇಲೆ ಸಾಧಿಸುವ ಅಲೌಕಿಕಸುಖವೇ ಅದಕ್ಕೆ ಸಾಟಿ. ಈ ಹಂತದಲ್ಲಿ ಎಲ್ಲ ಪ್ರಾಣಿಗಳಲ್ಲೂ ಭಗವಂತನು ನೆಲೆಸಿರುವುದು ಗೋಚರವಾಗುವುದು. ಭಗವಂತನು ಎಲ್ಲೆಡೆಯೂ ಒಂದೇ ತೆರನಾಗಿ ನೆಲೆಸಿರುವ ಹಿರಿಮೆಯೂ ತಿಳಿಯುವುದು. ಹೀಗೆ ಭಗವಂತನನ್ನು ಸಾಕ್ಷಾತ್ಕರಿಸಿಕೊಂಡವನಿಗೆ ಭಗವಂತ ಎಂದೂ ದೂರವಾಗಲಾರ; ಸದಾ ಅವನ ಯೋಗಕ್ಷೇಮವನ್ನು ವಹಿಸಿ, ಪಾಲಿಸುವನು. ಅವನು ಹೇಗೆ ಬದುಕಿದರೂ, ಭಗವಂತನನ್ನು ಹೊಂದುವುದು ನಿಶ್ಚಿತ. ಧ್ಯಾನವು ಮುಖ್ಯಾರ್ಥದಲ್ಲಿ ಸಾಧಕನ ಹೃದಯದಲ್ಲಿ ನೆಲೆಸಿರುವ ಭಗವಂತನೊಂದಿಗೆ ಸಂಪರ್ಕಕ್ಕೆ ವಿಹಿತವಾಗಿರುವ ಮುಖ್ಯ ಸಾಧನ. ತಿಳುವಳಿಕೆ ತಲೆಯಲ್ಲಿ, ಆಹಾರ ಉದರದಲ್ಲಿ ಹೇಗೋ ಹಾಗೆ ಧ್ಯಾನ ಹೃದಯದಲ್ಲಿ ನಡೆಯಬೇಕು. ದೇಹವು ದೇಗುಲವಾದರೆ, ಹೃದಯ ಗರ್ಭಗುಡಿಯಿದ್ದಂತೆ. ಅಲ್ಲಿ ನೆಲೆಸಿದ ಮೂರ್ತಿಯಂತೆ ಬಿಂಬ ರೂಪಿಯಾದ ಭಗವಂತನ ಚಿಂತನೆ. ದೇವಸ್ಥಾನ, ತೀರ್ಥಯಾತ್ರೆ ಮೊದಲಾದವುಗಳೆಲ್ಲ ಈ ಧ್ಯಾನದ ಸಾಧನೆಗೆ ಉಪಯುಕ್ತವೆನ್ನಿಸುವಂತಹ ಸಾಧನ ಮಾರ್ಗ ಎಂದು ತಿಳಿಯಬೇಕು.

*****

---

೧. ಸುಖಮಾತ್ಯಂತಿಕಂ ಯತ್ ತದ್ಬುದ್ಧಿಗ್ರಾಹ್ಯಮತೀಂದ್ರಿಯಮ್ ।
ವೇತ್ತಿ ಯತ್ರ ನ ಚೈವಾಯಂ ಸ್ಥಿತಶ್ಚಲತಿ ತತ್ತ್ವತಃ –ಗೀತಾ (೬/೨೧)

## ಧ್ಯಾನಕ್ಕೆ ಅರ್ಹತೆ

ಧ್ಯಾನದ ಸಿದ್ಧಿಯನ್ನು ಬಯಸುವವನು ಮಿತಿಮೀರಿ ತಿನ್ನುವುದನ್ನು ಬಿಡಬೇಕು. ಹಾಗೆಂದು ಏನನ್ನೂ ತಿನ್ನದೆಯೂಇರಕೂಡದು[೧]. ಹೆಚ್ಚು ತಿಂದರೆ ನಿದ್ರೆ, ಅನಾರೋಗ್ಯ; ಕಡಿಮೆ ತಿಂದರೆ ಅತೃಪ್ತಿ, ಅಸ್ಥಿರತೆ, ಅಶಕ್ತಿ. ಹಾಗೆಯೇ ನಿದ್ರೆಯ ವಿಚಾರದಲ್ಲೂ ಎಚ್ಚರ ವಹಿಸಬೇಕು. ಅತಿಯಾಗಿ ನಿದ್ರಿಸುವುದೂ, ಸ್ವಲ್ಪವೂ ನಿದ್ರಿಸದೇ ಇರುವುದು ಸಹ ಯೋಗಸಾಧನೆಗೆ ಅನುಕೂಲವೆನ್ನಿಸದು. ತಕ್ಕ ಆಹಾರದಂತೆ ತಕ್ಕ ವಿಹಾರವೂ ಯೋಗಸಿದ್ಧಿಗೆ ಸಾಧನ. ತನಗೆ ವಿಹಿತವಾದ ಸತ್ಕಾರ್ಯದಲ್ಲಿ ತೊಡಗಿಸಿಕೊಳ್ಳುವುದು ಸಹ ಅಪೇಕ್ಷಿತ. ಸಕಾಲದಲ್ಲಿ ನಿದ್ರೆ, ಎಚ್ಚರಗಳು ಧ್ಯಾನಯೋಗಕ್ಕೆ ಸಹಕಾರಿ. ಅಕಾಲಭೋಜನ, ಅಕಾಲನಿದ್ರೆ, ಅವಿಹಿತ ಚಟುವಟಿಕೆಗಳು ಸಹ ಯೋಗಸಿದ್ಧಿಗೆ ಪ್ರತಿಬಂಧಕ. ಇಂತಹ ಹಿನ್ನೆಲೆಯಲ್ಲಿ ಸಾಧಿಸುವ ಯೋಗ ಅತ್ಯಂತ ಸುಖಕರ. ಬುದ್ಧಿಗೆ ಮಾತ್ರ ನಿಲುಕುವಂತಹ, ಇಂದ್ರಿಯಗಳಿಗೆ ಅತೀತವೆನ್ನಿಸುವ ಪರಮಸುಖವನ್ನು ಯೋಗಿ ಪಡೆಯುವನು. ಆ ಹಂತದಲ್ಲಿ ಅವನಿಗೆ ಅದಕ್ಕಿಂತ ಮಿಗಿಲಾದ ಮತ್ತೊಂದು ಲಾಭ ಕಾಣದು. ಎಂತಹ ಸಂಕಟಪ್ರಸಂಗವೂ ಅವನನ್ನು ಕಂಗೆಡಿಸದು. ದುಃಖಪ್ರಸಂಗದಿಂದ ಸಂಪೂರ್ಣ ಬಿಡುಗಡೆ ಹೊಂದುವುದು ಇದರ ಮತ್ತೊಂದು ಸಿದ್ಧಿ.

ಆಹಾರವನು ವಾಹನಕ್ಕೆ ಇಂಧನವಿದ್ದಂತೆ ಸಂಚಾರಕ್ಕೆ ಅಗತ್ಯವಾದಷ್ಟೇ ಇಂಧನವನ್ನು ತುಂಬಿಸುವಂತೆ ಸಾಧನೆಗೆ ಅಗತ್ಯವಾದಷ್ಟು ಮಾತ್ರವೇ ಆಹಾರವನ್ನು ಸೇವಿಸಬೇಕು ಎಂಬುದು ಇಲ್ಲಿಯ ಭಾವ. ಆಹಾರದ ಪ್ರಮಾಣವು ಅಗತ್ಯಕ್ಕೆ ಅನುಗುಣವಾಗಿರುವುದು ಮುಖ್ಯವಾಗಿರುವಂತೆ ಅದರ ಗುಣಮಟ್ಟವೂ ಸಹ ಸಾಧನೆಗೆ ಅನುಗುಣವೇ ಆಗಿರಬೇಕು. ಪರಿಶುದ್ಧವಲ್ಲದ ಇಂಧನದಿಂದ ವಾಹನದ ಗುಣಮಟ್ಟ ಕುಸಿಯುವಂತೆ ವಿಹಿತವಲ್ಲದ ಆಹಾರದ ಸೇವನೆಯಿಂದ ಸಾಧನೆಯ ಗುಣಮಟ್ಟ ಕುಸಿಯುವುದು. ಪ್ರಮಾಣ ಹಾಗೂ ಗುಣಮಟ್ಟಗಳ ಪರಿಕಲ್ಪನೆ ಧ್ಯಾನಕ್ಕೆ ಅತ್ಯಗತ್ಯ ಎಂಬುದು ಇಲ್ಲಿಯ ಸಂದೇಶ.

*****

## ಯೋಗಸಿದ್ಧಿಯ ಲಕ್ಷಣ

ಮನಸ್ಸು ಪೂರ್ಣವಾಗಿ ಹಿಡಿತಕ್ಕೆ ಬರುವುದು ಅಪ್ರಯತ್ನವಾಗಿ ಸ್ಥಿರಗೊಳ್ಳುವುದು, ಭಗವಂತನಲ್ಲಿಯೇ ನೆಲೆಗೊಳ್ಳುವುದು, ಸಕಲಭೌತಿಕವಿಷಯಗಳ ಬಗ್ಗೆ ಆಸಕ್ತಿ

---

೧. ನಾತ್ಯಶ್ನತಸ್ತು ಯೋಗೋಽಸ್ತಿ ನಚೈಕಾಂತಮನಶ್ನತಃ।
ನ ಚಾತಿಸ್ವಪ್ನಶೀಲಸ್ಯ ಜಾಗ್ರತೋ ನೈವ ಚಾರ್ಜುನ॥
ಯುಕ್ತಾಹಾರವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು।
ಯುಕ್ತಸ್ವಪ್ನಾವಬೋಧಸ್ಯ ಯೋಗೋ ಭವತಿ ದುಃಖಹಾ॥ ಗೀತಾ (೬/೧೬,೧೭)

ಕುಗ್ಗುವುದು ಯೋಗಸಿದ್ಧಿಯ ಪ್ರಧಾನಲಕ್ಷಣ. ಹೆಚ್ಚು ಗಾಳಿ ಬೀಸದ ಸ್ಥಳದಲ್ಲಿ ಹೊಯ್ದಾಡದ ದೀಪದಂತೆ ಯೋಗಿಯ ಮನಸ್ಸು ಭಗವಂತನಲ್ಲಿ ಸ್ಥಿರಗೊಳ್ಳುವುದು. ಮನಸ್ಸು ಹೊಯ್ದಾಟದಿಂದ ದೂರಾಗಿ ಭಗವತತ್ತ್ವದ ಚಿಂತನೆಯಲ್ಲಿ ತಲ್ಲೀನವಾಗುವುದು ಈ ಧ್ಯಾನ ಸಿದ್ಧಿಯ ಮುಖ್ಯ ಲಕ್ಷಣ.

## ಮನೋನಿಗ್ರಹದ ಉಪಾಯ

ಮನಸ್ಸು ಚಂಚಲ, ತುಂಬಾ ಶಕ್ತಿಶಾಲಿ. ಇಂದ್ರಿಯಗಳನ್ನು ಬಲವಂತವಾಗಿ ಸೆಳೆಯುವುದು ಅದರ ರೀತಿ.[೧] ಅದನ್ನು ನಿಗ್ರಹಿಸುವುದು ಗಾಳಿಯನ್ನು ಹಿಡಿದಿಟ್ಟುಕೊಳ್ಳುವಷ್ಟೇ ಕಠಿಣ ಎಂಬುದು ಅರ್ಜುನನ ಪ್ರಶ್ನೆ.

ಮನಸ್ಸು ಅತ್ಯಂತ ಚಂಚಲ, ವಶಕ್ಕೆ ಬರುವುದು ಕಠಿಣ ಎಂಬುದು ನಿಜ. ಆದರೆ ಅದು ಅಸಾಧ್ಯವೆಂಬುದು ಮಾತ್ರ ಸರಿಯಲ್ಲ. ಸತತ ಪ್ರಯತ್ನ ಹಾಗೂ ವಿಷಯಗಳ ಬಗ್ಗೆ ವಿರಕ್ತಿ ಇವುಗಳಿಂದ ಅದು ಹಿಡಿತಕ್ಕೆ ಬರುವುದು ನಿಶ್ಚಿತ ಎಂಬುದು ಕೃಷ್ಣನ ಉತ್ತರ.[೨]

ಅಭ್ಯಾಸವೆಂದರೆ ಪುನಃಪುನಃ ಪ್ರಯತ್ನ. ಶಾಸ್ತ್ರಗಳನ್ನು ಅಭ್ಯಾಸ ಮಾಡಿ, ಅದರ ತತ್ತ್ವಗಳನ್ನು ದೃಢವಾಗಿ ತಿಳಿಯುತ್ತಾ ಹೋಗುವುದು ಮನೋನಿಗ್ರಹದ ಒಂದು ಉಪಾಯವಾದರೆ, ಶಾಸ್ತ್ರತತ್ತ್ವದ ಹಿನ್ನೆಲೆಯಲ್ಲಿ ಭೌತಿಕವಸ್ತುಗಳ ಇತಿಮಿತಿಗಳನ್ನು ಅರ್ಥ ಮಾಡಿಕೊಂಡು, ಅವುಗಳ ಬಗ್ಗೆ ಆಸಕ್ತಿಯನ್ನು ತೊರೆಯುವುದು ಮತ್ತೊಂದು ಉಪಾಯ. ವೈರಾಗ್ಯವೆಂದರೆ ಇದೇ. ಶಾಸ್ತ್ರಾಭ್ಯಾಸದ ಮೂಲಕ ಮುಖ್ಯಪ್ರಾಣನ ಅನುಗ್ರಹವನ್ನೂ, ವೈರಾಗ್ಯದ ಮೂಲಕ ಶಿವನ ಅನುಗ್ರಹವನ್ನೂ ಸಂಪಾದಿಸಿದಲ್ಲಿ ಮನೋನಿಗ್ರಹವು ಸುಸಾಧ್ಯ. ಮನೋನಿಗ್ರಹವಿಲ್ಲದೆ ಯೋಗಸಿದ್ಧಿ ಎಂದಿಗೂ ಅಸಾಧ್ಯ.

## ಯೋಗಭ್ರಷ್ಟನ ಪರಿ

''ಶ್ರದ್ಧೆಯಿದ್ದೂ ಪ್ರಯತ್ನ ಸಾಲದೆ ಯೋಗಸಿದ್ಧಿ ಪಡೆಯಲಾಗದ ಸಾಧಕನ ಗತಿ ಏನು? ಅವನು ಸ್ವರ್ಗಮೋಕ್ಷಗಳೆರಡಕ್ಕೂ ಎರವಾಗಿ ಹಾಳಾಗುವನೋ?'' ಎಂಬುದು ಅರ್ಜುನನ ಮುಂದಿನ ಪ್ರಶ್ನೆ.

**'ನ ಹಿ ಕಲ್ಯಾಣಕೃತ್ ಕಶ್ಚಿದ್ದುರ್ಗತಿಂ ತಾತ ಗಚ್ಛತಿ' -ಗೀತಾ (೬/೪೦)**

---

೧. ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಮ್ ।
ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಮ್ ॥ -ಗೀತಾ (೬/೩೪)

೨. ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಮ್ ।
ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ ॥ -ಗೀತಾ (೬/೩೫)

ಯೋಗಸಿದ್ಧಿಯ ಹಾದಿಯಲ್ಲಿ ಸಾಗುವವನಿಗೆ ಎಂದೂ ಕೆಡುಕು ಉಂಟಾಗದು. ಮಧ್ಯೆ ಮರಣಿಸಿದರೂ ಚಿಂತಿಸಬೇಕಿಲ್ಲ. ಅವನು ಮೊದಲು ಪುಣ್ಯಶಾಲಿಗಳಿಗೆ ದೊರೆಯುವ ಉತ್ತಮಲೋಕಗಳನ್ನು ಪಡೆದು, ಅಲ್ಲಿ ಚಿರಕಾಲ ನೆಲೆಸಿ ಮರಳಿ ಜನಿಸುವನು.[೧] ಅವನಿಗೆ ನಿರ್ಮಲರಾದ ಧನಿಕರ ಮನೆಯಲ್ಲೇ ಹುಟ್ಟುವ ಅವಕಾಶ ಲಭಿಸುವುದು. ಕೆಲವೊಮ್ಮೆ ಜ್ಞಾನಿಗಳಾದ ಯೋಗಿಗಳ ವಂಶದಲ್ಲೇ ಹುಟ್ಟುವನು. ಅಂತಹ ಜನ್ಮವು ಸಾಮಾನ್ಯವೇನಲ್ಲ. ಹಾಗೆ ಹುಟ್ಟಿದಾಗ ಅವನಿಗೆ ಹಿಂದಿನ ಜನ್ಮದ ಧ್ಯಾನಸಿದ್ಧಿ ಮರಳಿ ಲಭಿಸುವುದು.[೨] ಅವನು ತನ್ನ ಸಾಧನೆಯನ್ನು ಮುಂದುವರೆಸುತ್ತಾ ಹೋಗುವನು. ಅನೇಕಜನ್ಮಗಳ ಸಾಧನೆಯಿಂದ ದೋಷ ಕಳೆದುಕೊಳ್ಳುವ ಅವನು ಕೊನೆಗೆ ಬ್ರಹ್ಮಜ್ಞಾನಿಯಾಗಿ ಪರಗತಿ ಪಡೆಯುವನು. ಆದ್ದರಿಂದ ಯೋಗದ ಮಾರ್ಗದಲ್ಲಿ ನಡೆಯುವ ಪ್ರಾಮಾಣಿಕ ಪ್ರಯತ್ನಕ್ಕೆ ಎಂದೂ ಕೇಡಿಲ್ಲ. ಯೋಗಸಾಧಕನಾಗುವುದಿರಲಿ, ಅದನ್ನು ತಿಳಿಯಬಯಸುವವನೂ ಮುಂದೊಮ್ಮೆ ಮುಕ್ತನಾಗುವುದು ಖಚಿತ.

ಶ್ರೀಮದ್ಭಾಗವತದ ಜಡಭರತನ ಪ್ರಸಂಗ ಇದಕ್ಕೆ ನಿದರ್ಶನ. ಆಕಸ್ಮಿಕವಾಗಿ ಒದಗಿದ ಜಿಂಕೆಯ ಮರಿಯೊಂದರ ಸಹವಾಸದಿಂದಾಗಿ ಅವನ ಸಾಧನೆಗೆ ತಡೆಯುಂಟಾಗಿ ಅವನು ಯೋಗಭ್ರಷ್ಟನೆನ್ನಿಸಿದ. ಆದರೆ ಅದು ನಿಷ್ಫಲವೆನ್ನಿಸದೇ ಅವನು ಮುಂದೆ ಜಿಂಕೆ ಮರಿಯಾಗಿ ಜನಿಸಿ ತನ್ನ ತಪ್ಪಿಗಾಗಿ ಪರಿತಪಿಸಿ ಅದನ್ನು ತಿದ್ದಿಕೊಂಡು ಮತ್ತೆ ಹುಟ್ಟಿದ. ಅವನು ಹುಟ್ಟಿದ್ದು ಬ್ರಹ್ಮ ಜ್ಞಾನಿಗಳ ಕುಲದಲ್ಲಿ, ಸಾಧಿಸಿದ್ದು ಭಗವತ್ಪ್ರೀತಿಯನ್ನು. ತನ್ನ ಯೋಗಾಭ್ಯಾಸವನ್ನು ಮುಂದುವರೆಸಿ ರಹೂಗಣನಂತಹ ಜಿಜ್ಞಾಸುವಿಗೂ ತತ್ತ್ವ ಮಾರ್ಗವನ್ನು ಉಪದೇಶಿಸಿ ಕೊನೆಗೆ ಪರಗತಿಯನ್ನು ಸಾಧಿಸಿಕೊಂಡ ಹಿರಿಮೆ ಅವನದು.

*****

ಯೋಗಸಾಧನೆಯು ಕೃಚ್ಛ್ರಚಾಂದ್ರಾಯಣಾದಿತಪಸ್ಸಿಗಿಂತ ದೊಡ್ಡದು. ಕೇವಲ ಶಾಸ್ತ್ರಜ್ಞಾನಕ್ಕಿಂತಲೂ ಮಿಗಿಲಾದುದು. ಕರ್ಮಯೋಗಕ್ಕಿಂತಲೂ ಹಿರಿದು. ಅಂತಹ ಧ್ಯಾನಯೋಗದಲ್ಲಿ ತೊಡಗುವುದು ಅತ್ಯಂತ ಶ್ರೇಯಸ್ಕರ.[೩]

*****

---

೧. ಪ್ರಾಪ್ಯ ಪುಣ್ಯಕೃತಾಂ ಲೋಕಾನುಷಿತ್ವಾ ಶಾಶ್ವತೀಃ ಸಮಾಃ।
ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽಭಿಜಾಯತೇ॥ –ಗೀತಾ (೬/೪೨)

೨. ತತ್ರ ತಂ ಬುದ್ಧಿಸಂಯೋಗಂ ಲಭತೇ ಪೌರ್ವದೇಹಿಕಮ್।
ಯತತೇ ಚ ತತೋ ಭೂಯಃ ಸಂಸಿದ್ಧೌ ಕುರುನಂದನ॥ –ಗೀತಾ (೬/೪೩)

೩. ತಪಸ್ವಿಭ್ಯೋಽಧಿಕೋ ಯೋಗೀ ಜ್ಞಾನಿಭ್ಯೋಽಪಿ ಮತೋಽಧಿಕಃ।
ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ॥ –ಗೀತಾ (೬/೪೬)

ಯೋಗಾಸನಗಳ ಸಿದ್ಧಿಯನ್ನೇ ಯೋಗಾಭ್ಯಾಸವೆಂದು ಭಾವಿಸುವುದು ಇತ್ತೀಚಿನ ದಿನಗಳಲ್ಲಿ ಹೆಚ್ಚಾಗಿ ಕಂಡುಬರುವುದು. ವಾಸ್ತವವಾಗಿ ಆಸನಗಳಿಂದ ಯೋಗಸಿದ್ಧಿ ಲಭಿಸುವುದೆಂದು ತಿಳಿಯುವುದು ಬಾಹ್ಯವೇಷದಿಂದ ವೈದ್ಯ, ಇಂಜಿನಿಯರ್, ಪೋಲೀಸ್ ಅಧಿಕಾರಿ ಆಗಬಹುದೆಂದು ತಿಳಿಯುವಷ್ಟೇ ಹಾಸ್ಯಾಸ್ಪದ. ಗೊತ್ತುಗುರಿಯಿಲ್ಲದ ಪ್ರಯಾಣ ಎಷ್ಟೇ ಸುಸಜ್ಜಿತವಾದ ವಾಹನದಲ್ಲಿ ನಡೆದರೂ ಅದು ಸಾರ್ಥಕವೆನ್ನಿಸದಲ್ಲವಷ್ಟೆ ವೈದ್ಯ ಮೊದಲಾದವನಾಗಲು ಆಯಾ ವಿಷಯದ ಪರಿಜ್ಞಾನ ಹೇಗೆ ಆವಶ್ಯಕವೋ, ಯೋಗಿಯಾಗಲು ತತ್ತ್ವಜ್ಞಾನ ವು ಮೂಲಭೂತವಾದ ಅರ್ಹತೆ ಎಂಬುದನ್ನು ಮನಗಾಣಬೇಕು.

*****

# ಅಧ್ಯಾಯ - ೭

ಮೊದಲಷಟ್ಕದಲ್ಲಿ ಜ್ಞಾನಸಿದ್ಧಿಯ ಉಪಾಯವಾದ ಕರ್ಮಯೋಗದ ನಿರೂಪಣೆ ಬಂದಿದ್ದರೆ, ಏಳರಿಂದ ಹನ್ನೆರಡರವರೆಗಿನ ದ್ವಿತೀಯಷಟ್ಕದಲ್ಲಿ ತತ್ತ್ವಜ್ಞಾನದ ಸ್ವರೂಪವು ನಿರೂಪಿತವಾಗಿದೆ[೧].

## ಜ್ಞಾನ - ವಿಜ್ಞಾನ

ದ್ವಿತೀಯಷಟ್ಕದ ವಿಷಯವು ಜ್ಞಾನ ಮತ್ತು ವಿಜ್ಞಾನ ಎಂಬುದಾಗಿ ಎರಡು ಬಗೆ. ಭಗವಂತನ ಬಗ್ಗೆ ಸಾಮಾನ್ಯ ಪರಿಜ್ಞಾನವು ಜ್ಞಾನವೆನ್ನಿಸಿದರೆ, ತನ್ನ ಸಾಧನೆಗೆ ವಿಶೇಷವಾಗಿ ವಿಹಿತವಾದ ವಿಶೇಷಪರಿಜ್ಞಾನವು ವಿಜ್ಞಾನವೆನ್ನಿಸುವುದು[೨]. ಈ ಜ್ಞಾನವಿಜ್ಞಾನಗಳನ್ನು ಅರಿತ ಮೇಲೆ ಅರಿಯಬೇಕಾದ ಬೇರಾವುದೂ ಉಳಿಯದು. ಅದರಿಂದ ಲಭಿಸುವ ಸುಖವಂತೂ ಸರಿಸಾಟಿಯಲ್ಲದ್ದು.

*****

## ಜಿಜ್ಞಾಸುಗಳು ವಿರಳ

ಸಾವಿರಾರು ಜನರಲ್ಲಿ ತತ್ತ್ವಜ್ಞಾನದ ಸಿದ್ಧಿಗೋಸ್ಕರ ಪ್ರಯತ್ನಿಸುವವನು ಎಲ್ಲೋ ಒಬ್ಬ. ಹಾಗೆ ಪ್ರಯತ್ನಿಸುವವರಲ್ಲೂ ಸಿದ್ಧಿಗಳಿಸುವವನು ಯಾರೋ ಒಬ್ಬ[೩]. ತತ್ತ್ವಜ್ಞಾನದ ರೀತಿಯೇ ಅಂತಹುದು. ಅದನ್ನು ದೊರಕಿಸಿಕೊಳ್ಳುವುದಿರಲಿ, ಆ ಬಗ್ಗೆ ಚಿಂತಿಸುವುದೂ ಸಾಮಾನ್ಯಜನಕ್ಕೆ ಆಗದಂತಹುದು. ಆದರೆ ಅದರ ಬಗ್ಗೆ ಮಾಡುವ ಪ್ರಯತ್ನ ಎಂದೂ ನಿರರ್ಥಕವಾಗದು.

ಸಾಮಾನ್ಯಪದಾರ್ಥಗಳನ್ನು ಕೊಳ್ಳಲು ಅಸಂಖ್ಯಜನ ನೆರೆದಿರುತ್ತಾರೆ. ಆದರೆ ರತ್ನ ಮೊದಲಾದ ಅಮೂಲ್ಯವಸ್ತುಗಳನ್ನು ಕೊಳ್ಳುವ ಜನರ ಸಂಖ್ಯೆ ವಿರಳ. ಶ್ರೀಮಂತಿಕೆ ಮೊದಲಾದ ಅರ್ಹತೆಯಿಲ್ಲದವರಿಗೆ ಅಂತಹ ಅಮೂಲ್ಯವಸ್ತುಗಳನ್ನು ಕೊಳ್ಳಲು ಸಾಧ್ಯ-ವಾಗುವುದಿಲ್ಲ. ಅದರಂತೆ ತತ್ತ್ವಜ್ಞಾನ ಅತ್ಯಮೂಲ್ಯವಾದ ಸಂಪತ್ತು. ಅದರ ಸಾಧನೆಗೆ ಕಠಿಣಪರಿಶ್ರಮ, ವ್ರತ ಉಪವಾಸಗಳ ಆಚರಣೆ, ವಿಶೇಷಬುದ್ಧಿಶಕ್ತಿ, ಅಪಾರವಾದ

---

೧. ಸಾಧನಂ ಪ್ರಾಧಾನ್ಯೇನೋಕ್ತಮತೀತೈರಧ್ಯಾಯೈಃ । ಉತ್ತರೈಸ್ತು ಷಡ್ಭಿರ್ಭಗವನ್ಮಾಹಾತ್ಮ್ಯಂ ಪ್ರಾಧಾನ್ಯೇನಾಹ । – ಗೀ. ಭಾ.
ಭಗವನ್ಮಹಿಮಾ ವಿಶೇಷತ ಉಚ್ಯತೇ । – ಗೀ. ತಾ.

೨. ಜ್ಞಾನಂ ತೇಽಹಂ ಸವಿಜ್ಞಾನಮಿದಂ ವಕ್ಷ್ಯಾಮ್ಯಶೇಷತಃ ।
ಯಜ್ಜ್ಞಾತ್ವಾ ನೇಹ ಭೂಯೋಽನ್ಯಜ್ಜ್ಞಾತವ್ಯಮವಶಿಷ್ಯತೇ ॥ – ಗೀತಾ (೭/೨)

೩. ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ ।
ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥ – ಗೀತಾ (೭/೩)

ತತ್ತ್ವನಿಷ್ಠೆ ಮೊದಲಾದ ವಿಶಿಷ್ಟ ಅರ್ಹತೆ ಅತ್ಯಾವಶ್ಯಕ. ಆದ್ದರಿಂದಲೇ ಅದನ್ನು ಸಾಧಿಸುವ ಜನರ ಸಂಖ್ಯೆ ತೀರ ವಿರಳ. ಸಾಮಾನ್ಯ ಜ್ಞಾನ ಚಿನ್ನವಾದರೆ, ಅಧ್ಯಾತ್ಮ ವಿದ್ಯೆ ರತ್ನಗಳ ರಾಶಿ ಇದ್ದಂತೆ. ಇತರ ವಸ್ತುಗಳನ್ನು ಕೊಳ್ಳುವ ಅರ್ಹತೆಗಿಂತ ಚಿನ್ನ ಕೊಳ್ಳುವ ಅರ್ಹತೆ ಹೆಚ್ಚಿನದು. ರತ್ನಗಳನ್ನು ಕೊಳ್ಳುವ ಅರ್ಹತೆ ಸಾಮಾನ್ಯರಿಗೆ ಅಶಕ್ಯ. ಅದರಂತೆ ವಿದ್ಯೆಯ ಪ್ರಾಪ್ತಿಯಾಗಲಿ ಅದರ ಆಳ ವಿಸ್ತಾರಗಳ ಪರಿಜ್ಞಾನವಾಗಲಿ ಸಕಲರಿಗೂ ಸಾಧ್ಯವಿಲ್ಲ. ಶಾಲೆಯ ವಿದ್ಯಾರ್ಥಿಗಳಿಗಿಂತ ಕಾಲೇಜು ವಿದ್ಯಾರ್ಥಿಗಳ ಸಂಖ್ಯೆ ಕಡಿಮೆಯಾಗಿರುತ್ತದೆ. ಸ್ನಾತಕ ವಿದ್ಯಾರ್ಥಿಗಳಿಗಿಂತ ಸ್ನಾತಕೋತ್ತರ ವಿದ್ಯಾರ್ಥಿಗಳ ಸಂಖ್ಯೆ ಮತ್ತಷ್ಟು ಕಡಿಮೆ. ಇನ್ನು ಸಂಶೋಧನ ವಿದ್ಯಾರ್ಥಿಗಳ ಸಂಖ್ಯೆಯಂತೂ ಅತ್ಯಂತ ಅಲ್ಪ. ಲೌಕಿಕ ವಿದ್ಯೆಯ ವ್ಯಾಸಂಗದಲ್ಲಿಯೇ ಹೀಗೆ ವಿದ್ಯಾರ್ಥಿಗಳ ಸಂಖ್ಯೆ ಕುಸಿಯುತ್ತಾ ಹೋಗುತ್ತಿರುವಾಗ ಅಧ್ಯಾತ್ಮ ವಿದ್ಯೆಯ ಜಿಜ್ಞಾಸುಗಳು ಬೆರಳೆಣಿಕೆಯಷ್ಟು ಮಾತ್ರ ಎಂಬುದು ಅತಿಶಯೋಕ್ತಿಯೇನಲ್ಲ. ಆದ್ದರಿಂದ ಅನುಯಾಯಿಗಳ ಸಂಖ್ಯೆಯನ್ನು ಆಧರಿಸಿ ಒಂದು ಮತದ ಹಿರಿಮೆಯನ್ನು ಅಳೆಯಲಾಗದು. ಮತದ ಅನುಯಾಯಿಗಳೆಲ್ಲಾ ಸಹ ಆ ಮತದ ಪರಿಜ್ಞಾನವನ್ನು ಹೊಂದಿದ ನಿಷ್ಠಾವಂತರೇ ಎಂದೇನೂ ತಿಳಿಯಬೇಕಾಗಿಲ್ಲ. ಆದರೆ, ಲೌಕಿಕದಲ್ಲೂ ಸಹ ಅತ್ಯಂತ ಹೆಚ್ಚಿನ ಸಾಧನೆಗೆ ವಿದ್ಯೆಯ ಅಗತ್ಯ ಅನಿವಾರ್ಯವಾಗಿರುವಂತೆ ಅಧ್ಯಾತ್ಮದಲ್ಲೂ ಸಹ ಉನ್ನತ ಸಾಧನೆಗೆ ಹೆಚ್ಚಿನ ಅಧ್ಯಯನ ಚಿಂತನೆಗಳು ಅತ್ಯಗತ್ಯ ಎಂಬುದು ಇದರ ಭಾವ.

*****

## ಜ್ಞಾನದ ಸ್ವರೂಪ

ಪೃಥ್ವಿ, ನೀರು, ಅಗ್ನಿ ವಾಯು, ಆಕಾಶ, ಮನಸ್ಸು ಬುದ್ಧಿ ಮತ್ತು ಅಹಂಕಾರ( ಹಾಗೂ ಮಹತ್ತತ್ತ್ವ) ಎಂಬುದಾಗಿ ಭಗವಂತನಿಗೆ ಅಧೀನವಾದ ಜಡಪ್ರಕೃತಿಯು ಎಂಟು( ಒಂಭತ್ತು ) ತೆರನಾದ ಪ್ರಭೇದಗಳನ್ನು ಹೊಂದಿದೆ. ಇದು ಅಪರಪ್ರಕೃತಿ. ಇದಕ್ಕೆ ಅಭಿಮಾನಿಯಾದ ಚೇತನಪ್ರಕೃತಿ ಮಹಾಲಕ್ಷ್ಮಿ[೧]. ಅವರೇ ಬ್ರಹ್ಮಾದಿಸರ್ವಜೀವರಿಗೂ ಆಸರೆ. ಎಲ್ಲ ಪ್ರಾಣಿಗಳ ಜನನಕ್ಕೂ ಈ ಜಡ ಮತ್ತು ಚೇತನಪ್ರಕೃತಿಗಳೇ ಮೂಲಕಾರಣ. ಭಗವಂತನು ಇವುಗಳ ಮೂಲಕ ಸಕಲಜಗತ್ತಿನ ಹುಟ್ಟುಸಾವುಗಳಿಗೆ ಕಾರಣನಾಗಿರುವನು[೨].

*****

---

೧. ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಮ್ ।
ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್ ॥ – ಗೀತಾ (೭/೫)

೨. ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ ।
ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ ॥ – ಗೀತಾ (೭/೬)

ಭಗವಂತನಿಗಿಂತ ಬೇರೆಯಾದ ಮತ್ತೊಂದು ಪರತರ ವಸ್ತು ಇಲ್ಲ. ಜಡಪ್ರಕೃತಿ ಹಾಗೂ ಬ್ರಹ್ಮಾದಿಜೀವರು ಅವರರು; ಅಸುರಜನರು ಅವರತರರು; ಮುಕ್ತರು ಪರಾಭಾಸರು; ಶ್ರೀತತ್ತ್ವವು ಪರಾ; ಶ್ರೀಹರಿಯು ಪರತರ. ಇದೆಲ್ಲ ದಾರದಲ್ಲಿ ಮಣಿಗಳ ಗುಂಪಿನಂತೆ ಭಗವಂತನಲ್ಲಿ ಹೆಣೆದುಕೊಂಡಿವೆ. ಮಣಿಗಳು ಎಷ್ಟೇ ಇದ್ದರೂ ಅವುಗಳ ಮೌಲ್ಯ ಏನೇ ಆಗಿದ್ದರೂ ಅವುಗಳು ಹಾರವೆನ್ನಿಸಲು ಸೂತ್ರ ಅತ್ಯಗತ್ಯ. ಅದರಂತೆ ಭಗವಂತನ ಅನುಗ್ರಹವಿಲ್ಲದೇ ಯಾವುದೇ ಒಂದು ವ್ಯವಸ್ಥೆಯು ಸಹ ಮೈದಾಳದು ಎಂದು ತಿಳಿಯಬೇಕು. ಇಲ್ಲಿ ಸೂತ್ರಧಾರನಾಗಿ ಭಗವಂತನಿದ್ದರೆ, ಸೂತ್ರನಂತೆ ಪ್ರಾಣತತ್ತ್ವವಿರುವುದು ಎಂಬ ಭಾವವೂ ಅಡಗಿದೆ.

*****

## ವಿಜ್ಞಾನದ ಸ್ವರೂಪ

ನೀರಿನಲ್ಲಿ ಇರುವ ರಸ ಭಗವಂತನಿಂದ; ಚಂದ್ರ ಸೂರ್ಯರಲ್ಲಿ ಇರುವ ಬೆಳಕು ಅವನಿಂದ; ಎಲ್ಲ ವೇದಗಳಲ್ಲೂ ಓಂಕಾರ ಅವನಿಂದ; ಗಗನದಲ್ಲಿ ಧ್ವನಿ ಅವನಿಂದ; ಪುರುಷರಲ್ಲಿನ ಪೌರುಷ ಅವನಿಂದ. ಜಲಾದಿಗಳಲ್ಲಿ ರಸಾದಿನಾಮಕನಾಗಿ ನೆಲೆಸಿದ್ದು ರಸಾದಿಗಳಿಗೆ ಕಾರಣನಾಗಿರುವವನು, ಅವುಗಳ ಭೋಕ್ತೃವಾಗಿರುವವನು ಭಗವಂತನೇ[೧].

ಪೃಥ್ವಿಯಲ್ಲಿನ ಸುಗಂಧ ಭಗವಂತನಿಂದ. ಬೆಂಕಿಯಲ್ಲಿರುವ ತೇಜಸ್ಸು(ಸುಡುವಿಕೆ) ಅವನಿಂದ. ಸರ್ವಜೀವಿಗಳ ಬದುಕು ಅವನಿಂದ. ತಾಪಸರ ತಪಸ್ಸು ಅವನಿಂದ. ಪೃಥ್ವಿ ಮೊದಲಾದವುಗಳಲ್ಲಿನ ಸುಗಂಧಾದಿಗಳಲ್ಲಿ ಆಯಾ ಹೆಸರುಗಳಿಂದ ನೆಲೆಸಿದ್ದು, ಅವುಗಳಿಗೆ ಕಾರಣನಾಗಿರುವವನು, ಭೋಕ್ತೃವಾಗಿರುವವನು ಭಗವಂತನೇ.

ಸನಾತನನಾದ ಅವನೇ ಎಲ್ಲ ಜೀವಿಗಳಿಗೂ ಕಾರಣ ಎಂದು ತಿಳಿಯಬೇಕು. ಬುದ್ಧಿವಂತರಲ್ಲಿನ ಬುದ್ಧಿ ಅವನಿಂದ; ತೇಜಸ್ವಿಗಳ ತೇಜಸ್ಸು ಅವನಿಂದ;

ಭಗವಂತನು ವಸ್ತುಗಳಿಗೆ ಮಾತ್ರವಲ್ಲದೆ, ಅವುಗಳ ಗುಣಧರ್ಮಗಳಿಗೂ ನಿಯಾಮಕ. ವಿಜ್ಞಾನವೆಂದರೆ ಇದೇ. ಫಲದ ಹಂಬಲವಿಲ್ಲದ ಬಲಿಷ್ಠರಲ್ಲಿನ ಬಲ ಅವನಿಂದ. ಪ್ರಾಣಗಳಲ್ಲಿನ ಧರ್ಮಕ್ಕೆ ವಿರುದ್ಧವೆನ್ನಿಸದ ಬಯಕೆ ಅವನಿಂದ.

*****

---

೧. ರಸೋऽಹಮಪ್ಸು ಕೌಂತೇಯ ಪ್ರಭಾऽಸ್ಮಿ ಶಶಿಸೂರ್ಯಯೋಃ।
ಪ್ರಣವಃ ಸರ್ವವೇದೇಷು ಶಬ್ದಃ ಖೇ ಪೌರುಷಂ ನೃಷು॥ – ಗೀತಾ (೭/೮)

ಸತ್ತ್ವಗುಣ, ರಜೋಗುಣ ಮತ್ತು ತಮೋಗುಣಗಳೆಂಬ ತ್ರಿಗುಣಗಳಿಂದ ಆಗಿರುವ ಸಕಲಪದಾರ್ಥಗಳೂ ಭಗವಂತನಿಂದಲೇ ಆದವು. ಅವನು ಅವುಗಳನ್ನು ಅವಲಂಬಿಸಿಲ್ಲ. ಆದರೆ ಅವೆಲ್ಲ ಅವನನ್ನು ಅವಲಂಬಿಸಿಯೇ ಬದುಕಿವೆ[೧].

*****

## ಮಾಯೆಯ ಹಿರಿಮೆ

ಗುಣತ್ರಯಗಳಿಂದಾದ ಮೂರುತೆರನಾದ ವಸ್ತುಗಳಿಂದ ಜಗತ್ತು ಮೋಹಿತವಾಗಿದೆ. ಆದಕ್ಕೆಂದೇ ಅವುಗಳಿಗಿಂತ ಮಿಗಿಲಾದ ಅವನನ್ನು ಅರಿಯಲು ಜೀವರಿಗೆ ಸುಲಭಸಾಧ್ಯವೆನ್ನಿಸದು. ಗುಣಗಳಿಗೆ ಅಭಿಮಾನಿನಿ ಭಗವಂತನಿಗೆ ಅತಿಪ್ರಿಯಳಾದ ಮಾಯೆ(ದುರ್ಗೆ). ಅವಳನ್ನು ಮೀರುವುದು ಯಾರಿಗೂ ಆಗದು. ಯಾರು ಅವನನ್ನೇ ನೆಚ್ಚುವರೋ, ಅವರು ಮಾತ್ರ ಆ ಮಾಯೆಯನ್ನು ದಾಟಬಲ್ಲರು[೨].

ಮಾಯೆಯೆಂದರೆ ಅವಿದ್ಯೆ, ಅಜ್ಞಾನ ಮೊದಲಾಗಿ ಎಂಬುದು ಕೆಲವರ ಅರ್ಥ. ಇಲ್ಲಿ ಮಾಯೆ ಎಂದರೆ ದುರ್ಗಾದೇವಿಯೆಂದೇ ಶಾಸ್ತ್ರಗಳ ವಿವರಣೆ.

ಪಾಪಶೀಲರಾದ ಕೀಳುಜನ ಎಂದೂ ಅವನನ್ನು ನೆಚ್ಚರು. ಮಾಯೆಯಿಂದಾಗಿ ವಿವೇಕಶೂನ್ಯರಾದ ಅವರು ಇಂದ್ರಿಯಸುಖದಲ್ಲಿಯೇ ಮೈಮರೆಯುವರು[೩].

ಈಶಾವಾಸ್ಯೋಪನಿಷತ್ತಿನಲ್ಲಿ ಬರುವ ಹಿರಣ್ಮಯಪಾತ್ರ ಎಂಬ ಮಾತಿನಲ್ಲಿ ಈ ಮಾಯೆಯ ಪರಿಕಲ್ಪನೆಯನ್ನು ಕಾಣಬಹುದು[೪]. ಸಂಪತ್ತಿನತ್ತ ಗಮನಹರಿಸುವವರಿಗೆ ಅದರ ಅಧಿದೇವತೆಯಾದ ಭಗವಂತನತ್ತ ಗಮನ ಹರಿಯದು ಎಂಬುದು ಇಲ್ಲಿಯ ಭಾವ.

*****

## ಭಕ್ತರು ನಾಲ್ಕು ವಿಧ

ಭಗವಂತನನ್ನು ಭಜಿಸುವ ಪುಣ್ಯಶಾಲಿಗಳು ರೋಗಾದಿಗಳಿಂದ ನೊಂದವರು, ಬ್ರಹ್ಮಜ್ಞಾನ ಬಯಸುವವರು, ಧನಾಪೇಕ್ಷಿಗಳು ಹಾಗೂ ಬ್ರಹ್ಮಜ್ಞಾನಿಗಳು ಎಂಬುದಾಗಿ

---

೧. ಯೇ ಚೈವ ಸಾತ್ತ್ವಿಕಾ ಭಾವಾ ರಾಜಸಾಸ್ತಾಮಸಾಶ್ಚ ಯೇ।
ಮತ್ತ ಏವೇತಿ ತಾನ್ ವಿದ್ಧಿ ನ ತ್ವಹಂ ತೇಷು ತೇ ಮಯಿ॥ – ಗೀತಾ (೭/೧೨)

೨. ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ।
ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ॥ – ಗೀತಾ (೭/೧೪)

೩. ನ ಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯಂತೇ ನರಾಧಮಾಃ।
ಮಾಯಯಾಽಪಹೃತಜ್ಞಾನಾ ಆಸುರಂ ಭಾವಮಾಶ್ರಿತಾಃ॥ – ಗೀತಾ (೭/೧೫)

೪. ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಮ್।
ತತ್ತ್ವಂ ಪೂಷನ್ನಪಾವೃಣು ಸತ್ಯಧರ್ಮಾಯ ದೃಷ್ಟಯೇ॥ – ಈಶಾವಾಸ್ಯೋಪನಿಷತ್ (೧೫)

ನಾಲ್ಕು ಬಗೆ.[೧] ಇವರಲ್ಲಿ ಭಗವಂತನನ್ನೇ ಸರ್ವೋತ್ತಮನೆಂದು ಆರಾಧಿಸುವ ಜ್ಞಾನಿಯು ಅತ್ಯಂತಶ್ರೇಷ್ಠ. ಅವನಿಗೆ ಭಗವಂತನು ಪ್ರಿಯ. ಅದಕ್ಕೆಂದೇ ಭಗವಂತನಿಗೆ ಅವನೂ ಪ್ರಿಯ. ಈ ನಾಲ್ವರೂ ಉತ್ತಮರೇ ಆದರೂ, ಬ್ರಹ್ಮಜ್ಞಾನಿಯು ಮಾತ್ರ ಭಗವಂತನಿಗೆ ಅತ್ಯಂತಪ್ರಿಯ. ಇವರಲ್ಲಿ ಬ್ರಹ್ಮಜ್ಞಾನಿಯು ಉತ್ತಮಗತಿಗಾಗಿ ಭಗವಂತನನ್ನೇ ನೆಚ್ಚುವುದರಿಂದ ಅವನು ಅವನಿಗೆ ವಿಶೇಷಪ್ರಿಯ. ಇತರ ಮೂವರಲ್ಲಿ ಇತರ ಫಲಗಳ ಅಪೇಕ್ಷೆಯ ಸೋಂಕು ಇರುವುದು. ಆದರೆ ಜ್ಞಾನಿಯಲ್ಲಿ ಫಲಾಪೇಕ್ಷೆಯ ಪ್ರವೃತ್ತಿ ಸರ್ವಥಾ ಇರದು. ಅದರಿಂದಾಗಿಯೇ ಅವನು ಭಗವಂತನಿಗೆ ಪರಮಪ್ರಿಯ ಎನ್ನಿಸುವನು.

ಬಹುಜನ್ಮಗಳ ಸಾಧನೆಗೆ ಕೊನೆಯಲ್ಲಿ ಜ್ಞಾನ ಪಡೆದವನು ಭಗವಂತನನ್ನು ಹೊಂದುವನು. ಎಲ್ಲವೂ ವಾಸುದೇವನ ಅಧೀನ. ಅವನೊಬ್ಬನೇ ಪರಿಪೂರ್ಣ ಎಂದು ಬಗೆಯುವವನೇ ಮಹಾತ್ಮ. ಅಂತಹವನು ಸಿಕ್ಕುವುದು ದುರ್ಲಭ[೨].

ವಾಸುದೇವನೊಬ್ಬನೆ ಪೂರ್ಣ. ಪೂರ್ಣ ಎಂದರೆ ಗುಣಗಳಿಂದ ಪರಿಪೂರ್ಣ, ಸರ್ವಶಕ್ತಿ ಸಂಪನ್ನ, ಸಕಲ ವಸ್ತುಗಳ ಸ್ವಾಮಿ, ಸರ್ವತ್ರ ವ್ಯಾಪ್ತ, ಮೊದಲಾಗಿ ಅನೇಕ ಬಗೆಯ ಅರ್ಥವನ್ನು ಹೊಂದಿದೆ. ಅವನು ಸರ್ವ ಸ್ವಾಮಿ, ಎಂದು ತಾತ್ಪರ್ಯ. ಉಪನಿಷತ್ತುಗಳಲ್ಲಿ ಬಂದಿರುವ ಸರ್ವಂ ಖಲ್ವಿದಂ ಬ್ರಹ್ಮ ಎಂಬ ಮಾತಿನ ಭಾವವೂ ಇದೇ ಆಗಿದೆ[೩].

ವೈದ್ಯಶಾಸ್ತ್ರ ಮೊದಲಾದ ಉತ್ತಮ ವಿದ್ಯೆಯನ್ನು ಸಂಪಾದಿಸಲು ಹೆಚ್ಚು ಕಾಲದ ಅಧ್ಯಯನ ಅಗತ್ಯವಿರುವಂತೆ, ಬ್ರಹ್ಮವಿದ್ಯೆಯನ್ನು ಸಂಪಾದಿಸಲು ಅನೇಕಜನ್ಮಗಳ ಸಾಧನೆಯ ಹಿನ್ನೆಲೆ ಆವಶ್ಯಕ. ಲೋಕದ ವಿದ್ಯೆಯ ಪರಿಣತಿಗೆ ಹಲವು ವರ್ಷಗಳ ಸಾಧನೆ ಅಗತ್ಯವಾದರೆ ಅಧ್ಯಾತ್ಮ ವಿದ್ಯೆಯ ಸಿದ್ಧಿಗೆ ಜನ್ಮಗಟ್ಟಲೆಯ ಸಾಧನೆ ಅಗತ್ಯ ಎಂದರ್ಥ.

*****

## ಅನ್ಯದೇವತೆಗಳ ಪೂಜೆಯ ಹಿನ್ನೆಲೆ

ಇತರದೇವತೆಗಳು ನೀಡುವ ಫಲಗಳಿಂದ ಆಕರ್ಷಿತರಾಗಿ, ಅದಕ್ಕೆ ತಕ್ಕ ನಿಯಮಗಳನ್ನು ಪಾಲಿಸುತ್ತಾ, ಜನ ತಮ್ಮ ಸ್ವಭಾವಕ್ಕೆ ತಕ್ಕಂತೆ ದೇವತೆಗಳನ್ನು

---

೧. ಚತುರ್ವಿಧಾ ಭಜಂತೇ ಮಾಂ ಜನಾಃ ಸುಕೃತಿನೋಽರ್ಜುನ।
ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ॥ ಗೀತಾ (೭/೧೬)

೨. ಬಹೂನಾಂ ಜನ್ಮನಾಮಂತೇ ಜ್ಞಾನವಾನ್ ಮಾಂ ಪ್ರಪದ್ಯತೇ।
ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ॥ – ಗೀತಾ (೭/೧೯)

೩. ನಮಃ ಪುರಸ್ತಾದಥ ಪೃಷ್ಠತಸ್ತೇ ನಮೋಽಸ್ತು ತೇ ಸರ್ವತ ಏವ ಸರ್ವ।
ಅನಂತವೀರ್ಯಾಮಿತವಿಕ್ರಮಸ್ತ್ವಂ ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ॥ –ಗೀತಾ(೧೧/೪೦)

ಒಲೈಸುವರು. ಭಕ್ತನು ಪೂಜಿಸಬಯಸುವ ದೇವತೆಯಲ್ಲೇ ಭಗವಂತ ವಿಶೇಷಶ್ರದ್ಧೆಯನ್ನು ದೃಢಗೊಳಿಸುವನು.

ಆ ಶ್ರದ್ಧೆಯನ್ನೇ ಗಟ್ಟಿಮಾಡಿಕೊಳ್ಳುವ ಆರಾಧಕರು ಭಗವಂತನೇ ನೀಡುವ ಅಂತಹ ಕಾಮನೆಗಳನ್ನು ಪಡೆಯುವರು. ಇತರ ದೇವತೆಗಳು ಫಲ ನೀಡಿದಂತೆ ಕಂಡರೂ ನಿಜಕ್ಕೂ ಸಕಲರಿಗೂ ಫಲದಾಯಕನಾದವನು ಭಗವಂತನೇ. ಸ್ವಂತದ ಕಾರ್ಖಾನೆಗಳಾಗಲಿ, ಅನಧಿಕೃತ ಸಂಸ್ಥೆಗಳಾಗಲಿ ವೇತವನ್ನು ನೀಡುವಾಗಲೂ ಅವರು ನೀಡುವ ಹಣ ಸರ್ಕಾರ ಮುದ್ರಿಸಿದ್ದೇ ಹೊರತು ತಾವೇ ಸ್ವಂತವಾಗಿ ಮುದ್ರಿಸಿದ್ದಲ್ಲ. ಅದರಂತೆ ಇದು ಎಂದು ತಿಳಿಯಬೇಕು. ಸ್ವಂತವಾಗಿ ಹಣವನ್ನು ಮುದ್ರಿಸುವುದು ಮಹಾಪರಾಧಗಳಲ್ಲಿ ಒಂದು ಎನ್ನಿಸುವಂತೆ ಇತರ ದೇವತೆಗಳೇ ನೇರವಾಗಿ ಫಲ ನೀಡುವರು ಎಂದು ತಿಳಿಯುವುದು ಸಹ ತಾತ್ವಿಕ ಅಪಚಾರವೇ ಆಗಿದೆ.

ಹೀಗೆ ಇತರ ದೇವತೆಗಳನ್ನು ಆರಾಧಿಸುವ ಅಲ್ಪಮತಿಗಳಾದ ಅವರಿಗೆ ಲಭಿಸುವ ಫಲವೂ ಅಲ್ಪವೇ ಆದದ್ದು. ದೇವತೆಗಳನ್ನು ಪೂಜಿಸುವವರು ದೇವತೆಗಳನ್ನೇ ಸೇರುವರು. ಭಗವದ್ಭಕ್ತರು ಸೇರುವುದು ಮಾತ್ರ ಭಗವಂತನನ್ನೇ[೧].

ಇಲ್ಲಿ ಅನ್ಯದೇವತೆಗಳೆಂದರೆ ಬ್ರಹ್ಮಾದಿದೇವತೆಗಳೇ. ಗೀತೆಯು ಅನ್ಯದೇವತಾ-ಪೂಜೆಯನ್ನು ನಿಷೇಧಿಸುತ್ತಿಲ್ಲ. ಅವರನ್ನು ಸರ್ವೋತ್ತಮರೆಂದು ತಿಳಿದು ಆರಾಧಿಸುವುದನ್ನು ಮಾತ್ರ ನಿಷೇಧಿಸಿದೆ. ತಾರತಮ್ಯಕ್ರಮದಲ್ಲಿ ಪೂಜಿಸಿದಾಗ ಬ್ರಹ್ಮಾದಿದೇವತೆಗಳ ಪೂಜೆಯೂ ಹರಿಪ್ರಸಾದಕ್ಕೆ ಕಾರಣವಾಗಿ ಮುಕ್ತಿಗೆ ಸಾಧಕ ಎಂಬುದೇ ಶಾಸ್ತ್ರಗಳ ಘೋಷಣೆ. ಹಿರಣ್ಯಕಶಿಪು ರಾವಣ ಮುಂತಾದವರು ಬ್ರಹ್ಮ, ಶಿವ ಮೊದಲಾದವರನ್ನೇ ಸರ್ವೋತ್ತಮರೆಂದು ಆರಾಧಿಸಿದ್ದರಿಂದಾಗಿ ಅವರಿಗೆ ಮುಖ್ಯ ಫಲವೆನ್ನಿಸಿದ ಮೋಕ್ಷವು ಲಭಿಸಲಿಲ್ಲ. ಧ್ರುವ, ಪ್ರಹ್ಲಾದ ಮೊದಲಾದವರು ಶ್ರೀಹರಿಯನ್ನು ಆರಾಧಿಸಿ ಪರಮ ಸಿದ್ಧಿಯನ್ನು ಗಳಿಸಿದ್ದು ಅವರ ಉಪಾಸನೆಯ ಪರಿಶುದ್ಧಿಗೆ ನಿದರ್ಶನ.

*****

ಭಗವಂತನನ್ನು ಸರಿಯಾಗಿ ತಿಳಿಯದ ಅವಿವೇಕಿಗಳು ಅವನನ್ನು ಜೀವರಂತೆ ಪ್ರಾಕೃತದೇಹ ತಳೆದವನು ಎಂದು ತಪ್ಪಾಗಿ ತಿಳಿಯುವರು. ತನ್ನ ಸಾಮರ್ಥ್ಯ ಹಾಗೂ ಮಾಯೆಯಿಂದ ತನ್ನನ್ನು ಮರೆಮಾಚಿಕೊಂಡಿರುವ ಅವನು ಎಲ್ಲರಿಗೂ ಗೋಚರಿಸನು. ಹುಟ್ಟುಸಾವುಗಳಿಲ್ಲದ ಅವನನ್ನು ಮೂಢಜನತೆ ಎಂದೂ ಅರಿಯದು.

*****

---

೧. ಅಂತವತ್ ತು ಫಲಂ ತೇಷಾಂ ತದ್ಭವತ್ಯಲ್ಪಮೇಧಸಾಮ್ ।
ದೇವಾನ್ ದೇವಯಜೋ ಯಾಂತಿ ಮದ್ಭಕ್ತಾ ಯಾಂತಿ ಮಾಮಪಿ ॥ – ಗೀತಾ (೭/೨೩)

ಭಗವಂತನಿಗೆ ಹಿಂದಿನ, ಈಗಿನ ಹಾಗೂ ಮುಂದಿನ ಎಲ್ಲ ಜೀವಿಗಳ ಅರಿವೂ ಪೂರ್ಣವಾಗಿ ಉಂಟು[೧]. ಆದರೆ ಅವನನ್ನು ಚೆನ್ನಾಗಿ ತಿಳಿಯುವುದು ಯಾರಿಗೂ ಆಗದು. ಭಗವಂತ ಸರ್ವಜ್ಞ; ಜೀವರು ಅಲ್ಪಜ್ಞರು. ಜೀವಾತ್ಮ ಪರಮಾತ್ಮರ ಮಧ್ಯೆ ಇರುವ ಅಂತರವನ್ನು ಅಪೂರ್ವ ರೀತಿಯಲ್ಲಿ ನಿರೂಪಿಸುವ ವಿಶೇಷ ಭಾಗ ಇದಾಗಿದೆ.

*****

ಒಂದೆಡೆ ರಾಗದ್ವೇಷಗಳಿಂದ ಮೂಡುವ ಸುಖದುಃಖಾದಿದ್ವಂದ್ವಗಳು ಹಾಗೂ ಮತ್ತೊಂದೆಡೆ ಭಗವಂತನ ಬಗೆಗಿನ ತಪ್ಪುತಿಳುವಳಿಕೆ- ಇವುಗಳಿಂದಾಗಿ ಎಲ್ಲ ಪ್ರಾಣಿಗಳು ಸೃಷ್ಟಿಕಾಲದಿಂದ ತೊಡಗಿ ಅವನ ಬಗ್ಗೆ ತಪ್ಪು ತಿಳುವಳಿಕೆಯನ್ನೇ ಹೊಂದುವವು. ಪಾಪಸವೆದ ಪುಣ್ಯಶೀಲರು ಮಾತ್ರ ಈ ದ್ವಂದ್ವಮೋಹಗಳಿಂದ ದೂರಾಗಿ, ಅವನನ್ನು ದೃಢನಿಷ್ಠೆಯಿಂದ ಭಜಿಸುವರು.

ಸ್ವಾಭಾವಿಕವಾಗಿಯೇ ಜೀವನ ಸಾಮರ್ಥ್ಯ ಪರದೇವತೆಯಾದ ಭಗವಂತನನ್ನು ಅರಿಯುವಲ್ಲಿ ಅತ್ಯಂತ ಕಿರಿದು. ಅದರೊಂದಿಗೆ ವಿಷಯಗಳತ್ತ ಧಾವಿಸುವ ಇಂದ್ರಿಯಗಳಿಂದಾಗಿ ಮನಸ್ಸನ್ನು ಆವರಿಸುವ ರಾಗ ದ್ವೇಷಗಳ ಹಾವಳಿ. ಮಸುಕು ದೃಷ್ಟಿಯವನಿಗೆ ಕತ್ತಲೆಯ ವಾತಾವರಣವೂ ಸೇರಿ ಇರುವ ದೃಷ್ಟಿಗೂ ಧೂಳು ಬಿದ್ದಾಗ ಏನನ್ನು ತಾನೇ ಕಾಣಲು ಸಾಧ್ಯವಾದೀತು. ಆದರಂತೆ ರಾಗದ್ವೇಷಗಳಿಗೆ ಒಳಗಾಗುವ ಜೀವಿಗಳು ಬ್ರಹ್ಮ ಜಿಜ್ಞಾಸೆಯಲ್ಲಿ ಎಡವುವರು ಎಂದರ್ಥ.

*****

ಮುಪ್ಪುಸಾವುಗಳ ಬಿಡುಗಡೆಗೋಸ್ಕರ ಭಗವಂತನನ್ನು ನೆಚ್ಚಿ ಪ್ರಯತ್ನಿಸುವುದೊಂದೇ ದಾರಿ. ಹಾಗೆ ಅವನನ್ನು ತಿಳಿಯಲು ಸಾಧ್ಯವಾಗುವುದು ಬ್ರಹ್ಮಜ್ಞಾನಿಗಳಿಗೆ ಮಾತ್ರ. ಹಾಗೆ ಬ್ರಹ್ಮಜ್ಞಾನಿಯಾಗಲು ಶಾಸ್ತ್ರಗಳ ಬಗೆಗಿನ ಅರಿವು ಅತ್ಯಗತ್ಯ.

*****

ಅಧಿಭೂತ, ಅಧಿದೈವ ಹಾಗೂ ಅಧಿಯಜ್ಞಗಳ ಸಮೇತನನ್ನಾಗಿ ಭಗವಂತನನ್ನು ತಿಳಿದು, ಜೀವನದ ಕೊನೆಯ ಕ್ಷಣದಲ್ಲೂ ಯಾರು ಅವನನ್ನು ನೆನೆಯುವರೋ, ಅವರು ಅವನಲ್ಲೇ ಮನಸ್ಸನ್ನು ತೊಡಗಿಸಿದವರಾಗಿ ಅವನನ್ನು ಅರಿಯುವರು.[೨] ಬ್ರಹ್ಮ ತತ್ತ್ವದ ಅರಿವಿಗೆ ಭೂತಗಳ ಬಗೆಗಿನ ಅರಿವು ಅಗತ್ಯ. ಆದರಂತೆ ಅವನು ಸರ್ವೋನ್ನತವಾದ ತತ್ತ್ವ

೧. ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ ।
ಭವಿಷ್ಯಾಣಿ ಚ ಭೂತಾನಿ ಮಾಂ ತು ವೇದ ನ ಕಶ್ಚನ ॥ – ಗೀತಾ (೭/೨೬)

೨. ಸಾಧಿಭೂತಾಧಿದೈವಂ ಮಾಂ ಸಾಧಿಯಜ್ಞಂ ಚ ಯೇ ವಿದುಃ ।
ಪ್ರಯಾಣಕಾಲೇಽಪಿ ಚ ಮಾಂ ತೇ ವಿದುರ್ಯುಕ್ತಚೇತಸಃ ॥ – ಗೀತಾ (೭/೩೦)

ಎಂದು ತಿಳಿಯಲು ಇತರ ದೇವತೆಗಳ ಪರಿಜ್ಞಾನವೂ ಅಗತ್ಯ. ಅವನ ಸಂಪ್ರೀತಿಗಾಗಿ ಯಜ್ಞಗಳನ್ನು ಆಚರಿಸುವುದು. ಅಂತಹ ಯಜ್ಞಗಳ ಅಧಿದೇವತೆ ಅವನೇ ಎಂದು ತಿಳಿಯುವುದು ಸಹ ಅತ್ಯಗತ್ಯ. ಇಂತಹ ಅರಿವು ಮರಣ ಕಾಲದಲ್ಲಿ ಎಂದರೆ ಜೀವನದ ಕೊನೆಯ ಕ್ಷಣದಲ್ಲೂ ಸಹ ಜಾಗ್ರತವಾಗಿರಬೇಕಾದದ್ದು ಮತ್ತೊಂದು ಮುಖ್ಯ ಅಗತ್ಯ ಎಂದು ಭಾವ.

*****

# ಅಧ್ಯಾಯ - ೮

ಬ್ರಹ್ಮ, ಅಧ್ಯಾತ್ಮ, ಕರ್ಮ, ಅಧಿಭೂತ, ಅಧಿದೈವ, ಅಧಿಯಜ್ಞ ಮತ್ತು ಅಧಿಯಜ್ಞನ ಪರಿ ಹಾಗೂ ಅಂತ್ಯಕಾಲದಲ್ಲಿ ಭಗವಚ್ಚಿಂತನೆಯ ವಿಧಿ – ಈ ಎಂಟು [೧]ವಿಷಯಗಳ ವಿವೇಚನೆ ಎಂಟನೆಯ ಅಧ್ಯಾಯದ ಪ್ರಮುಖವಿಷಯ. ಎಂಟನೆಯ ಅಧ್ಯಾಯ ಎಂಬ ಹೆಸರು ಸಹ ಈ ಕಾರಣದಿಂದ ಇದಕ್ಕೆ ಸಾರ್ಥಕವಾಗಿದೆ ಎಂದು ತಿಳಿಯಬಹುದು.

## ಬ್ರಹ್ಮ ಮೊದಲಾದ ಎಂಟು ತತ್ತ್ವಗಳ ವಿವೇಚನೆ

[೨]ಬ್ರಹ್ಮ ಎಂದರೆ ಸರ್ವತ್ರವ್ಯಾಪ್ತವಾದ ಪರಮಾಕ್ಷರನಾದ ಪರಮಾತ್ಮ. ಜೀವರಾಶಿ ಮತ್ತು ಜೀವಚೈತನ್ಯಕ್ಕೆ ಉಪಕಾರಿಯಾದ ದೇಹೇಂದ್ರಿಯಾದಿಗಳಿಂದ ಕೂಡಿದ ಪಿಂಡಾಂಡವೇ ಅಧ್ಯಾತ್ಮ (ಅಥವಾ ಭಗವತ್ಸ್ವರೂಪವೇ ಅಧ್ಯಾತ್ಮ). ಜೀವಜಡಗಳ ಹುಟ್ಟಿಗೆ ಕಾರಣವಾಗುವ ಭಗವಂತನ ಸೃಷ್ಟಿಕ್ರಿಯೆ ಕರ್ಮವೆನ್ನಿಸುವುದು. ದೇಹೇಂದ್ರಿಯಾದಿಗಳಿಂದ ಕೂಡಿದ ಜೀವರಿಗೆ ಉಪಕಾರಿಯಾಗುವ ಪೃಥಿವೀ ಮೊದಲಾದ ಜಡಪದಾರ್ಥಗಳು ಅಧಿಭೂತಗಳು (ಅಥವಾ ಪೃಥಿವ್ಯಾದಿಭೂತಗಳಿಗಿಂತ ಮಿಗಿಲಾದ ಸರ್ವಜೀವರಾಶಿಯೂ ಅಧಿಭೂತ). ದೇಹದೊಳಗಿದ್ದು ನಿಯಮಿಸುವ ಜೀವಾಭಿಮಾನಿಗಳಾದ ಶೇಷ ಮತ್ತು ಬ್ರಹ್ಮರು ಅಧಿದೈವರು( ಅಥವಾ ಮಹಾಲಕ್ಷ್ಮೀಯು ಅಧಿದೈವತ). ಜೀವರ ದೇಹಗಳಲ್ಲಿ ನೆಲೆಸಿದ್ದು ಯಜ್ಞಭೋಕ್ತೃವಾದ ಭಗವಂತನೇ ಅಧಿಯಜ್ಞ.[೩]

ಭಗವತತ್ತ್ವದ ಅರಿವಿಗೆ ಸಹಕಾರಿಯಾದ ದೇಹ, ಇಂದ್ರಿಯಾದಿಗಳ, ಪೃಥ್ವಿ ಮೊದಲಾದ ಜಡ ಪದಾರ್ಥಗಳ ಅವುಗಳ ಅಭಿಮಾನಿ ದೇವತೆಗಳ ಹಾಗೂ ಪ್ರಕೃತಿತತ್ತ್ವ ಮೊದಲಾದವುಗಳ ಪರಿಜ್ಞಾನವು ಸಹ ಅತ್ಯಗತ್ಯ ಎಂಬುದು ಇಲ್ಲಿಯ ಭಾವ.

---

೧. ಮರಣಕಾಲಕರ್ತವ್ಯಗತ್ಯಾದ್ಯಸ್ಮಿನ್ನಧ್ಯಾಯ ಉಪದಿಶತಿ। – ಗೀ. ಭಾ.
ಉಕ್ತವ್ಯಾಖ್ಯಾನಪೂರ್ವಕಂ ಬ್ರಹ್ಮಪ್ರಾಪ್ತಿರುಚ್ಯತೇ। – ಗೀ. ತಾ.

೨. ಅಕ್ಷರಂ ಬ್ರಹ್ಮ ಪರಮಂ ಸ್ವಭಾವೋಽಧ್ಯಾತ್ಮಮುಚ್ಯತೇ।
ಭೂತಭಾವೋದ್ಭವಕರೋ ವಿಸರ್ಗಃ ಕರ್ಮಸಂಜ್ಞಿತಃ॥
ಅಧಿಭೂತಂ ಕ್ಷರೋ ಭಾವಃ ಪುರುಷಶ್ಚಾಧಿದೈವತಮ್।
ಅಧಿಯಜ್ಞೋಽಹಮೇವಾತ್ರ ದೇಹೇ ದೇಹಭೃತಾಂವರ॥ – ಗೀತಾ (೮/೩,೪)

೩. 'ದೇಹಸ್ಥವಿಷ್ಣುರೂಪಾಣಿ ಅಧಿಯಜ್ಞ ಇತೀರಿತಃ
ಕರ್ಮೇಶ್ವರಸ್ಯ ಸೃಷ್ಟ್ಯಾಖ್ಯಂ ತಚ್ಚಾಪೀಚ್ಛಾದ್ಯಮುಚ್ಯತೇ।
ಅಧಿಭೂತಂ ಜಡಂ ಪ್ರೋಕ್ತಮಧ್ಯಾತ್ಮಂ ಜೀವ ಉಚ್ಯತೇ।
ಹಿರಣ್ಯಗರ್ಭೋಽಧಿದೈವಂ ದೇವಃ ಸಂಕರ್ಷಣೋಽಪಿ ವಾ।
ಬ್ರಹ್ಮ ನಾರಾಯಣೋ ದೇವಃ ಸರ್ವದೇವೇಶ್ವರೇಶ್ವರಃ' ಇತಿ
'ಯಥಾಪ್ರತೀತಂ ವಾ ಸರ್ವಮತ್ರ ವೈ ನ ವಿರುಧ್ಯತೇಽಪಿ' ಇತಿ ಚ॥ – ಗೀ.ಭಾ. (೮/೪)

## ಅಂತ್ಯಕಾಲದ ಚಿಂತನೆಯ ಮಹತ್ತ್ವ

ಮರಣಕಾಲದಲ್ಲಿ ಭಗವಂತನನ್ನು ನೆನೆಯುತ್ತಾ ದೇಹ ತೊರೆದು ತೆರಳುವವನು ಅವನನ್ನೇ ತಲುಪುವನು. [೧]ಸಾಯುವ ಕ್ಷಣದಲ್ಲಿ ಯಾವ ವಸ್ತುವನ್ನು ಚಿಂತಿಸುತ್ತಾ ಜೀವಿಯು ದೇಹ ತೊರೆಯುವನೋ, ಅಂತಹ ಸಂತತಚಿಂತನೆಯ ಫಲವಾಗಿ ಅವನು ಅಂತಹ ವಸ್ತುವಾಗಿಯೇ ಜನಿಸುವನು; ಜಿಂಕೆಯ ಮರಿಯ ಚಿಂತನೆಯಲ್ಲಿ ತೊಡಗಿದ ಭರತ ಜಿಂಕೆಯಾಗಿಯೇ ಜನಿಸಿದ. ಶ್ರೀಮದ್ಭಾಗವತದ ಕಥೆ ಇದಕ್ಕೆ ನಿದರ್ಶನ. ಆದ್ದರಿಂದ ಅಂತ್ಯಕಾಲದಲ್ಲಿ ಭಗವಂತನನ್ನು ಸ್ಮರಿಸುವುದು ಅವನ ಲೋಕವನ್ನು ತಲುಪುವ ಪರಮಸಾಧನ.

*****

ಅಂತ್ಯಕಾಲದಲ್ಲಿ ಭಗವಂತನನ್ನು ಸ್ಮರಿಸುವ ಅವಕಾಶ ಹೊಂದಲು ಭಗವತ್ಸಾಕ್ಷಾತ್ಕಾರ ಪಡೆದವನಿಗೆ ಮಾತ್ರ ಸಾಧ್ಯ. ಭಗವತ್ಸಾಕ್ಷಾತ್ಕಾರಕ್ಕೆ ಅನೇಕ ಜನ್ಮಗಳ ಸಾಧನೆ ಅತ್ಯವಶ್ಯ.

ಎಂಟನೆಯ ಅಧ್ಯಾಯದವರೆಗೆ ಬದುಕುವ ಬಗೆಯನ್ನು ತಿಳಿಸಿದ ಗೀತೆ, ಈ ಎಂಟನೆಯ ಅಧ್ಯಾಯದಲ್ಲಿ ಸಾಯುವ ಬಗೆಯನ್ನು ನಿರೂಪಿಸಿದೆ. ಬದುಕುವುದು ಒಂದು ಕಲೆಯಾಗಿರುವಂತೆ ಸಾಯುವುದು ಸಹ ಒಂದು ಕಲೆ ಎಂದು ಇದರ ಭಾವ. ವಿದ್ಯಾರ್ಥಿ ಉತ್ತೀರ್ಣನಾಗಲು ಓದುವುದು ಒಂದು ಕಲೆಯಾಗಿರುವಂತೆ ಪರೀಕ್ಷೆಯಲ್ಲಿ ಅದನ್ನು ವಿಹಿತ ರೀತಿಯಲ್ಲಿ ಬರೆಯುವುದು ಸಹ ಒಂದು ಕಲೆಯಾಗಿರುವುದು ಹೇಗೋ ಹಾಗೆ.

ವಿದ್ಯಾರ್ಥಿಯ ವರ್ಷದ ಅಧ್ಯಯನದ ಫಲ ಪರೀಕ್ಷೆಯ ಕಾಲದಲ್ಲಿ ಕಾಣುವಂತೆ ಸಾಧಕನ ಜೀವನದ ಫಲಶ್ರುತಿ ಅವನು ದೇಹತೊರೆಯುವ ಕ್ಷಣದಲ್ಲಿ ಗೋಚರಿಸುತ್ತದೆ. ಪರೀಕ್ಷಾಕಾಲದಲ್ಲಿ ಓದಿದ್ದರ ವಿಸ್ಮರಣೆ ವಿದ್ಯಾರ್ಥಿಗೆ ಮರುಪರೀಕ್ಷೆಗೆ ಕಾರಣವಾಗುವಂತೆ ಅಂತ್ಯಕಾಲದಲ್ಲಿ ಭಗವಂತನ ವಿಸ್ಮರಣೆ ಸಾಧಕನ ಮರುಹುಟ್ಟಿಗೆ ಕಾರಣವಾಗುತ್ತದೆ.

*****

ವಿದ್ಯಾರ್ಥಿ ಪರೀಕ್ಷೆಯ ಮೂರು ತಾಸುಗಳ ಬರವಣಿಗೆಗೆ ವರ್ಷಪೂರ್ತಿಯ ಅಧ್ಯಯನ ಸಾಧನವಾಗುತ್ತದೆ. ಸಾಧಕನ ಅಂತ್ಯಕಾಲದ ಹರಿಸ್ಮರಣೆಗೆ ಅವನ ಸಮಗ್ರಸಾಧನವೇ ಕಾರಣ. ಅನುಗಾಲದ ಚಿಂತನೆ ಅಂತ್ಯಕಾಲದ ಚಿಂತನೆಗೆ ಸಾಧನ ಎಂದರ್ಥ. 'ಸಂತತಂ ಚಿಂತಯೇನಂತಂ ಅಂತಕಾಲೇ ವಿಶೇಷತಃ' ಎಂದೇ

---

೧. ಅಂತಕಾಲೇ ಚ ಮಾಮೇವ ಸ್ಮರನ್ ಮುಕ್ತ್ವಾ ಕಲೇವರಮ್ ।
ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ ॥
ಯಂ ಯಂ ವಾಽಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಲೇವರಮ್ ।
ತಂ ತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ ॥ – ಗೀತಾ (೮/೫,೬)

ಆಚಾರ್ಯವಾಣಿ. ಸಂತತಚಿಂತನೆಗೆ ಜಡಭರತ ನಿದರ್ಶನವಾದರೆ, ಅಂತ್ಯಕಾಲದ ಚಿಂತನೆಗೆ ಅಜಾಮಿಳ ನಿದರ್ಶನ.

*****

ಪರಮಾತ್ಮನು ಸರ್ವಜ್ಞ, ಅನಾದಿ, ಸರ್ವಶಿಕ್ಷಕ, ಅಣುವಿಗಿಂತ ಅಣು, ಸರ್ವಧಾರಕ, ಪೋಷಕ ಅಚಿಂತ್ಯರೂಪ, ಸೂರ್ಯನಂತೆ ಪ್ರಕಾಶಕ, ತಮಸ್ಸಿಗೆ (ಪ್ರಕೃತಿ ಹಾಗೂ ಮೃತ್ಯುಗಳಿಗೆ) ಅತೀತ ಎಂದು ಅರಿತು ಅವನನ್ನು ಸದಾ ಸ್ಮರಿಸುತ್ತಿರಬೇಕು: ಅಂತ್ಯಕಾಲದಲ್ಲಿ ಇನ್ನೂ ವಿಶೇಷವಾಗಿ ಸ್ಮರಿಸಬೇಕು.[೧] ವಿದ್ಯಾರ್ಥಿ ವರ್ಷವಿಡೀ ಕ್ರಮವಾಗಿ ಓದನ್ನು ಹೆಚ್ಚಿಸುತ್ತಾ ಹೋಗಿ ಪರೀಕ್ಷೆಯ ಕಾಲದಲ್ಲಿ ಅತ್ಯಂತ ಹೆಚ್ಚಿನ ರೀತಿಯಲ್ಲಿ ಓದುವುದು ಹೇಗೋ ಹಾಗೆ ಎಂದರ್ಥ: **ಸಂತತಂ ಚಿಂತಯೇಽನಂತಮಂತಕಾಲೇ ವಿಶೇಷತಃ**

*****

ವೇದಗಳನ್ನು ಬಲ್ಲ ಜ್ಞಾನಿಗಳು, ಕಾಮಕ್ರೋಧಗಳನ್ನು ನೀಗಿದ ಸಾಧಕರು, ಮನಸ್ಸು ಮೊದಲಾದ ಇಂದ್ರಿಯಗಳನ್ನು ಬ್ರಹ್ಮಚಿಂತನೆಯಲ್ಲೇ ಸದಾ ತೊಡಗಿಸಿಕೊಳ್ಳುವವರೂ ಭಗವಂತನನ್ನು ತಲುಪಲು ಅರ್ಹರಾಗುವರು.

ಅಂತ್ಯಕಾಲದಲ್ಲಿ ಭಕ್ತಿಯಿಂದ ಕೂಡಿ, ಅಚಲವಾದ ಮನಸ್ಸಿನಿಂದ ಹುಬ್ಬುಗಳ ನಡುವೆ ಪ್ರಾಣವನ್ನು ನೆಲೆಗೊಳಿಸಬೇಕು.[೨] ಎಂದರೆ ಧ್ಯಾನ ಕಾಲದಲ್ಲಿ ಹೇಗೋ ಹಾಗೆ ವಿಹಿತವಾದ ಆಸನದಲ್ಲಿ ವಿಹಿತವಾದ ಭಂಗಿಯಲ್ಲಿ ಕುಳಿತು ಪ್ರಾಣಾಯಾಮವನ್ನು ಮಾಡಿ ಪ್ರಾಣ ಶಕ್ತಿಯನ್ನು ಹುಬ್ಬುಗಳ ಮಧ್ಯೆ ಕೇಂದ್ರಿಕರಿಸಬೇಕು ಎಂದರ್ಥ.

*****

## ದೇಹ ತೊರೆಯುವ ಬಗೆ

[೩]ಸುಷುಮ್ನಾನಾಡಿಯನ್ನು ಹೊರತು ಇತರ ಸಕಲನಾಡೀದ್ವಾರಗಳನ್ನು ಬಂಧಿಸಿ, ಮನಸ್ಸನ್ನು ಭಗವಂತನಲ್ಲಿ ನೆಲೆಗೊಳಿಸಿ, ಪ್ರಾಣವಾಯುವನ್ನು ನೆತ್ತಿಯಲ್ಲಿರಿಸಿ, ಅಖಂಡಸ್ಮೃತಿರೂಪವಾದ ಯೋಗದಲ್ಲಿ ತೊಡಗಿಸಿಕೊಂಡು, 'ಓಂ'[೪] ಎಂಬ

---

೧. ಕವಿಂ ಪುರಾಣಮನುಶಾಸಿತಾರಮಣೋರಣೀಯಾಂಸಮನುಸ್ಮರೇದ್ಯಃ।
ಸರ್ವಸ್ಯ ಧಾತಾರಮಚಿಂತ್ಯರೂಪಮಾದಿತ್ಯವರ್ಣಂ ತಮಸಃ ಪರಸ್ತಾತ್ ॥ – ಗೀತಾ (೮/೯)

೨. ಪ್ರಯಾಣಕಾಲೇ ಮನಸಾಽಚಲೇನ ಭಕ್ತ್ಯಾಯುಕ್ತೋ ಯೋಗಬಲೇನ ಚೈವ।
ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯ ಸಮ್ಯಕ್ ಸ ತಂ ಪರಂ ಪುರುಷಮುಪೈತಿ ದಿವ್ಯಮ್ ॥
– ಗೀತಾ (೮/೧೦)

೩. ಸರ್ವದ್ವಾರಾಣಿ ಸಂಯಮ್ಯ ಮನೋ ಹೃದಿ ನಿರುಧ್ಯ ಚ।
ಮೂರ್ಧ್ನ್ಯಾಧಾಯಾತ್ಮನಃ ಪ್ರಾಣಮಾಸ್ಥಿತೋ ಯೋಗಧಾರಣಾಮ್॥ – ಗೀತಾ (೮/೧೨)

೪. ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ ಮಾಮನುಸ್ಮರನ್।
ಯಃ ಪ್ರಯಾತಿ ತ್ಯಜನ್ ದೇಹಂ ಸ ಯಾತಿ ಪರಮಾಂ ಗತಿಮ್॥ – ಗೀತಾ (೮/೧೩)

ಒಂದಕ್ಷರದಿಂದ ಪ್ರತಿಪಾದಿತವಾದ ಪರತತ್ತ್ವವನ್ನು ಭಕ್ತಿಯಿಂದ ಸ್ಮರಿಸುತ್ತಾ ದೇಹತೊರೆದು ಸಾಗುವವನು ಪರಗತಿಯನ್ನು ಪಡೆದುಕೊಳ್ಳುವವನು.

ಭಗವಂತನು ಅನಂತಾನಂತಕಲ್ಯಾಣಗುಣಪೂರ್ಣ ಹಾಗೂ ಸಕಲದೋಷದೂರ; ಜಗಜ್ಜನ್ಮಾದಿ ಕಾರಣ, ಸಕಲ ಶಾಸ್ತ್ರ ಪ್ರತಿಪಾದ್ಯ; ಅತ್ಯಂತ ಉತ್ತಮ ಎಂಬುದಾಗಿ ಸಕಲ ಶಾಸ್ತ್ರಗಳಿಂದ ನಿರೂಪಿತ ಎಂಬುದು 'ಓಂ'ಕಾರದ ಅರ್ಥ; ಸಕಲ ವಿಧದಲ್ಲೂ ಪರಿಪೂರ್ಣ ಎಂಬುದು ಇವೆಲ್ಲವುಗಳ ಸಾರ[೧]; ಓಂ ಎಂಬುದು ಸಕಲ ಶಾಸ್ತ್ರಗಳ ಬೀಜ ಮಂತ್ರವಾಗಿದ್ದು ಅದರಿಂದ ಪ್ರತಿಪಾದ್ಯನಾದ ಪರಮಾತ್ಮ ಸಕಲ ಶಾಸ್ತ್ರ ಪ್ರತಿಪಾದ್ಯನೂ ಆದ ಪರತತ್ತ್ವ ಎಂದು ತಿಳಿಯಬೇಕು. ಆದ್ದರಿಂದ 'ಓಂ' ಎಂದು ಭಗವಂತನನ್ನು ಚಿಂತಿಸಲು, ಜಪಿಸಲು ಜಿಜ್ಞಾಸುವಾದವನು ಸರ್ವ ಬಗೆಯಿಂದಲೂ ಸದಾ ಪ್ರಯತ್ನಿಸುತ್ತಾ ಅಂತ್ಯ ಕಾಲದಲ್ಲೂ ಹಾಗೆಯೇ ಚಿಂತಿಸಿ ಸದ್ಗತಿಯನ್ನು ಪಡೆಯಬೇಕು ಎಂದರ್ಥ.

*****

ಅನುಗಾಲ ಬೇರೆಡೆಗೆ ಹರಿಯದ ದೃಢಮನಸ್ಸಿನಿಂದ ಪ್ರತಿನಿತ್ಯ ಭಗವಂತನನ್ನು ಸ್ಮರಿಸುವವನಿಗೆ ಅಂತ್ಯಕಾಲದ ಸ್ಮರಣೆ ಕಷ್ಟವೆನ್ನಿಸದು. ಪ್ರತಿನಿತ್ಯ ಅಂದಿನ ತರಗತಿಯಪಾಠಗಳನ್ನು ಓದುವವನಿಗೆ ಪರೀಕ್ಷೆಯ ಸಮಯದಲ್ಲಿ ಓದು ಶ್ರಮದಾಯಕವೆನ್ನಿಸದು. ಹಾಗೆ ಮಾಡದೇ ಇತರ ಹವ್ಯಾಸದಲ್ಲಿ ದಿನಗಳನ್ನು ಕಳೆದು ಪರೀಕ್ಷೆ ಕಾಲದಲ್ಲಿ ಮಾತ್ರ ಓದಲು ತೊಡಗುವವನಿಗೆ ಗಡಿಬಿಡಿ ಆತಂಕಗಳ ಮಧ್ಯೆ ಓದು ದುಸ್ಸಾಧ್ಯವೆನ್ನಿಸುವುದು. ಉತ್ತೀರ್ಣನಾಗುವುದು ಸಹ ಅಸಾಧ್ಯವೆನ್ನಿಸುವುದು. ಬಾಲಕನಾಗಿದ್ದಾಗಲೇ ಪರತತ್ತ್ವ ಚಿಂತನೆಗೆ ತೊಡಗಬೇಕು ಎಂಬ ಪ್ರಹ್ಲಾದನ ಉಪದೇಶ ವಾಣಿ ಇದರ ವಿವರಣೆಯಂತಿದೆ: 'ಕೌಮಾರ ಆಚರೇತ್ ಪ್ರಾಜ್ಞಃ ಧರ್ಮಾನ್ ಭಾಗವತಾನಿಹ'[೨].

*****

## ಹರಿಲೋಕವು ನಿತ್ಯ

[೩]ಬ್ರಹ್ಮ ಮೊದಲಾದ ದೇವತೆಗಳ ಲೋಕಗಳೆಲ್ಲ ಅನಿತ್ಯ; ಎಂದರೆ ಭೂಃ, ಭುವಃ, ಸ್ವಃ, ಮಹಃ, ಜನಃ, ತಪಃ ಎಂಬ ಮೇಲಿನ ಏಳು ಲೋಕಗಳು, ಅತಳ, ವಿತಳ, ತಳಾತಳ,

---

೧. ಓಮಶೇಷಗುಣಾಧಾರ ಇತಿ ನಾರಾಯಣೋಽಪ್ಯಸೌ। - ಋಗ್ಭಾಷ್ಯ

೨. ಶ್ರೀಮದ್ಭಾಗವತ (೭/೬/೬)

೩. ಆಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ।
ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ॥ - ಗೀತಾ (೮/೧೬)

ರಸಾತಳ, ಮಹಾತಳ ಹಾಗೂ ಪಾತಾಳ ಎಂಬ ಕೆಳಗಿನ ಏಳು ಲೋಕಗಳು ಅನಿತ್ಯ ಎಂದರ್ಥ. ಎಂದರೆ ಪ್ರಳಯಕಾಲದಲ್ಲಿ ಅವೆಲ್ಲ ನಾಶಹೊಂದುವಂತಹವು. ಆದ್ದರಿಂದ ಅಲ್ಲಿಗೆ ತೆರಳುವವರು[1] ಸಹ ದುಃಖದ ಬೀಡಾದ ಈ ಸಂಸಾರಕ್ಕೆ ಮತ್ತೆ ಮರಳುವುದು ತಪ್ಪಿದ್ದಲ್ಲ. ಆದರೆ ವಿಷ್ಣುಲೋಕ ಹಾಗಲ್ಲ; ಅದು ಪ್ರಳಯಕಾಲದಲ್ಲೂ ಅಳಿಯದ ನಿತ್ಯಲೋಕ. ಆದ್ದರಿಂದ ಅಲ್ಲಿಗೆ ತೆರಳಿದವರು ಮತ್ತೆಂದೂ ಮರಳರು. ಸಾಟಿಯಿಲ್ಲದ ಆನಂದವನ್ನು ಅನುಭವಿಸುತ್ತಾ ಅಲ್ಲಿಯೇ ಶಾಶ್ವತವಾಗಿ ನೆಲೆಸಿಬಿಡುವರು -ನ ಚ ಪುನರಾವರ್ತತೇ ನ ಚ ಪುನರಾವರ್ತತೇ [2]**'ಅವನ ಪುರಕೆ ಹೋದ ಜನರು ಒಮ್ಮೆಗನ್ನ ತಿರುಗರು'.**

*****

## ಪರಬ್ರಹ್ಮನ ಹಗಲುರಾತ್ರಿಗಳು

ಪರಬ್ರಹ್ಮನ ಹಗಲುರಾತ್ರಿಗಳು ಸಾವಿರಾರು ಯುಗಗಳ ಪ್ರಮಾಣದವುಗಳು.[3] ಅವನ ಹಗಲಿನಲ್ಲಿ ಅವ್ಯಕ್ತನಾದ ಅವನಿಂದ ಸಕಲಪದಾರ್ಥಗಳೂ ಹುಟ್ಟಿಬರುವವು. ಅವನ ರಾತ್ರಿಕಾಲದಲ್ಲಿ ಹಾಗೆ ಹುಟ್ಟಿದ ಸಕಲಪದಾರ್ಥಗಳು ಪುನಃ ಲಯಹೊಂದಿಬಿಡುವವು. ಪರಮಾತ್ಮನ ಪ್ರತಿ ಹಗಲು ರಾತ್ರಿಗಳಲ್ಲೂ ಇಂತಹ ಹುಟ್ಟುಸಾವುಗಳು ನಡೆಯುತ್ತಲೇ ಇರುವವು. ಇವೆಲ್ಲಕ್ಕೆ ಕಾರಣನಾದ ಭಗವಂತನು ಮಾತ್ರ ಎಂದೂ ನಾಶವಾಗದ ಸನಾತನತತ್ತ್ವ. ಅದಕ್ಕೆಂದೇ ಅವನು ಪರಮಾಕ್ಷರ. ಅವನ ಬಳಿಗೆ ತೆರಳಿದವರೂ ಸಹ

---

೧. ಈ ಲೋಕಗಳಿಗೆ ತೆರಳುವುದು ಸಹ ಎರಡು ರೀತಿಯಲ್ಲಿ; ಅಗತ್ಯವಾದ ಸಾಧನೆಯನ್ನು ಪೂರೈಸಿ ಅಲ್ಲಿಗೆ ತೆರಳುವುದು ಒಂದು ಬಗೆಯಾದರೆ ಕೇವಲ ದರ್ಶನಾದಿಗಳ ದೃಷ್ಟಿಯಿಂದ ತೆರಳುವುದು ಇನ್ನೊಂದು ಬಗೆ. ಅಧ್ಯಯನಾದಿ ಕಾರಣಗಳಿಂದ ತೆರಳುವುದು ಅಥವಾ ಕೇವಲ ನೋಡಲೆಂದು ತೆರಳುವುದು ಎಂಬುದಾಗಿ ವಿದೇಶ ಯಾನವೂ ಸಹ ಎರಡು ಬಗೆಯಾಗಿ ಇರುವಂತೆ ಜ್ಯೋತಿಷ್ಟೋಮಾದಿ ಯಾಗಗಳನ್ನು ಮಾಡಿ ಸ್ವರ್ಗಾದಿಗಳನ್ನು ಸಾಧಿಸುವವರು ಒಂದು ಬಗೆಯವರಾದರೆ. ಆಕ್ರಮಣ ಮೊದಲಾದ ಕಾರಣಕ್ಕಾಗಿ ಹಿರಣ್ಯಕಶಿಪುವಿನಂತಹವರು ಆ ಲೋಕಗಳಿಗೆ ತೆರಳಿದ್ದು ಇನ್ನೊಂದು ಬಗೆಯದು. ಸ್ವರ್ಗದ ಮೇಲಿನ ಲೋಕಗಳಿಗೆ ಮಾತ್ರ ಕೇವಲ ಮೋಕ್ಷಕ್ಕೆ ಅರ್ಹರಾದವರಷ್ಟೇ ತಲುಪಲು ಸಾಧ್ಯ. ಆದರೆ ಅವರು ಸಹ ಪ್ರಳಯ ಕಾಲದಲ್ಲಿ ಆ ಲೋಕಗಳು ನಾಶವಾಗುವುದರಿಂದ ಅವುಗಳಿಂದ ವಿಷ್ಣುಲೋಕಗಳಿಗೆ ತೆರಳಬೇಕಾಗುವುದು. ಹಿರಣ್ಯಕಶಿಪು ಮೊದಲಾದವರು ಕೇವಲ ವರಬಲಾದಿಗಳಿಂದ ವೈಕುಂಠದ ಅಮುಕ್ತ ಸ್ಥಾನಕ್ಕೆ ಹೋಗಿದ್ದುದುಂಟು. ಆದರೆ ಅದು ನಿಜಾರ್ಥದಲ್ಲಿ ಆ ಲೋಕಗಳ ಪ್ರಾಪ್ತಿ ಎನ್ನಿಸದು. ಶ್ರೀಹರಿಯ ನೆಲೆ ಮಾತ್ರವೇ ಪ್ರಳಯ ಕಾಲದಲ್ಲೂ ಅಳಿಯದ ನಿತ್ಯ ಲೋಕ. ಅಲ್ಲಿಗೆ ಹೋಗಲು ಈ ಅಧ್ಯಾಯದಲ್ಲಿ ತಿಳಿಸಿರುವಂತೆ ಬ್ರಹ್ಮಸಾಕ್ಷಾತ್ಕಾರವೇ ಮುಖ್ಯ ಸಾಧನ ಎಂದು ತಿಳಿಯಬೇಕು.

೨. ಶ್ರೀಗೋಪಾಲದಾಸರು

೩. ಸಹಸ್ರಯುಗಪರ್ಯಂತಮಹರ್ಯದ್ಬ್ರಹ್ಮಣೋ ವಿದುಃ।
ರಾತ್ರಿಂ ಯುಗಸಹಸ್ರಾಂತಾಂ ತೇಽಹೋರಾತ್ರವಿದೋ ಜನಾಃ॥ – ಗೀತಾ (೮/೧೭)

ಮತ್ತೊಮ್ಮೆ ಮರಳದಿರುವುದೂ ಅದಕ್ಕೇ. ಅವನ ಲೋಕವೂ ಅವನಂತೆಯೇ ಸನಾತನವಾದುದು. ಅದಕ್ಕಿಂತ ಹಿರಿದಾದ ಬೇರೊಂದು ಲೋಕ ಇಲ್ಲವೇ ಇಲ್ಲ.

ಅಂತಹ ಭಗವಂತನು ನಿಲುಕುವುದು ನಿರ್ಮಲವಾದ ಭಕ್ತಿಗೆ ಮಾತ್ರ. ಬೇರಾವ ಸಾಧನವೂ ಅವನ ಪೂರ್ಣಾನುಗ್ರಹಕ್ಕೆ ಸಾಧನವಾಗದು. ಇತರ ಎಲ್ಲ ಪ್ರಾಣಿಗಳು ಅವನಲ್ಲಿಯೇ ನೆಲೆಸಿವೆ. ಅವನು ಎಲ್ಲರೊಳಗೂ ವ್ಯಾಪಿಸಿ, ನಿಂತಿರುವನು.

*****

## ಶುಕ್ಲಕೃಷ್ಣ ಗತಿಗಳು

ಬ್ರಹ್ಮಜ್ಞಾನಿಯು ಭಗವಂತನನ್ನು ಸೇರುವ ಮಾರ್ಗವೂ ವಿಭಿನ್ನವಾದುದು. ಅದಕ್ಕೆ ಶುಕ್ಲಗತಿ ಎನ್ನುವರು. ಅಗ್ನಿ, ಜ್ಯೋತಿ(ಅರ್ಚಿ), (ಅಭಿಜಿತ್ತಿನಿಂದ ಕೂಡಿದ)ಹಗಲಿನ ದೇವತೆ, (ಹುಣ್ಣಿಮೆದೇವತೆಯೊಂದಿಗೆ ಸೇರಿದ)ಶುಕ್ಲಪಕ್ಷದ ದೇವತೆ, (ವಿಷ್ವಭಿಮಾನಿ-ದೇವತೆಯೊಂದಿಗೆ)ಉತ್ತರಾಯಣದ ಆರುತಿಂಗಳುಗಳ ಆರುದೇವತೆಗಳು – ಇವುಗಳ ಮೂಲಕ ಬ್ರಹ್ಮಜ್ಞಾನಿಗಳು ಭಗವಂತನನ್ನು ತಲುಪುವರು[೧].

ಇಲ್ಲಿ ಅಗ್ನಿ, ಜ್ಯೋತಿ, ಹಗಲು, ಇತ್ಯಾದಿಯಾಗಿ ಕೇವಲ ವಸ್ತುಗಳೆಂಬಂತೆ ಉಲ್ಲೇಖಿಸಿದಂತೆ ಕಾಣುವುದು. ಆದರೆ ಬ್ರಹ್ಮ ಸೂತ್ರಗಳಲ್ಲಿ ನಿರೂಪಿತವಾಗಿರುವಂತೆ ಇಂತಹ ಪ್ರಸಂಗಗಳಲ್ಲಿ ಮುಖ್ಯವಾಗಿ ಅವುಗಳ ಅಭಿಮಾನಿ ದೇವತೆಗಳನ್ನು ಗ್ರಹಿಸಬೇಕು ಎಂಬ ವಿಶೇಷಾಂಶ ಮಧ್ವ ಭಾಷ್ಯದಲ್ಲಿದೆ.

*****

[೨]ಧೂಮಾಭಿಮಾನಿದೇವತೆ, ರಾತ್ರಿದೇವತೆ, ಕೃಷ್ಣಪಕ್ಷದ ಅಭಿಮಾನಿದೇವತೆ, ದಕ್ಷಿಣಾ-ಯನದ ಆರು ತಿಂಗಳುಗಳ ದೇವತೆಗಳು – ಇದು ಕರ್ಮಯೋಗಿಯು ಸಾಗುವ ಮಾರ್ಗ. ಕೊನೆಯಲ್ಲಿ ಅವನು ಚಂದ್ರನ ಜ್ಯೋತಿಯನ್ನು ತಲುಪಿ ಮತ್ತೆ ಮರಳುವನು. ಈ ಮಾರ್ಗವನ್ನು ಕೃಷ್ಣಗತಿ ಎನ್ನುವರು.

*****

ಈ ಶುಕ್ಲಕೃಷ್ಣಗತಿಗಳ ಅರಿವೂ ಸಹ ತಾರಕ. ಇವನ್ನು ಬಲ್ಲ ಯೋಗಿಗೆ ಭಗವಂತನ ಅರಿವು ತಪ್ಪದು. ಆದ್ದರಿಂದ ಇವುಗಳನ್ನು ಸರಿಯಾಗಿ ಮನನ ಮಾಡಬೇಕು.

ಈ ಶುಕ್ಲ, ಕೃಷ್ಣ ಗತಿಗಳನ್ನು ಕೇವಲ ಕಾಲಪರವಾಗಿ ಅರ್ಥ ಮಾಡಿದವರೇ ಹೆಚ್ಚು ಜನ. ಆದರೆ ಬ್ರಹ್ಮಸೂತ್ರಗಳಲ್ಲಿ ಇದರ ವಿವೇಚನೆ ಬಂದಿದೆ. ಅದರಂತೆ ಇಲ್ಲಿ ಬಂದಿರುವ

---

೧. ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಮ್ ।
ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ – ಗೀತಾ (೮/೨೪)

೨. ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಮ್ ।
ತತ್ರ ಚಾಂದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ ॥ – ಗೀತಾ (೮/೨೫)

ಹಗಲು, ರಾತ್ರಿ, ಉತ್ತರಾಯಣ, ದಕ್ಷಿಣಾಯನ ಮೊದಲಾದ ಯಾವುವೂ ಮುಖ್ಯವಾಗಿ ಕಾಲವಾಚಕವಲ್ಲ; ಅವುಗಳ ಅಭಿಮಾನಿದೇವತೆಗಳೇ ಮುಖ್ಯವಾಗಿ ವಿವಕ್ಷಿತ. ಆ ಪರಿಕಲ್ಪನೆ ಇದ್ದವರು ಯಾವ ಕಾಲದಲ್ಲಿ ಮೃತರಾದರೂ ಬ್ರಹ್ಮಲೋಕವನ್ನೇ ತಲುಪುವರು. ಆ ಅನುಸಂಧಾನ ಇಲ್ಲದವರು ಹೇಗೆ ಸತ್ತರೂ ಸೇರುವುದು ತಮ್ಮ ಕರ್ಮಕ್ಕೆ ತಕ್ಕೆ ಲೋಕವನ್ನೇ. ಈ ವಿವರ ಮಧ್ವಭಾಷ್ಯದಲ್ಲಿ ಸ್ಫುಟವಾಗಿ ಬಂದಿದೆ.

*****

ವೇದ ಓದಿದಾಗ,[೧] ಯಜ್ಞ ಮಾಡಿದಾಗ, ತಪಸ್ಸನ್ನಾಚರಿಸಿದಾಗ, ದಾನಗಳನ್ನು ನೀಡಿದಾಗ ಬರುವ ಪುಣ್ಯಕ್ಕಿಂತ ಮಿಗಿಲಾದ ಪುಣ್ಯವು ಯೋಗಿಗೆ ಲಭಿಸುವುದು; ಶ್ರೀಹರಿಯ ಲೋಕವೂ ಅವನಿಗೆ ಲಭಿಸುವುದು. ಆದ್ದರಿಂದ ಯೋಗಿಯಾಗಲು ಸರ್ವರೀತಿಯಲ್ಲೂ ಪ್ರಯತ್ನಿಸಬೇಕು.

ಇಲ್ಲಿ ಯೋಗಿಯಾಗುವುದು ಎಂದರೆ ವಿಹಿತ ಕರ್ಮವನ್ನು ತಪ್ಪದೇ ಆಚರಿಸುತ್ತಾ ಅವುಗಳ ಫಲವನ್ನು ಮಾತ್ರ ಸ್ವಲ್ಪವೂ ಬಯಸದೆ ಕೇವಲ ಭಗವತ್ಪ್ರೀತಿಯನ್ನು ಆಶಿಸಿ ಶ್ರದ್ಧೆಯಿಂದ ಭಗವಚ್ಚಿಂತನೆಯಲ್ಲಿ ತೊಡಗುವುದು ಎಂದರ್ಥ.

*****

---

೧. ವೇದೇಷು ಯಜ್ಞೇಷು ತಪಸ್ಸು ಚೈವ ದಾನೇಷು ಯತ್ ಪುಣ್ಯಫಲಂ ಪ್ರದಿಷ್ಟಮ್ ।
ಅತ್ಯೇತಿ ತತ್ ಸರ್ವಮಿದಂ ವಿದಿತ್ವಾ ಯೋಗೀ ಪರಂ ಸ್ಥಾನಮುಪೈತಿ ಚಾದ್ಯಮ್ ॥
– ಗೀತಾ (೮/೨೮)

# ಅಧ್ಯಾಯ - ೯

## ರಾಜವಿದ್ಯೆ · ರಾಜಗುಹ್ಯ

ಒಂಭತ್ತನೆಯ ಅಧ್ಯಾಯದಲ್ಲಿ ಮತ್ತೊಮ್ಮೆ ಜ್ಞಾನವಿಜ್ಞಾನಗಳ[೧] ನಿರೂಪಣೆ ಬಂದಿದೆ. ಅದನ್ನು ರಾಜವಿದ್ಯೆ – ವಿದ್ಯೆಗಳ ರಾಜ ಎಂದೂ, ರಾಜಗುಹ್ಯ– ರಹಸ್ಯಗಳ ರಾಜ ಎಂದೂ ಭಗವಂತ ಕೊಂಡಾಡಿರುವನು. ಪವಿತ್ರ, ಭಗವಂತನ ಅರಿವಿಗೆ, ಧರ್ಮದ ಪರಿಜ್ಞಾನಕ್ಕೆ ಸಾಧನ, ಆಚರಿಸಲು ಸುಲಭ ಹಾಗೂ ಮುಕ್ತಿಗೆ ಸಾಧಕ ಎಂಬುದು ಅದರ ಹಿರಿಮೆ[೨].

*****

ಭಗವಂತನನ್ನು ತೋರುವ ಧರ್ಮವನ್ನು ನಂಬದ ಜನ ಅವನನ್ನು ಪಡೆಯದೆ, ಮತ್ತೊಮ್ಮೆ ಮೃತ್ಯುಮುಖವೆನ್ನಿಸುವ ಸಂಸಾರದಲ್ಲೇ ಉಳಿದುಬಿಡುವರು.

*****

## ವಿದ್ಯೆಯ ಸ್ವರೂಪ

ಚರಾಚರಾತ್ಮಕವಾದ ಇಡೀ ವಿಶ್ವವು ಅವ್ಯಕ್ತರೂಪನಾದ ಭಗವಂತನಿಂದ ವ್ಯಾಪಿಸಲ್ಪಟ್ಟಿದೆ. ಸಕಲಪ್ರಾಣಿಗಳು ಅವನನ್ನು ಅವಲಂಬಿಸಿ ಬದುಕಿವೆ. ಅವನು ಮಾತ್ರ ಯಾರನ್ನೂ, ಯಾವುದನ್ನೂ ಎಂದೂ ಅವಲಂಬಿಸಿದವನಲ್ಲ. ಅವನೊಳಗೆ ಪ್ರಾಣಿಗಳೆಂದೂ ವ್ಯಾಪಿಸವು. ಅವನ ಸಾಮರ್ಥ್ಯ ಅಂತಹುದು. ಪ್ರಾಣಿಗಳನ್ನು ರೂಪಿಸುವ ಅವನ ದೇಹ ಅವುಗಳನ್ನು ಧರಿಸಿದೆ ಸಹ. ಆದರೆ ಅವುಗಳ ನೆರವನ್ನು ಮಾತ್ರ ಎಂದೂ ಪಡೆಯದು. ಗಾಳಿಯು ಗಗನವನ್ನು ಅವಲಂಬಿಸಿದಂತೆ, ಸಕಲಜೀವಿಗಳು ಅವನಲ್ಲೇ ನೆಲೆಸಿವೆ. ಪ್ರತಿಕಲ್ಪದ ಕೊನೆಯಲ್ಲಿ ಸಮಸ್ತ ಚರಾಚರಜಗತ್ತು ತ್ರಿಗುಣಾತ್ಮಕವಾದ ಮೂಲಪ್ರಕೃತಿಯನ್ನು ಸೇರುವುದು. ಅವನನ್ನು ಪುನಃ ಅವನು ಸೃಷ್ಟಿಕಾಲದಲ್ಲಿ ಸೃಷ್ಟಿಸುವನು[೩]. ಎಲ್ಲವೂ ಪ್ರಕೃತಿಯ ವಶ; ಪ್ರಕೃತಿಯು ಅವೆಲ್ಲವುಗಳೊಂದಿಗೆ ಭಗವಂತನ ವಶ. ಭಗವಂತನಿಗೆಂದೂ ಫಲದ ನಂಟಿಲ್ಲ. ಅದಕ್ಕೆಂದೇ ಯಾವ ಕರ್ಮವೂ ಅವನನ್ನು

---

೧. ಸಪ್ತಮಾಧ್ಯಾಯೋಕ್ತಂ ಸ್ಪಷ್ಟಯತ್ಯಸ್ಮಿನ್ನಧ್ಯಾಯೇ। – ಗೀ. ಭಾ.
ಸಪ್ತಮೋಕ್ತಂ ಪ್ರಪಂಚಯತಿ। – ಗೀ. ತಾ.

೨. ರಾಜವಿದ್ಯಾ ರಾಜಗುಹ್ಯಂ ಪವಿತ್ರಮಿದಮುತ್ತಮಮ್।
ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತುಮವ್ಯಯಮ್॥ – ಗೀತಾ (೯/೨)

೩. ಸರ್ವಭೂತಾನಿ ಕೌಂತೇಯ ಪ್ರಕೃತಿಂ ಯಾಂತಿ ಮಾಮಿಕಾಮ್।
ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌ ವಿಸೃಜಾಮ್ಯಹಮ್॥
ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ ಪುನಃ ಪುನಃ।
ಭೂತಗ್ರಾಮಮಿಮಂ ಕೃತ್ಸ್ನಮವಶಂ ಪ್ರಕೃತೇರ್ವಶಾತ್॥ – ಗೀತಾ (೯/೭,೮)

ಬಂಧಿಸದು. ಅವನ ಅನುಗ್ರಹದಿಂದಲೇ ಪ್ರಕೃತಿಯು ಚರಾಚರಜಗತ್ತನ್ನು ರೂಪಿಸುವುದು.

ಅವಿವೇಕಿಗಳು ಭಗವಂತನ ಶಾಶ್ವತವೂ, ಗುಣಪೂರ್ಣವೂ ಆದ ಉತ್ತಮಸ್ವರೂಪವನ್ನು ತಿಳಿಯದೆ, ಅವನನ್ನು ಮನುಷ್ಯದೇಹ ತಳೆದವನೆಂದು ಅವಮಾನಿಸುವರು[೧]. ಅಂತಹ ಕೀಳುಜನರು ಅಸುರಸ್ವಭಾವದವರು. ಅವರ ಪಾರಲೌಕಿಕ ಆಸೆಗಳು ಫಲಿಸವು. ಅವರು ಮಾಡುವ ಯಜ್ಞಾದಿಕರ್ಮಗಳು ವ್ಯರ್ಥವೆನ್ನಿಸುವವು. ಜ್ಞಾನವೂ ಸಿದ್ಧಿಸದು; ಮನಸ್ಸೂ ಅಡ್ಡಹಾದಿ ಹಿಡಿಯುವುದು[೨].

*****

ದೈವೀಪ್ರಕೃತಿಯ ಜನ ಮಹಾತ್ಮರು. ಅವರು ಭಗವಂತನನ್ನು ಸಕಲಪ್ರಾಣಿಗಳಿಗೂ ಆದಿ ಎಂದು, ನಾಶರಹಿತನೆಂದೂ ಏಕಮನಸ್ಸಿನಿಂದ ಸೇವಿಸುವರು. ಅನುಗಾಲ ಅವನನ್ನು ಮನಸ್ಸಿನಲ್ಲಿರಿಸಿ, ಉಪವಾಸಾದಿವ್ರತಗಳಿಂದ, ಬಗೆಬಗೆಯ ಪ್ರಯತ್ನಗಳಿಂದ ಜ್ಞಾನಸಾಧನೆಯಲ್ಲಿ ತೊಡಗುವರು. ಅವನಿಗೆ ಭಕ್ತಿಯಿಂದ ಮಣಿಯುವರು[೩].

*****

ಭಗವದ್ಭಕ್ತರಲ್ಲಿ ಕೆಲವರು ಜ್ಞಾನಯಜ್ಞದಿಂದ ಅವನನ್ನು ಆರಾಧಿಸುವರು. ನಾರಾಯಣನೆಂಬ ಏಕರೂಪದಿಂದ, ವಾಸುದೇವಾದಿಬಹುರೂಪದಿಂದ, ಶುಕ್ಲನೀಲಾದಿ-ವಿವಿಧವರ್ಣಗಳ ಪ್ರಭೇದದಿಂದ, ದ್ವಾದಶ, ಚತುರ್ವಿಂಶತಿ ಮೊದಲಾದ ರೂಪಗಳಿಂದ ಕೂಡಿದ ಅವನನ್ನು ಸೇವಿಸುವರು.

*****

## ಭಗವಂತನ ಹಿರಿಮೆ

ಜ್ಯೋತಿಷ್ಟೋಮಾದಿಕ್ರತುಗಳು ದೇವತೆಗಳನ್ನು ಉದ್ದೇಶಿಸಿ, ದ್ರವ್ಯವನ್ನು ಸಮರ್ಪಿಸುವ ಯಜ್ಞಗಳು, ಪಿತೃಗಳಿಗೆ ಸಲ್ಲಿಸುವ ತಿಲೋದಕಾದಿಗಳು, ಪ್ರಾಣಿಗಳು ತಿನ್ನುವ ಆಹಾರ, ದೇವತಾರಾಧನೆಯ ಮಂತ್ರಗಳು, ಹವಿಸ್ಸಾದ ತುಪ್ಪ, ಅಗ್ನಿ ಮತ್ತು ಹೋಮಕಾರ್ಯ

---

೧. ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್ ।
ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಮ್ ॥ - ಗೀತಾ (೯/೧೧)

೨. ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ ।
ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ॥ - ಗೀತಾ (೯/೧೨)

೩. ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ ।
ಭಜಂತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಮ್ ॥
ಸತತಂ ಕೀರ್ತಯಂತೋ ಮಾಂ ಯತಂತಶ್ಚ ದೃಢವ್ರತಾಃ ।
ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ ॥ - ಗೀತಾ (೯/೧೩,೧೪)

ಮೊದಲಾದ ಎಲ್ಲವೂ ಭಗವಂತನಿಂದಲೇ ಇವೆ. ಅವೆಲ್ಲ ನಡೆಯುವುದೂ ಅವನಿಗೋಸ್ಕರವೇ[೧].

ಭಗವಂತನು ಈ ಜಗತ್ತಿನ ತಂದೆ, ತಾಯಿ, ಪೋಷಕ, ಧಾರಕ, ತಾತ. ಎಲ್ಲರಿಂದಲೂ ತಿಳಿಯಲ್ಪಡಬೇಕಾದವನೂ ಅವನೇ. ಅವನು ಪರಮಪವಿತ್ರ. ಓಂಕಾರದಿಂದಲೂ, ಋಗ್ವೇದ ಯಜುರ್ವೇದ ಸಾಮವೇದದಿಂದಲೂ ಪರಮಮುಖ್ಯವಾಗಿ ಪ್ರತಿಪಾದಿತನಾದವನೂ ಅವನೇ[೨]. ತಂದೆತಾಯಿ ಮೊದಲಾದವರೊಳಗಿದ್ದು ಸಲಹುವವನೂ ಅವನೇ. ಮುಕ್ತಿಕೊಡುವವನು, ಪೋಷಕನು, ಸಾಕ್ಷಿ ಪ್ರಭುವು, ನೆಲೆ, ಆಸರೆ, ಅನಿಮಿತ್ತಬಂಧು ಎಲ್ಲವೂ ಅವನೇ. ಸೃಷ್ಟಿ, ಪ್ರಳಯ, ಸ್ಥಿತಿ, ನೆಲೆ, ಕಾರಣ ಎಲ್ಲ ಅವನೇ. ಎಂದೂ ನಾಶವಿಲ್ಲದವನು ಅವನು. ಸೂರ್ಯನಲ್ಲಿದ್ದು ತಾಪ ಕೊಡುವವನೂ, ಮೇಘಚಕ್ರದಲ್ಲಿದ್ದು ಮಳೆಗರೆಯುವವನೂ ಅವನೇ. ಸಾವಿನಿಂದ ರಕ್ಷಿಸುವವನೂ, ಸಾಯಿಸುವವನೂ ಸಹ ಅವನೇ. ಸಕಲಕಾರಣಗಳಲ್ಲೂ, ಕಾರ್ಯಗಳಲ್ಲೂ ನೆಲೆಸಿರುವವನೂ ಅವನೇ[೩].

*****

## ತ್ರೈವಿದ್ಯರಿಗೆ ಸದ್ಗತಿಯೂ ಲಭಿಸದು

ವೇದದ ಮೇಲ್ನೋಟದ ಅರ್ಥವನ್ನಷ್ಟೇ ತಿಳಿದು ಭಗವಂತನನ್ನು ಆರಾಧಿಸುವವರು ತ್ರೈವಿದ್ಯರು. ಅವರು ಯಜ್ಞಗಳನ್ನು ಆಚರಿಸಿ, ಸೋಮಪಾನವನ್ನು ಮಾಡಿ, ಪಾಪಗಳನ್ನು ಕಳೆದುಕೊಂಡು, ಸ್ವರ್ಗದ ಮಾರ್ಗವನ್ನು ಬೇಡುವರು. ಪುಣ್ಯಕಾರ್ಯದ ಫಲದಿಂದ ಸ್ವರ್ಗಲೋಕವನ್ನು ಸೇರುವರು; ಅಲ್ಲಿ ದೇವತೆಗಳಿಗೆ ಲಭಿಸುವ ದಿವ್ಯಭೋಗಗಳನ್ನು ಅನುಭವಿಸುವರು. ಆದರೆ ಪುಣ್ಯತೀರಿದ ಮೇಲೆ ಮತ್ತೆ ಭೂಮಿಗೆ ಮರಳುವರು. ಮತ್ತೆ ಕರ್ಮ, ಮತ್ತೆ ಸ್ವರ್ಗ – ಇದು ಅವರ ರೀತಿ. ಅವರೆಂದೂ ಶಾಶ್ವತವಾದ ಸದ್ಗತಿಯನ್ನು ಪಡೆಯರು[೪].

---

೧. ಅಹಂ ಕ್ರತುರಹಂ ಯಜ್ಞಃ ಸ್ವಧಾऽಹಮಹಮೌಷಧಮ್ ।
ಮಂತ್ರೋऽಹಮಹಮೇವಾಜ್ಯಮಹಮಗ್ನಿರಹಂ ಹುತಮ್ ॥ – ಗೀತಾ (೯/೧೬)

೨. ಪಿತಾऽಹಮಸ್ಯ ಜಗತೋ ಮಾತಾ ಧಾತಾ ಪಿತಾಮಹಃ ।
ವೇದ್ಯಂ ಪವಿತ್ರಮೋಂಕಾರ ಋಕ್ ಸಾಮ ಯಜುರೇವ ಚ ॥ – ಗೀತಾ (೯/೧೭)

೩. ತಪಾಮ್ಯಹಮಹಂ ವರ್ಷಂ ನಿಗೃಹ್ಣಾಮ್ಯುತ್ಸೃಜಾಮಿ ಚ ।
ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹಮರ್ಜುನ ॥ – ಗೀತಾ (೯/೧೯)

೪. ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾ ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ ।
ತೇ ಪುಣ್ಯಮಾಸಾದ್ಯ ಸುರೇಂದ್ರಲೋಕಮಶ್ನಂತಿ ದಿವ್ಯಾನ್ ದಿವಿ ದೇವಭೋಗಾನ್ ॥
ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ ।
ಏವಂ ತ್ರಯೀಧರ್ಮಮನುಪ್ರಪನ್ನಾ ಗತಾಗತಂ ಕಾಮಕಾಮಾ ಲಭಂತೇ ॥ – ಗೀತಾ (೯/೨೦,೨೧)

ಸ್ವರ್ಗಲೋಕವು ಭೂಲೋಕದಂತಲ್ಲ ;ಅಲ್ಲಿಯ ವಾಸದ ಕಾಲ ಸಾವಿರ, ಲಕ್ಷ ವರ್ಷಗಳಷ್ಟು ದೀರ್ಘಕಾಲ. ಅಲ್ಲಿಯ ಭೋಗಗಳು ಸಹ ವಿಲಕ್ಷಣವಾದವು. ಆದರೆ ಅನಿತ್ಯ ಎಂಬ ಕಾರಣದಿಂದ ಭಗವದ್ಗೀತೆ ಅದನ್ನು ಬಯಸುವವರು ವಿವೇಕಿಗಳಲ್ಲ ಎಂದು ಕರೆದಿದೆ. ಇಷ್ಟು ಉತ್ತಮವೆನ್ನಿಸಿದ ಸ್ವರ್ಗಲೋಕಕ್ಕೆ ಹಾತೊರೆಯುವವರನ್ನೇ ಅವಿವೇಕಿಗಳು ಎಂದು ಶಾಸ್ತ್ರ ಸಾರಿರುವಾಗ, ಕೇವಲ ಕೆಲವೇ ಕೆಲವು ದಶಕಗಳಷ್ಟು ಮಾತ್ರ ಸೀಮಿತ ಸುಖ ನೀಡುವ ಭೂಲೋಕದ ಸುಖಕ್ಕಾಗಿ ಸಲ್ಲದ್ದಕ್ಕೆ ತೊಡಗುವ ಭ್ರಷ್ಟ ಜನತೆಯ ಸ್ಥಿತಿ ಅತ್ಯಂತ ಹೇಯ ಎಂದು ಸ್ಫುಟಪಡುವುದು.

*****

## ಯೋಗಕ್ಷೇಮಂ ವಹಾಮ್ಯಹಮ್

**ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥** (೯/೨೨)

ಯಾರು ಇತರ ಚಿಂತನೆಗಳನ್ನು ತೊರೆದು, ಭಗವಂತನನ್ನೇ ನೆಚ್ಚಿ ಭಕ್ತಿಯಿಂದ ವಿಶೇಷವಾಗಿ ಆರಾಧಿಸುವರೋ, ಅಂತಹವರ ಯೋಗಕ್ಷೇಮವನ್ನು ಭಗವಂತನೇ ವಹಿಸುವನು. ತನ್ನನ್ನು ಚಿಂತಿಸುವವರಿಗೆ ಬೇರಾವ ಚಿಂತೆಯೂ ಬರದಂತೆ ಅವನು ಪಾಲಿಸುವನು.

ಸರ್ಕಾರದ ಕೆಲಸವನ್ನು ನಿರ್ವಹಿಸುವವರಿಗೆ ವೇತನ, ಭತ್ಯೆ, ಬಡ್ತಿ, ವೈದ್ಯಕೀಯ ಭತ್ಯೆ, ನಿವೃತ್ತಿ ವೇತನ, ಮರಣಾನಂತರ ಕುಟುಂಬ ವೇತನ ಹೀಗೆ ಸೌಲಭ್ಯಗಳ ಸರಮಾಲೆ ಲಭಿಸುವುದು; ಭಗವಂತನನ್ನು ನಂಬಿ ಅವನಿಗಾಗಿ ಜೀವನವನ್ನು ಮುಡಿಪಿಡುವವರಿಗೆ ಇಹ ಪರಗಳ ಸಕಲ ಭೋಗ ಭಾಗ್ಯಗಳು ಸಹ ಪೂರ್ಣ ಪ್ರಮಾಣದಲ್ಲಿ ಲಭಿಸುವುದು ನಿಶ್ಚಿತ ಎಂಬುದು ಇಲ್ಲಿಯ ಭಾವ. ಇಲ್ಲದ್ದನ್ನು ಪಡೆದುಕೊಳ್ಳುವುದು ಯೋಗ ಎನ್ನಿಸುವುದು. ಹಾಗೆ ಲಭಿಸಿದ್ದು ಸುರಕ್ಷಿತ ಉಳಿಯುವುದಕ್ಕೆ ಕ್ಷೇಮ ಎನ್ನುವರು. ತನ್ನ ಭಕ್ತರಿಗೆ ಅಂತಹ ಯೋಗಕ್ಷೇಮವನ್ನು ತಾನು ತಪ್ಪದೇ ನೀಡುವೆನೆಂದು ಭಗವಂತ ನೀಡಿರುವ ಆಶ್ವಾಸನೆ.

ರಾಮಾಯಣದಲ್ಲೂ ಸಹ ಇಂತಹುದೇ ಮಾತು ಬಂದಿದೆ. ತನ್ನನ್ನು ಶರಣುಹೊಂದ ಬಯಸಿ ಬಂದ ವಿಭೀಷಣನನ್ನು ತಾನು ತಪ್ಪದೇ ಸ್ವೀಕರಿಸುವುದಾಗಿ ಘೋಷಿಸಿದ ಶ್ರೀರಾಮ ತಿಳಿಸುವ ಮಾತು ಹೀಗಿದೆ:

**ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ ।**
**ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂ ಮಮ**[೧] **॥**

---

೧. ವಾಲ್ಮೀಕಿ ರಾಮಾಯಣ (೬/೧೮/೩೩)

ಹೀಗೆ ಭಗವಂತನು ಬಗೆಬಗೆಯಲ್ಲಿ ಆಶ್ವಾಸನೆ ನೀಡಿದ್ದರೂ ಸಹ ಅವನನ್ನು ಬಿಟ್ಟು ಅಂತಹ ಆಶ್ವಾಸನೆಯ ಸುಳಿವೂ ನೀಡದ ಅನ್ಯದೇವತೆಗಳನ್ನು ಪರಿಪರಿಯಾಗಿ ಆರಾಧಿಸುವ ಜನರು ವಿವೇಕಿಗಳಲ್ಲ ಎಂಬ ಸೂಚನೆಯೂ ಇಲ್ಲಿದೆ.

*****

ಇತರ ದೇವತೆಗಳ ಆರಾಧಕರೂ ಸಹ ಮುಖ್ಯವಾಗಿ ಆರಾಧಿಸುವುದು ಭಗವಂತನನ್ನೇ. ಅವರೆಲ್ಲರ ಅಂತರ್ಯಾಮಿ ಅವನೇ ಅಲ್ಲವೇ? ಆದರೆ ಅವರಿಗೆ ಆ ಪರಿಜ್ಞಾನ ಇರುವುದಿಲ್ಲ. ಆದ್ದರಿಂದ ಅವರದು ತಪ್ಪುದಾರಿ ಎನ್ನಿಸುವುದು. ಭಗವಂತನೇ ಸರ್ವಯಜ್ಞಗಳಿಂದ ಆರಾಧ್ಯನಾದವನು; ಸರ್ವಯಜ್ಞಗಳ ಪ್ರವರ್ತಕನಾದವನು ಎಂಬುದನ್ನು ಅವರು ತಿಳಿಯರು. ಅವರು ಜಾರುವುದು ಅಂತಹ ತಪ್ಪುತಿಳುವಳಿಕೆಯಿಂದಾಗಿಯೇ.

ಆದ್ದರಿಂದ ಅನ್ಯದೇವತಾರಾಧಕರು ತಲುಪುವುದು ಆಯಾದೇವತೆಗಳನ್ನೇ ಹೊರತು ಪರಗತಿಯನ್ನಲ್ಲ. ಪಿತೃಗಳ ಆರಾಧಕರು ಸೇರುವುದು ಸಹ ಪಿತೃಗಳನ್ನೇ ಹೊರತು ಭಗವಂತನಲ್ಲ. ಅಂತೆಯೇ ಭೂತಗಳ ಆರಾಧಕರು ಭೂತಗಳನ್ನೇ ಸೇರುವರು. ಭಗವಂತನ ಆರಾಧಕರು ಮಾತ್ರ ತಪ್ಪದೆ ಭಗವಂತನನ್ನೇ ತಲುಪುವರು. ಇತರ ಲೋಕಗಳನ್ನು ತಲುಪಿದವರು ಪಡೆಯುವುದು ಅನಿತ್ಯ ಗತಿಯನ್ನಾದರೆ, ಭಗವಂತನನ್ನು ಆರಾಧಿಸುವವರು ತಲುಪುವುದು ನಿತ್ಯ ಲೋಕಗಳನ್ನು, ಪಡೆಯುವುದು ಪರಿಪೂರ್ಣವಾದ ಸುಖ ಸಂತೋಷಗಳನ್ನು.

*****

## ಅತಿಸುಲಭ ಶ್ರೀಹರಿಯ ಪೂಜೆ

**ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ।**
**ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ॥** (೯/೨೬)

ಇತರ ದೇವತೆಗಳು ಕೊಡುವ ಫಲ ಅಲ್ಪವಾದರೂ, ಅವರ ಪೂಜೆಯ ವಿಧಿವಿಧಾನಗಳು, ಸಮರ್ಪಿಸಬೇಕಾದ ಕಾಣಿಕೆಗಳು ಅಪಾರ. ಮಧ್ಯೆ ಅವರ ಪೂಜೆಯನ್ನು ತೊರೆದಾಗ ಪ್ರತ್ಯವಾಯುವು ತಪ್ಪಿದ್ದಲ್ಲ. ಆದರೆ, ಶ್ರೀಹರಿಯ ಪೂಜೆಯು ಹಾಗಲ್ಲ. ಅವನು ಕೊಡುವುದು ಇತರರಾರೂ ನೀಡಲಾಗದ ಮೋಕ್ಷ. ಆದರೆ ಅದಕ್ಕೆ ಅವನು ಯಾವ ಕಾಣಿಕೆಯನ್ನೂ ನಿರೀಕ್ಷಿಸುವುದಿಲ್ಲ. ಭಕ್ತರು ತಮ್ಮ ಭಕ್ತಿಯ ಕಾಣಿಕೆಯಾಗಿ ಪತ್ರ, ಪುಷ್ಪ, ಫಲ, ನೀರು ಏನನ್ನು ಕೊಟ್ಟರೂ ಪ್ರೀತಿಯಿಂದ ಸ್ವೀಕರಿಸುವನು. ಸುದಾಮ ಕೊಟ್ಟ ಅವಲಕ್ಕಿ, ಗಜೇಂದ್ರ ಕೊಟ್ಟ ಕಮಲಪುಷ್ಪ – ಇವು

ಇದಕ್ಕೆ ನಿದರ್ಶನ. ಇಲ್ಲಿ ಪತ್ರಪುಷ್ಪಗಳು ಅರ್ಚನೆಗೆ, ಫಲ ನೈವೇದ್ಯಕ್ಕೆ ಹಾಗೂ ಜಲ ಅಭಿಷೇಕ ಹಾಗೂ ಪಾನೀಯಕ್ಕೆ ಎಂಬುದು ಗಮನಾರ್ಹ. ಇವುಗಳು ಸಹ ಸಾಂಕೇತಿವಾಗಿ ಒಂದೊ, ಎರಡೋ ಇದ್ದರೆ ಸಾಕು. ಆದರೆ ವಂಚನೆ, ಕಪಟಗಳನ್ನು ಮಾತ್ರ ಅವನೆಂದೂ ಸಹಿಸಲಾರ. ಅವನು ಅಪೇಕ್ಷಿಸುವುದು ನಿರ್ಮಲವಾದ ಭಕ್ತಿಯನ್ನು ಮಾತ್ರ; ನೀಡುವುದು ಮಾತ್ರ ಶಾಶ್ವತವಾದ ಮುಕ್ತಿಯನ್ನೇ.

*****

## ಸರ್ವವೂ ಕೃಷ್ಣಾರ್ಪಣ

**ಯತ್ ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।**
**ಯತ್ ತಪಸ್ಯಸಿ ಕೌಂತೇಯ ತತ್ ಕುರುಷ್ವ ಮದರ್ಪಣಮ್॥ (೯/೨೭)**

ಮಾಡುವ ಎಲ್ಲ ಕಾರ್ಯವನ್ನು, ತಿನ್ನುವ ಎಲ್ಲ ಆಹಾರವನ್ನು, ನೀಡುವ ಎಲ್ಲ ದಾನವನ್ನು ಆಚರಿಸುವ ಎಲ್ಲ ತಪಸ್ಸನ್ನೂ ಭಗವಂತನಿಗೇ ಅರ್ಪಿಸಬೇಕು. ಕಛೇರಿಯಲ್ಲಿ ಕೆಲಸ ಮಾಡುವವನು ಅಲ್ಲಿಯ ಆಗುಹೋಗುಗಳನ್ನೆಲ್ಲ ಮೇಲಧಿಕಾರಿಗೆ ಒಪ್ಪಿಸುವಂತೆ, ಸಾಧಕನ ರೀತಿ ಇರಬೇಕು. ಹಾಗೆ ಮಾಡುವುದರಿಂದ ಒಳಿತುಕೆಡುಕುಗಳಿಗೆ ಕಾರಣವಾಗುವ ಕರ್ಮದ ಬಂಧನ ತಪ್ಪುವುದು. ಫಲದ ಹಂಬಲವಿಲ್ಲದ ಅಂತಹ ಕರ್ಮಯೋಗವು ಸಂಸಾರದಿಂದ ಬಿಡುಗಡೆಗೆ ದಾರಿಯಾಗುವುದು – 'ಸಕಲವೆಲ್ಲವು ಹರಿಸೇವೆ ಎನ್ನಿ'.

ವಿದ್ಯಾರ್ಥಿಯು ಪರೀಕ್ಷೆಯಲ್ಲಿ ಉತ್ತರ ಪತ್ರಿಕೆಯಲ್ಲಿ ಬರೆದುದೆಲ್ಲವನ್ನು ಮೌಲ್ಯಮಾಪನಕ್ಕೆಂದು ಸಮರ್ಪಿಸಲೇಬೇಕು. ಹಾಗೆ ಮಾಡದೆ ತಾನು ಎಲ್ಲ ಪ್ರಶ್ನೆಗಳನ್ನು ಸಹ ಸರಿಯಾಗಿಯೆ ಉತ್ತರಿಸಿ ಅದನ್ನು ರುಜುವಾತು ಪಡಿಸಲೆಂದು ಉತ್ತರ ಪತ್ರಿಕೆಯನ್ನು ತನ್ನೊಂದಿಗೆ ತೆಗೆದುಕೊಂಡು ಹೋದಲ್ಲಿ ಅವನು ಸರ್ವಥಾ ಉತ್ತೀರ್ಣನಾಗಲಾರ. ಅದರಂತೆ ಮಾಡಿದ ಸಕಲ ಕರ್ಮಗಳನ್ನೂ ಸಹ ಭಗವಂತನಿಗೆ ಸಮರ್ಪಣೆ ಮಾಡದಿದ್ದಲ್ಲಿ ಅವುಗಳಿಗೆ ಬೆಲೆ ಇರದು. ಒಪ್ಪಿಸಿದ ಉತ್ತರ ಪತ್ರಿಕೆಯಲ್ಲೂ ಸಹ ಸರಿಯಾದ ಉತ್ತರಗಳಿಲ್ಲದಿದ್ದಲ್ಲಿ ವಿದ್ಯಾರ್ಥಿಯು ಉತ್ತೀರ್ಣನಾಗಲಾರ. ಅದರಂತೆ ಮಾಡಿದ ಕರ್ಮಗಳು ಶಾಸ್ತ್ರದ ವಿಧಿವಿಧಾನಗಳಿಗೆ ಅನುಗ್ಗುಣವಾಗದೇ ಇದ್ದಲ್ಲಿ ಅವುಗಳನ್ನು ಸಮರ್ಪಿಸಿದರೂ ಸಹ ಉನ್ನತಿ ಲಭಿಸಲಾರದು. ಅದರಂತೆ ಯಾವ ಉತ್ತರವನ್ನೂ ಸಹ ಬರೆಯದೆ ಉತ್ತರ ಪತ್ರಿಕೆಯನ್ನು ಒಪ್ಪಿಸಿದಾಗ ಸಹ ಅನುತ್ತೀರ್ಣನಾಗುವುದು ನಿಶ್ಚಿತ. ವಿಹಿತ ಕರ್ಮಗಳನ್ನು ತೊರೆಯುವುದು ಸಹ ಸಂಸಾರ ಬಂಧನಕ್ಕೆ ಕಾರಣವಾಗುವುದು. ಅಕಸ್ಮಾತ್ತಾಗಿ ತಾನು ಬರೆದ ಉತ್ತರವು ತಪ್ಪಾಗಿದ್ದಲ್ಲಿ ಅದನ್ನು ಹೊಡೆದು ಹಾಕಿ ಸರಿಯಾದ ಉತ್ತರವನ್ನು ಬರೆಯುವುದು ಕರ್ತವ್ಯ. ಅದರಂತೆ ಆಕಸ್ಮಿಕವಾಗಿ ನಿಷಿದ್ಧ ಕರ್ಮಗಳನ್ನು ಆಚರಿಸಿದ್ದಲ್ಲಿ ಅದರ ಪರಿಹಾರಕ್ಕಾಗಿ ವಿಹಿತವಾದ ಪ್ರಾಯಶ್ಚಿತ್ತವನ್ನು ಮಾಡಿಕೊಂಡು

ಭಗವಂತನ ಮುಂದೆ ಕ್ಷಮೆ ಯಾಚಿಸಿದ್ದಲ್ಲಿ ಅದನ್ನು ಅವನು ಮನ್ನಿಸುವನು. ಹೀಗೆ ಸಮರ್ಪಣೆಯ ರೀತಿಯು ಸಹ ಒಂದು ಯೋಗವಾಗಿ ನಿರೂಪಿತವಾಗಿದೆ.

ಒಟ್ಟಾಗಿ ಭಗವಂತ ಇಲ್ಲಿ ತಿಳಿಸಿರುವುದು ಮಾಡುವ ಕರ್ಮ, ತಿನ್ನುವ ಅನ್ನ, ಮಾಡುವ ಹೋಮ, ಆಚರಿಸುವ ತಪಸ್ಸು ಎಲ್ಲವನ್ನೂ ಸಹ ನನಗೆ ಅರ್ಪಿಸಬೇಕು ಎಂದು ತಿಳಿಸಿರುವನು. ಎಂದರೆ ವಿಹಿತ ಕರ್ತವ್ಯ ಕರ್ಮಗಳನ್ನು ಸೂಕ್ತ ರೀತಿಯಲ್ಲಿ ಆಚರಿಸಿ ಒಪ್ಪಿಸಬೇಕು ಎಂದರ್ಥ. ಆದರೆ, ಕರ್ಮಗಳನ್ನೇ ಆಚರಿಸಿದೆ ಅವುಗಳನ್ನೇ ಕೃಷ್ಣಾರ್ಪಣ ಎನ್ನುವುದು ಮಾತ್ರ ದೊಡ್ಡ ಅಪಚಾರವೆನ್ನಿಸುವುದು.

*****

## ಭಗವಂತನಿಗೆ ಪಕ್ಷಪಾತವಿಲ್ಲ

ಭಗವಂತನು ಎಲ್ಲರನ್ನು ಒಂದೇ ಬಗೆಯಿಂದ ಕಾಣುವವನು. ಅವನಿಗೆ ಯಾವನೂ ಶತ್ರುವೂ ಅಲ್ಲ, ಮಿತ್ರನೂ ಅಲ್ಲ. ಆದರೆ ಭಕ್ತಿಯಿಂದ ಸೇವಿಸುವವರಿಗೆ ಮಾತ್ರ ಅವನು ತಪ್ಪದೆ ಒಲಿಯುವನು. ಭಕ್ತಿಯ ಹೊರತು ಬೇರಾವುದನ್ನೂ ಗಮನಿಸದಿರುವುದು ಭಗವಂತನ ಹಿರಿಮೆ. ಆದ್ದರಿಂದ ಸಾಧಕನು ಇತರ ಎಲ್ಲವುಗಳನ್ನೂ ಗೌಣವಾಗಿಸಿ, ಭಕ್ತಿಯನ್ನು ಪ್ರಧಾನ ಮಾಡಿಕೊಂಡು ಭಗವಂತನನ್ನು ಆರಾಧಿಸಿ, ಕೃತಾರ್ಥನಾಗಬೇಕು. ವಿಷ್ಣುಸಹಸ್ರನಾಮದಲ್ಲಿ ಬಂದಿರುವ ನಾಮಗಳಲ್ಲಿ ಸಮಃ ಎಂಬುದು ಒಂದು. ಅದರ ಅರ್ಥವು ಹೀಗೆ ಅವನು ನಿಷ್ಪಕ್ಷಪಾತಿ ಎಂಬುದೇ ಆಗಿದೆ.

*****

## ಭಕ್ತ ದುರಾಚಾರಿಯಾದರೂ, ಭಗವಂತ ಉದ್ಧರಿಸುವನು

ಭಗವಂತನನ್ನು ಅನನ್ಯಭಕ್ತಿಯಿಂದ ಭಜಿಸುವವನು ದೈವವಶಾತ್ ದುರಾಚಾರಿಯಾದರೂ ಚಿಂತೆಯಿಲ್ಲ.[೧] ಅವನು ಮೂಲತಃ ಸಜ್ಜನನೇ. ಪ್ರಾರಬ್ಧಕರ್ಮ ಅವನನ್ನು ದುಷ್ಕಾರ್ಯದಲ್ಲಿ ತೊಡಗಿಸುತ್ತದೆ. ಆದರೆ ಅದರ ಪ್ರಭಾವ ಬಹುಕಾಲ ಇರದು. ಕೆಲವೇ ಕಾಲದಲ್ಲಿ ಅವನು ಮತ್ತೆ ಸರಿಯಾದ ಹಾದಿಯನ್ನು ತುಳಿಯುವನು. ಶಾಶ್ವತಸುಖದ ನೆಲೆಯನ್ನು ಕಾಣುವನು. ಭಕ್ತನಿಗೆ ಎಂದೂ ಕೇಡಿಲ್ಲ ಎಂಬುದು ಭಗವಂತ ಶಪಥವಿಟ್ಟಾಡಿದ ಮಾತು[೨]. ಆದರೆ ಹಾಗೆ ಅವನು ಕ್ಷಮಿಸುವುದು ಭಕ್ತರೆಂದು ತಮ್ಮನ್ನು

---

೧. ಅಪಿ ಚೇತ್ ಸುದುರಾಚಾರೋ ಭಜತೇ ಮಾಮನನ್ಯಭಾಕ್ ।
ಸಾಧುರೇವ ಸ ಮಂತವ್ಯಃ ಸಮ್ಯಗ್ವ್ಯವಸಿತೋ ಹಿ ಸಃ — ಗೀತಾ (೯/೩೦)

೨. ಪಾಪಕರ್ಮವ ಸಹಿಸುವರೆ ಲಕ್ಷ್ಮೀಪತಿಗೆ ಸಮರಾದ ದಿವಿಜರ
ನೀಪಯೋಜಭವಾಂಡದೊಳಗಾವಲ್ಲಿ ನಾ ಕಾಣೆ ।
ಗೋಪ ಗುರುವಿನ ಮಡದಿ ಭೃಗು ನಗಚಾಪ ಮೊದಲಾದವರು ಮಾಡ್ದ ಮ
ಹಾಪರಾಧಗಳೆಣಿಸಿದನೆ ಕರುಣಾಸಮುದ್ರ ಹರಿ ॥ ಹರಿಕಥಾಮೃತಸಾರ (೨/೧೯)

ಸಂಪೂರ್ಣವಾಗಿ ಒಪ್ಪಿಸಿಕೊಂಡವರ ತಪ್ಪುಗಳನ್ನು ಮಾತ್ರ. ಕೇವಲ ತನ್ನನ್ನು ಭಕ್ತ ಎಂದು ಕರೆದುಕೊಂಡವರನ್ನು ಅಲ್ಲ ಎಂಬುದನ್ನು ಗಮನಿಸಬೇಕು. ಅಜಾಮಿಳ ಮೊದಲಾದವರು ಇದಕ್ಕೆ ನಿದರ್ಶನ.

ಇದರರ್ಥ ಭಕ್ತನು ದುರಾಚಾರಿಯಾಗಬೇಕೆಂದಲ್ಲ. ಸಾಮಾನ್ಯವಾಗಿ ಅವನು ದುರಾಚಾರಿಯಾಗುವುದು ಸಾಧ್ಯವೂ ಇಲ್ಲ. ಕೆಂಡ ಎಂದು ಗೊತ್ತಾದ ಮೇಲೆ ಅದನ್ನು ಮುಟ್ಟಲು ಸಾಧ್ಯವೇ? ಹಾವು ಎಂದು ತಿಳಿದ ಮೇಲೆ ಅದರೊಂದಿಗಿರಲು ಆದೀತೇ? ಅಪಾಯವೆಂದು ಖಚಿತವಾದ ಮೇಲೆ ಅದಕ್ಕೆ ಕೈಹಾಕಲು ಸಾಧ್ಯವಾದೀತೇ. ಅದರಂತೆ ಪಾಪಕಾರ್ಯ ಎಂದು ತಿಳಿದವನು ಅದನ್ನು ಸರ್ವಥಾ ಮಾಡಲಾರ. ಅಲ್ಲದೆ ಸಂಬಂಧಪಟ್ಟ ಅಧಿಕಾರಿ ಗಮನಿಸುವನು ಎಂಬ ಅರಿವು ಇದ್ದಾಗ ತಪ್ಪು ಮಾಡಲು ಸಾಧ್ಯವಾಗುವುದಿಲ್ಲ. ಭಗವಂತನಂತು ಸಕಲರನ್ನೂ ಸರ್ವಕಾಲಕ್ಕೂ ಸದಾ ಗಮನಿಸುವ ಸಕಲ ಲೋಕಗಳ ಸ್ವಾಮಿ. ಈ ಅರಿವು ಇದ್ದವನು ತಪ್ಪನೆಂತು ಮಾಡಿಯಾನು. ಆದ್ದರಿಂದ ನಿಜವಾದ ಭಗವದ್ಭಕ್ತನು ತಪ್ಪನ್ನು ಮಾಡಲಾರ ಎಂಬುದೇ ಇಲ್ಲಿಯ ಮುಖ್ಯ ಭಾವ. ಅನಿವಾರ್ಯ ಕಾರಣಗಳಿಂದ ಅಂತಹ ತಪ್ಪು ಘಟಿಸಿದಾಗ ಅದನ್ನು ಕ್ಷಮಿಸುವ ಕಾರುಣ್ಯ ಭಗವಂತನದು ಎಂಬುದು ಅವನ ಹಿರಿಮೆ.

ಆದರೆ ದೇವತೆಗಳು, ಋಷಿಗಳು, ಮುನಿಗಳು ಮೊದಲಾದವರು ತಮ್ಮ ಅಳವಿಗೆ ಮೀರಿದ ಪುಣ್ಯಕಾರ್ಯವನ್ನೆಸಗಿದಾಗ, ಅದು ಅವರಿಗೆ ದಕ್ಕದೆ, ಬುದ್ಧಿ ಧರ್ಮದ ಹಾದಿ ತಪ್ಪುವುದುಂಟು. ಇಂತಹ ಅಧಿಕಪುಣ್ಯ ಮಿತಿಮೀರಿದ ಭೋಜನದಂತೆ ಹಾನಿಕರ. ಹೆಚ್ಚಿನ ಪ್ರಮಾಣದ ವೋಲ್ಟೇಜ್‌ನಂತೆ ಅನರ್ಥಕರ. ಅದನ್ನು ಸಮತೋಲನಗೊಳಿಸಲೆಂದು ಭಗವಂತ ಪ್ರಾರಬ್ಧವನ್ನು ನಿಮಿತ್ತ ಮಾಡಿ, ಅವರನ್ನು ತಪ್ಪುದಾರಿಯಲ್ಲಿ ಸಾಗಿಸಿ, ಅವರಿಗೆ ಅರಿವು ಮೂಡಿಸುವನು. ಆಗ ಪಶ್ಚಾತ್ತಾಪದಿಂದ ಮರುಗುವ ಅವರು ಪುನಃ ಧರ್ಮದ ಹಾದಿ ಹಿಡಿದು ಉದ್ಧಾರ ಕಾಣುವರು. ಏನೇ ಇದ್ದರೂ ಈ ನಿಯಮವು ಸಾಮಾನ್ಯಭಕ್ತರಿಗೆ ಅನ್ವಯಿಸುವಂತಹುದಲ್ಲ. ದಾರಿತಪ್ಪದಂತೆ ಬದುಕುವ ಗುರಿಯೇ ಅವರದಾಗಬೇಕು. ಇಲ್ಲವಾದಲ್ಲಿ ಅವರಿಗೆ ಅನರ್ಥವು ಕಟ್ಟಿಟ್ಟ ಬುತ್ತಿ.

*****

## ಸ್ತ್ರೀಯರು, ಶೂದ್ರರು ಪಾಪಯೋನಿಗಳಲ್ಲ

ಭಗವಂತನನ್ನು ನೆಚ್ಚಿದವರು ಯಾವುದೋ ಪಾಪದ ಕಾರಣದಿಂದಾಗಿ, ಹೆಣ್ಣಾಗಿ, ವೈಶ್ಯರಾಗಿ, ಶೂದ್ರರಾಗಿ ಜನಿಸಿದರೂ, ಅಪಾಯವಿರದು. ಆ ಪಾಪ ತೀರಿದ ಮೇಲೆ ಅವರು ಪುನಃ ತಮ್ಮ ಸ್ವರೂಪಕ್ಕನುಗುಣವಾದ ಸದ್ಗತಿಯನ್ನೇ ಪಡೆಯುವರು[೧].

---

೧. ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ।
ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾಂತಿ ಪರಾಂ ಗತಿಮ್॥ – ಗೀತಾ (೯/೩೨)

೧೬೧೦೦ ಅಗ್ನಿಪುತ್ರರು ಕೃಷ್ಣಪತ್ನಿಯರಾಗುವ ಹೆಬ್ಬಯಕೆಯಿಂದ ತೀವ್ರತಪಸ್ಸನ್ನಾಚರಿಸಿ, ಶ್ರೀವಾಯುದೇವರ ಅನುಗ್ರಹಕ್ಕೆ ಪಾತ್ರರಾಗಿ, ಸ್ತ್ರೀಯರಾಗಿ ಜನಿಸಿ, ಕೃಷ್ಣಪತ್ನಿಯರಾದ ಉಲ್ಲೇಖ ಪುರಾಣಗಳಲ್ಲಿದೆ. ಅವರು ಹಾಗೆ ಸ್ತ್ರೀಯರಾಗಲು ವರ ಕಾರಣವಾಯಿತು. ಆದರೂ ಅವರು ಪುನಃ ಪುರುಷರಾಗಿಯೇ ಸದ್ಗತಿಗೆ ತೆರಳಿದರು. ಕೆಲವೊಮ್ಮೆ ಪಾಪವಶಾತ್ ಸ್ತ್ರೀಯರಾಗುವ ಪುರುಷರೂ ಪುನಃ ಪುರುಷರಾಗಿಯೇ ಮೋಕ್ಷ ಪಡೆಯುವರು ಎಂದು ಭಾವ.

ಅನೇಕರು ಈ ಶ್ಲೋಕಕ್ಕೆ ಸ್ತ್ರೀಯರು, ವೈಶ್ಯರು, ಶೂದ್ರರು ಪಾಪಯೋನಿಗಳು ಎಂದು ತಪ್ಪಾಗಿ ಅರ್ಥಬರೆದಿರುವುದುಂಟು. ಇದರಿಂದಾಗಿ ಎಲ್ಲ ಸ್ತ್ರೀಯರು, ವೈಶ್ಯರು, ಶೂದ್ರರು ಪಾಪಿಷ್ಠರೆಂಬ ತಪ್ಪು ಕಲ್ಪನೆ ಹುಟ್ಟುವ ಅವಕಾಶವಿದೆ. ಶ್ರೀಮಧ್ವಾಚಾರ್ಯರು ಈ ಶ್ಲೋಕದ ಅಂತರ್ಯವನ್ನು ವಿವರಿಸುತ್ತಾ ಬರೆದಿರುವ ಮಾತುಗಳು ತುಂಬಾ ಮನನೀಯವಾದದ್ದು.

ಸ್ವಾಭಾವಿಕವಾಗಿ ಸ್ತ್ರೀಯರು, ವೈಶ್ಯರು, ಶೂದ್ರರು ಆದವರು ಸರ್ವಥಾ ಪಾಪಿಗಳಲ್ಲ. ಅದು ಅವರ ಸ್ವರೂಪ. ಆದರೆ ಪುರುಷರಾದವರು ಸ್ತ್ರೀಯರಾಗುವುದು, ಬ್ರಾಹ್ಮಣ ಕ್ಷತ್ರಿಯಸ್ವರೂಪದ ಜೀವರು ವೈಶ್ಯರೂ, ಶೂದ್ರರೂ ಆಗುವುದು ಮಾತ್ರ ಪಾಪದ ಫಲ. ಅವರೂ ಸಹ ಆ ಪಾಪ ತೀರುತ್ತಿದ್ದಂತೆ ಪುನಃ ಪುರುಷರು ಮೊದಲಾಗಿ ತಮ್ಮ ಸಹಜರೂಪವನ್ನೇ ಪಡೆಯುವರು.

ತುಂಬುರು ಗಂಧರ್ವ ಅಂಬೆಗೆ ತನ್ನ ಪುರುಷದೇಹವನ್ನು ನೀಡಿ, ಅವಳ ಸ್ತ್ರೀದೇಹವನ್ನು ಪಡೆದದ್ದು ಇದಕ್ಕೊಂದು ನಿದರ್ಶನ. ಅಂಬೆ ಶಿಖಂಡಿ ಎನ್ನಿಸಿದ್ದು ಅದರಿಂದಾಗಿ. ಮುಂದೆ ಕುರುಕ್ಷೇತ್ರದಲ್ಲಿ ಯುದ್ಧದ ಹದಿನೆಂಟನೆಯ ರಾತ್ರಿ ಅಶ್ವತ್ಥಾಮರಿಂದ ಶಿಖಂಡಿ ಹತನಾದಾಗ, ತುಂಬುರುವಿಗೆ ಅವನ ಪುರುಷ ದೇಹ ಮರಳಿದ ಪ್ರಸಂಗವನ್ನು ಇಲ್ಲಿ ಸ್ಮರಿಸಬಹುದು. ಯಮಧರ್ಮನು ಸ್ವೇಚ್ಛೆಯಿಂದಲೇ ಶೂದ್ರಯೋನಿಯಲ್ಲಿ ಜನಿಸಿದ ಪ್ರಸಂಗ ಇದಕ್ಕೆ ಮತ್ತೊಂದು ನಿದರ್ಶನ.

ಇನ್ನು ಸ್ವರೂಪತಃ ಶೂದ್ರಾದಿಗಳಾಗಿದ್ದರೂ, ಪುಣ್ಯವಶಾತ್ ಬ್ರಾಹ್ಮಣರಾಗಿ, ರಾಜರ್ಷಿಗಳಾಗಿ ಜನಿಸಿ ಬರುವ ಭಗವದ್ಭಕ್ತರಿಗೆ ಸದ್ಗತಿ ಖಚಿತ ಎಂದು ಹೇಳಬೇಕಿಲ್ಲ. ಈ ಶ್ಲೋಕಕ್ಕೆ ಪಾಪಯೋನಿಗಳಾದವರು, ಸ್ತ್ರೀಯರು ಎಂಬ ರೀತಿಯ ಅರ್ಥವು ಉಂಟು. ಆದರೆ ತನ್ನನ್ನು ಚಿಂತಿಸುವ ಸಕಲ ಯೋಗಕ್ಷೇಮವು ತನ್ನದು ಎಂದು ಈ ಮುನ್ನವೇ ತಿಳಿಸಿರುವುದರಿಂದ ಅದರಲ್ಲಿ ಸ್ತ್ರೀಯರನ್ನು ಒಳಗೊಂಡಂತೆ ಸಕಲ ಭಕ್ತರು ಸೇರಿರುವರು. ಆದ್ದರಿಂದ ಇಲ್ಲಿ ಕಾರಣಾಂತರದಿಂದ ಸ್ತ್ರೀಯರಾಗಿ ಜನಿಸಿದವರಿಗೂ ಉದ್ಧಾರ ಖಚಿತ ಎಂಬುದು ಮುಖ್ಯವಾದ ಅರ್ಥವಾಗಿದೆ.

*****

ಭಗವಂತನಲ್ಲೇ ಮನಸ್ಸಿಡುವುದು, ಅವನಲ್ಲೇ ಭಕ್ತಿ ಮಾಡುವುದು, ಅವನನ್ನೇ ಆರಾಧಿಸುವುದು, ಅವನನ್ನೇ ವಂದಿಸುವುದು, ಅವನನ್ನೇ ನೆಚ್ಚಿ ಶರಣಾಗುವುದು ಅವನನ್ನು ಸೇರುವ ಖಚಿತ ಸಾಧನ[೧].

*****

---

೧. ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।
ಮಾಮೇವೈಷ್ಯಸಿ ಯುಕ್ತ್ವೈವಮಾತ್ಮಾನಂ ಮತ್ಪರಾಯಣಃ ॥ – ಗೀತಾ (೯/೩೪)

# ಅಧ್ಯಾಯ - ೧೦

## ವಿಭೂತಿಯೋಗ

ಹತ್ತನೆಯ ಅಧ್ಯಾಯದಲ್ಲಿ ಭಗವದ್ವಿಭೂತಿಗಳ[೧] ನಿರೂಪಣೆ ಇದೆ. ಅರ್ಜುನನಿಗೆ ಶ್ರೀಕೃಷ್ಣನು "ನೀನು ಪ್ರಿಯಮಾಣ; ಅದಕ್ಕೆಂದೇ ನಿನ್ನ ಹಿತವನ್ನು ಬಯಸಿ, ನನ್ನ ಹಿರಿಮೆ-ಯನ್ನು ಸಾರುವ ವಚನವನ್ನು ಇನ್ನೂ ಹೇಳುವೆ" ಎನ್ನುವನು. 'ಪ್ರಿಯಮಾಣ' ಎಂದರೆ ಹೇಳಿದ ವಿಚಾರವನ್ನು ಕೇಳಿ ಸಂತೋಷಪಡುವ ಸ್ವಭಾವದವನು ಎಂದರ್ಥ. ಒಂದರ್ಥದಲ್ಲಿ ಇದು ಭಗವದ್ಗೀತಾದಿಶಾಸ್ತ್ರಗಳನ್ನು ಕೇಳುವವರಲ್ಲಿ ಇರಬೇಕಾದ ಅರ್ಹತೆಯ ನಿರೂಪಣೆಯೂ ಆಗಿದೆ.

*****

ಭಗವಂತನ ಸೃಷ್ಟ್ಯಾದಿಮಹಿಮೆಯನ್ನು ದೇವತೆಗಳೂ ಸಹ ಪೂರ್ಣವಾಗಿ ಅರಿಯರು; ಮಹರ್ಷಿಗಳೂ ತಿಳಿಯರು. ಅವರೆಲ್ಲರಿಗೂ ಕಾರಣನಾದವನು ಆ ಭಗವಂತನೇ. ಅವನನ್ನು ಹುಟ್ಟಿಲ್ಲದವನು, ಸರ್ವಪ್ರೇರಕನು, ಸಮಸ್ತಲೋಕಗಳಿಗೆ ಮೂಲಕಾರಣನು, ಜಗತ್ಪ್ರೇರಕನಾದ ಮುಖ್ಯಪ್ರಾಣನಿಗೂ ಪ್ರೇರಕನು, ಸಕಲಲೋಕಗಳಿಗೂ ಮುಖ್ಯಸ್ವಾಮಿ ಎಂಬುದಾಗಿ ತಿಳಿಯುವನೋ, ಅವನೇ ಬ್ರಹ್ಮಜ್ಞಾನಿ. ಅವನು ಎಲ್ಲ ಕೆಡುಕುಗಳಿಂದಲೂ ಪಾರಾಗುವನು.

*****

## ಭಗವಂತ ಸರ್ವಕರ್ತೃ

ಬುದ್ಧಿ, ಜ್ಞಾನ, ತಪ್ಪು ತಿಳುವಳಿಕೆ ಇಲ್ಲದಿರುವುದು, ಕ್ಷಮೆ, ಸತ್ಯ ಹೇಳುವುದು, ಇಂದ್ರಿಯನಿಗ್ರಹ, ಭಗವನ್ನಿಷ್ಠೆ ಸುಖ, ದುಃಖ, ಹುಟ್ಟು ಸಾವು, ಭಯ, ಅಭಯ, ಅಹಿಂಸೆ, ಒಳಿತುಕೆಡುಕುಗಳಲ್ಲಿ ಸಮಭಾವ, ತೃಪ್ತಿ, ತಪಸ್ಸು ದಾನ, ಕೀರ್ತಿ, ಅಪಕೀರ್ತಿ ಎಂಬ ಅನೇಕ ಬಗೆಯ ಗುಣಗಳೆಲ್ಲ ಜೀವಿಗಳಿಗೆ ಒದಗುವುದು ಭಗವಂತನಿಂದಲೇ[೨]. ಭಗವಂತನು ಸಕಲಗುಣಧರ್ಮಗಳಿಗೂ ಮೂಲಕಾರಣ. ಅವನ ಅನುಗ್ರಹವಿಲ್ಲದೆ ಯಾವ ಗುಣಗಳೂ ಲಭಿಸವು. ಭಗವಂತನ ಇಂತಹ ಸರ್ವಕಾರಣತ್ವಾನುಸಂಧಾನವು ಅತ್ಯಪೂರ್ವವಾದ ಉಪಾಸನಕ್ರಮ.

---

೧. ಉಪಾಸನಾರ್ಥಂ ವಿಭೂತೀರ್ವಿಶೇಷಕಾರಣತ್ವಂ ಚ ಕೇಷಾಂಚಿದನೇನ ಅಧ್ಯಾಯೇನಾಹ। -ಗೀ.ಭಾ.

೨. ಬುದ್ಧಿರ್ಜ್ಞಾನಮಸಂಮೋಹಃ ಕ್ಷಮಾ ಸತ್ಯಂ ದಮಃ ಶಮಃ।
ಸುಖಂ ದುಃಖಂ ಭವೋಽಭಾವೋ ಭಯಂ ಚಾಭಯಮೇವ ಚ॥
ಅಹಿಂಸಾ ಸಮತಾ ತುಷ್ಟಿಸ್ತಪೋ ದಾನಂ ಯಶೋಽಯಶಃ।
ಭವಂತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ॥ - ಗೀತಾ (೧೦/೪,೫)

ಹಿಂದಿನ ಮನ್ವಂತರದ (ಮರೀಚಿ, ಅತ್ರಿ, ಅಂಗಿರಸ್, ಪುಲಸ್ತ್ಯ ಪುಲಹ, ಕ್ರತು ಮತ್ತು ವಸಿಷ್ಠ ಎಂಬ) ಸಪ್ತಋಷಿಗಳೂ, ಹಾಗೆಯೇ (ಸ್ವಾಯಂಭುವ, ಸ್ವಾರೋಚಿಷ, ರೈವತ ಮತ್ತು ಉತ್ತಮ ಎಂಬ ಮುಂಚಿನ)ನಾಲ್ವರು ಮನುಗಳು ಎಂಬ ಚತುರ್ಮುಖ ಬ್ರಹ್ಮನ ಮಾನಸಪುತ್ರರು ಸಹ ಭಗವಂತನಿಂದಲೇ ಜನಿಸಿದವರು. ಅವರಿಂದ ಜನಿಸಿದ ಲೋಕದ ಜನರೆಲ್ಲರು ಭಗವಂತನ ಸಂತತಿಯೇ. ಭಗವಂತನ ಅನುಗ್ರಹವಿಲ್ಲದೆ ಹಿಂದಿನವರಾರೂ ಜನಿಸಿಲ್ಲ; ಮುಂದೆಯೂ ಜನಿಸಲಾರರು. ಎಲ್ಲರ ಹುಟ್ಟಿಗೂ ಅವನೇ ಮೂಲಕಾರಣ. ಇದೂ ಭಗವಂತನ ವಿಭೂತಿಯೇ. ಇದನ್ನು, ಅವನ ಮಾಹಾತ್ಮ್ಯವನ್ನು ಸರಿಯಾಗಿ ತಿಳಿಯುವವನು ಅಚಲವಾದ ಧ್ಯಾನಯೋಗವನ್ನು ಸಾಧಿಸುವನು. ಇದು ನಿಶ್ಚಿತ.

*****

ಜ್ಞಾನಿಗಳು "ಭಗವಂತನೇ ಎಲ್ಲವನ್ನೂ ರೂಪಿಸಿದವನು; ಎಲ್ಲ ನಡೆಯುವುದೂ ಅವನಿಂದಲೇ" ಎಂದು ತಿಳಿದು, ಭಕ್ತಿಯಿಂದ ಅವನನ್ನು ಆರಾಧಿಸುವರು. ಅವನಲ್ಲೇ ಮನಸ್ಸು ಹಾಕಿ, ಇಂದ್ರಿಯಗಳನ್ನು ಅವನಿಗಾಗಿ ದುಡಿಸುತ್ತಾ, ತಮ್ಮ ಶಿಷ್ಯರಿಗೆ ಅವನ ಬಗ್ಗೆ ತಿಳಿಸುತ್ತಾ, ತಮ್ಮತಮ್ಮಲ್ಲೇ ಅವನ ವಿಚಾರ ಚರ್ಚಿಸುತ್ತಾ ತಣಿಯುವರು ಹಾಗೂ ನಲಿಯುವರು[1]. ಜ್ಞಾನಿಗಳು ಹೀಗೆ ಪರಸ್ಪರರಲ್ಲಿ ಭಗವಂತನ ವಿಷಯವನ್ನು ಪರಿಪರಿ ಚರ್ಚಿಸುವುದರಲ್ಲಿ ಆನಂದವನ್ನು ಕಾಣುವರು. ಇದರಿಂದ ಪರಸ್ಪರ ಅಸೂಯೆ ಜ್ಞಾನಿಗಳ ಲಕ್ಷಣವಾಗಿರದೇ ಪರಸ್ಪರರಲ್ಲಿ ಆದರವೇ ಮುಖ್ಯ ಲಕ್ಷಣ ಎಂಬ ವಿಶೇಷಾಂಶವು ಸೂಚಿತ.

*****

ಸದಾ ಅವನಲ್ಲೇ ಮನಸ್ಸನ್ನು ತೊಡಗಿಸಿ, ಪ್ರೀತಿಯಿಂದ ಅವನನ್ನೇ ಓಲೈಸುವವರಿಗೆ ಭಗವಂತನು ಜ್ಞಾನಯೋಗವನ್ನು ನೀಡುವನು. ಅದರಿಂದ ಅವರು ಅವನ ಬಳಿ ಸಾರುವರು. ಅವರ ಮೇಲಿನ ಕೃಪೆಯಿಂದ, ಅವರ ಮನಸ್ಸಿನಲ್ಲಿ ನೆಲೆಸಿ, ಅಜ್ಞಾನದಿಂದಾಗಿ ಒದಗಿದ ಅವರ ಬಗೆಯ ಕತ್ತಲನ್ನು ಜ್ಞಾನದೀಪದಿಂದ ಕಳೆದುಬಿಡುವನು[2].

*****

---

೧. ಅಹಂ ಸರ್ವಸ್ಯ ಪ್ರಭವೋ ಮತ್ತಃ ಸರ್ವಂ ಪ್ರವರ್ತತೇ ।
ಇತಿ ಮತ್ವಾ ಭಜಂತೇ ಮಾಂ ಬುಧಾ ಭಾವಸಮನ್ವಿತಾಃ ॥
ಮಚ್ಚಿತ್ತಾ ಮದ್ಗತಪ್ರಾಣಾ ಬೋಧಯಂತಃ ಪರಸ್ಪರಮ್ ।
ಕಥಯಂತಶ್ಚ ಮಾಂ ನಿತ್ಯಂ ತುಷ್ಯಂತಿ ಚ ರಮಂತಿ ಚ ॥ - ಗೀತಾ (೧೦/೮,೯)

೨. ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಮ್ ।
ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿ ತೇ ॥
ತೇಷಾಮೇವಾನುಕಂಪಾರ್ಥಮಹಮಜ್ಞಾನಜಂ ತಮಃ ।
ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ॥ - ಗೀತಾ (೧೦/೧೦, ೧೧)

ಅರ್ಜುನನು ಕೇಳುವನು – "ನೀನು ಪರಬ್ರಹ್ಮ, ಪರಮನೆಲೆ, ಪರಮಪವಿತ್ರ. ನಿನ್ನನ್ನು ಗುಣಪೂರ್ಣ, ನಿರ್ವಿಕಾರ, ಲೀಲಾಮಯ, ಆದಿದೇವ, ಹುಟ್ಟಿಲ್ಲದವ, ಸರ್ವತ್ರ ವ್ಯಾಪ್ತ ಎಂಬುದಾಗಿ ಎಲ್ಲ ಋಷಿಗಳೂ, ದೇವರ್ಷಿ ನಾರದರೂ, ಅಸಿತದೇವಲರೂ, ವ್ಯಾಸರೂ ಕೊಂಡಾಡುವರು. ಸ್ವತಃ ನೀನು ಸಹ ನನಗೆ ಹೇಳುತ್ತಿರುವೆ. ಕೇಶವ ! ನೀನು ಹೇಳುತ್ತಿರುವುದನ್ನೆಲ್ಲಾ ನಿಜವೆಂದು ನಾನು ಅರಿತಿರುವೆ. ಭಗವಂತನೆ! ನಿನ್ನ ಹಿರಿಮೆಯನ್ನು ದೇವತೆಗಳಾಗಲಿ, ದಾನವರಾಗಲಿ, ಪೂರ್ತಿಯಾಗಿ ಅರಿಯಲಾರರು. ಸಕಲ ಜೀವಿಗಳ ಜನಕನೆ ! ಎಲ್ಲ ಪ್ರಾಣಿಗಳ ನಿಯಾಮಕನೇ! ದೇವದೇವನೇ! ಲೋಕಸ್ವಾಮಿಯೇ ! ಓ ಪುರುಷೋತ್ತಮ ! ನಿನ್ನನ್ನು ಸ್ವತಃ ನೀನೇ ಬಲ್ಲೆ. ಯಾವ ವಿಭೂತಿಗಳಿಂದ ನೀನು ಈ ಲೋಕಗಳನ್ನೆಲ್ಲ ವ್ಯಾಪಿಸಿರುವೆಯೋ, ಅಂತಹ ನಿನ್ನ ದಿವ್ಯವಾದ ವಿಭೂತಿರೂಪಗಳನ್ನು ನನಗೆ ಸಮಗ್ರವಾಗಿ ತಿಳಿಸು. ಅಪರಿಮಿತಶಕ್ತಿಯ ಶ್ರೀಕೃಷ್ಣನೆ! ಸದಾ ಪರಿಪರಿಯಾಗಿ ಚಿಂತಿಸುತ್ತಾ ನಿನ್ನ ವಿಭೂತಿಗಳನ್ನು ನಾನೆಂತು ಅರಿತೇನು? ಭಗವಂತನೆ! ಯಾವ ಯಾವ ವಸ್ತುಗಳಲ್ಲಿ ನಿನ್ನನ್ನು ಹೇಗೆಂದು ಚಿಂತಿಸಲಿ? ಜನಾರ್ದನ! ನಿನ್ನ ಯೋಗವನ್ನು ವಿಭೂತಿಯನ್ನು ಇನ್ನಷ್ಟು ವಿವರವಾಗಿ ತಿಳಿಸು. ನನಗೆ ನಿನ್ನ ವಚನಾಮೃತವನ್ನು ಎಷ್ಟು ಸವಿದರೂ ಸಾಲದೆನ್ನಿಸಿದೆ".

ಅರ್ಜುನನ ಪ್ರಾರ್ಥನೆಯನ್ನು ಮನ್ನಿಸಿ, "ಪ್ರಧಾನವಾದ ನನ್ನ ವಿಭೂತಿಗಳನ್ನು ತಿಳಿಸುವೆ. ಇದರ ವಿಸ್ತಾರಕ್ಕೆ ಕೊನೆಯೇ ಇಲ್ಲ, ನಾನು ಎಲ್ಲೆಡೆ ತುಂಬಿದವನು. ಸಕಲ ಜೀವಿಗಳ ಹೃದಯಗುಹೆಯಲ್ಲಿ ಅಂತರ್ಯಾಮಿಯಾಗಿ ನೆಲೆಸಿರುವವನು. ಎಲ್ಲ ಪ್ರಾಣಿಗಳ ಹುಟ್ಟು, ಉಳಿವು, ಅಳಿವುಗಳಿಗೆ ಕಾರಣನು" ಎಂದು ತಿಳಿಸಿ, ತನ್ನ ವಿಭೂತಿಗಳನ್ನು ತಿಳಿಸುವನು.

*****

## ಭಗವಂತನ ವಿಭೂತಿರೂಪಗಳು

ಅವನು ದ್ವಾದಶಆದಿತ್ಯರಲ್ಲಿ ವಿಷ್ಣು; ಜ್ಯೋತಿಸ್ಸುಗಳಲ್ಲಿ ಕಿರಣಮಾಲಿಯಾದ ರವಿ, ನಲವತ್ತೊಂಭತ್ತು ಮರುತ್ತುಗಳಲ್ಲಿ ಮರೀಚಿ, ನಕ್ಷತ್ರಗಳ ಒಡೆಯನಾಗಿ ಚಂದ್ರ; ವೇದ-ಗಳಲ್ಲಿ ಸಾಮವೇದ, ದೇವತೆಗಳಲ್ಲಿ ಇಂದ್ರ; ಇಂದ್ರಿಯಗಳಲ್ಲಿ ಮನಸ್ಸು; ಪ್ರಾಣಿಗಳಲ್ಲಿ ಚೇತನಾ( ಬಹುಸ್ಮರಣಶಕ್ತಿ);

ಏಕಾದಶರುದ್ರರಲ್ಲಿ ಶಂಕರ; ಯಕ್ಷರಾಕ್ಷಸರಲ್ಲಿ ಕುಬೇರ; ಅಷ್ಟವಸುಗಳಲ್ಲಿ ಪಾವಕ; ಪರ್ವತಗಳಲ್ಲಿ ಮೇರು; ಪುರೋಹಿತರಲ್ಲಿ ಬೃಹಸ್ಪತಿ; ಸೇನಾಧಿಪತಿಗಳಲ್ಲಿ ಸ್ಕಂದ; ಸರಸ್ಸುಗಳಲ್ಲಿ ಸಾಗರ; ಮಹರ್ಷಿಗಳಲ್ಲಿ ಭೃಗು; ವಾಙ್ಮಯದಲ್ಲಿ ಓಂಕಾರ; ಯಜ್ಞಗಳಲ್ಲಿ ಜಪಯಜ್ಞ; ಸ್ಥಾವರಗಳಲ್ಲಿ ಹಿಮಾಲಯ; ವೃಕ್ಷಗಳಲ್ಲಿ ಅಶ್ವತ್ಥ; ದೇವರ್ಷಿಗಳಲ್ಲಿ ನಾರದ;

ಗಂಧರ್ವರಲ್ಲಿ ಚಿತ್ರರಥ; ಯೋಗಸಿದ್ಧರಲ್ಲಿ ಕಪಿಲ; ಅಶ್ವಗಳಲ್ಲಿ ಉಚ್ಚೈಃಶ್ರವಸ್, ಗಜಗಳಲ್ಲಿ ಐರಾವತ; ಮನುಷ್ಯರಲ್ಲಿ ರಾಜ; ಆಯುಧಗಳಲ್ಲಿ ವಜ್ರಾಯುಧ; ಧೇನುಗಳಲ್ಲಿ ಕಾಮಧೇನು; ಸಂತಾನಕ್ಕೆ ಕಾರಣರಲ್ಲಿ ಮನ್ಮಥ; ಒಂದು ಹೆಡೆಯ ಸರ್ಪಗಳಲ್ಲಿ ವಾಸುಕಿ; ಅನೇಕಹೆಡೆಗಳ ನಾಗಗಳಲ್ಲಿ ಅನಂತ; ಜಲಚರಗಳಲ್ಲಿ ವರುಣ; ಪಿತೃದೇವತೆಗಳಲ್ಲಿ ಅರ್ಯಮಾ; ದಂಡಿಸುವವರಲ್ಲಿ ಯಮ; ದೈತ್ಯರಲ್ಲಿ ಪ್ರಹ್ಲಾದ;

ಬಂಧಿಸುವವರಲ್ಲಿ ಕಾಲ; ಮೃಗಗಳಲ್ಲಿ ಸಿಂಹ; ಪಕ್ಷಿಗಳಲ್ಲಿ ಗರುಡ; ವೇಗಶಾಲಿಗಳಲ್ಲಿ ಪವನ; ಶಸ್ತ್ರಪಾಣಿಗಳಲ್ಲಿ ರಾಮ; ಮೀನುಗಳಲ್ಲಿ ಮಕರ; ನದಿಗಳಲ್ಲಿ ಗಂಗೆ; ವಿದ್ಯೆಗಳಲ್ಲಿ ಅಧ್ಯಾತ್ಮವಿದ್ಯೆ; ಚರ್ಚೆಗಳಲ್ಲಿ ವಾದ; ಅಕ್ಷರಗಳಲ್ಲಿ ಅಕಾರ; ಸಮಾಸಗಳ ಗುಂಪಿನಲ್ಲಿ ದ್ವಂದ್ವ; ಸಾಮಗಳಲ್ಲಿ ಬೃಹತ್ಸಾಮ; ಛಂದಸ್ಸುಗಳಲ್ಲಿ ಗಾಯತ್ರೀ; ಮಾಸಗಳಲ್ಲಿ ಮಾರ್ಗಶೀರ್ಷ; ಋತುಗಳಲ್ಲಿ ವಸಂತ;

ಕಪಟಿಗಳಲ್ಲಿ ದ್ಯೂತ; ತೇಜಸ್ಸುಗಳಲ್ಲಿ ತೇಜಸ್ಸು; ಜಯಶೀಲರಲ್ಲಿ ಗೆಲವು; ವ್ಯವಸಾಯಿಗಳಲ್ಲಿ ವ್ಯವಸಾಯ, ಸತ್ತ್ವಶಾಲಿಗಳಲ್ಲಿ ಸತ್ತ್ವ. ವೃಷ್ಣಿಗಳಲ್ಲಿ ವಾಸುದೇವ; ಪಾಂಡವರಲ್ಲಿ ಧನಂಜಯ; ಮುನಿಗಳಲ್ಲಿ ವೇದವ್ಯಾಸ; ಕವಿಗಳಲ್ಲಿ ಶುಕ್ರ; ದಂಡಿಸುವವರಲ್ಲಿ ದಂಡ; ಜಯಬಯಸುವವರಲ್ಲಿ ನೀತಿ; ರಹಸ್ಯಗಳಲ್ಲಿ ಮೌನ; ಜ್ಞಾನಿಗಳಲ್ಲಿ ಜ್ಞಾನ.

*****

## ವಿಭೂತಿರೂಪಗಳ ವಿಶ್ಲೇಷಣೆ

ಇವಿಷ್ಟು ಭಗವಂತನು ಸಂಗ್ರಹವಾಗಿ ನಿರೂಪಿಸಿದ ವಿಭೂತಿರೂಪಗಳು. ಸೂಕ್ಷ್ಮವಾಗಿ ಗಮನಿಸಿದಾಗ ಇವುಗಳಲ್ಲಿ ನಾಲ್ಕು ಬಗೆ ಇರುವುದನ್ನು ಗುರುತಿಸಬಹುದು. ಅವನ್ನು ಶ್ರೀಮಧ್ವಾಚಾರ್ಯರು ಹೃದಯಂಗಮವಾಗಿ ನಿರೂಪಿಸಿರುವರು.

ಈ ನಾಲ್ಕರಲ್ಲಿ ಮೊದಲನೆಯ ಗುಂಪು ಭಗವಂತನ ಸಾಕ್ಷಾದ್ರೂಪಗಳದು. ದ್ವಾದಶಾದಿತ್ಯರಲ್ಲಿ ವಿಷ್ಣು ಯೋಗಸಿದ್ಧರಲ್ಲಿ ಕಪಿಲ, ಶಸ್ತ್ರಪಾಣಿಗಳಲ್ಲಿ ರಾಮ (ಪರಶುರಾಮ), ವೃಷ್ಣಿಗಳಲ್ಲಿ ವಾಸುದೇವ, ಮುನಿಗಳಲ್ಲಿ ವೇದವ್ಯಾಸ – ಇವು ಸಾಕ್ಷಾತ್ ಭಗವಂತನ ರೂಪಗಳೇ ಆಗಿವೆ.

ಎರಡನೆಯ ಗುಂಪು ಸಜಾತೀಯವಸ್ತುಗಳಲ್ಲಿ ಹಿರಿಮೆ ಹೊಂದಲು ಕಾರಣವಾದ ಭಗವಂತನ ವಿಭೂತಿರೂಪಗಳು. ಜ್ಯೋತಿಸ್ಸುಗಳಲ್ಲಿ ರವಿ, ಮರುತ್ತುಗಳಲ್ಲಿ ಮರೀಚಿ, ದೇವತೆಗಳಲ್ಲಿ ಇಂದ್ರ, ಇಂದ್ರಿಯಗಳಲ್ಲಿ ಮನಸ್ಸು ರುದ್ರರಲ್ಲಿ ಶಂಕರ, ವಸುಗಳಲ್ಲಿ ಪಾವಕ ಮೊದಲಾದವುಗಳು ಇಂತಹ ರೂಪಗಳು. ಎಂದರೆ, ಮರೀಚಿ, ಇಂದ್ರ, ಶಂಕರ,

ಪಾವಕ ಮೊದಲಾದವರು ಆ ಗುಂಪಿಗೆ ಸೇರಿದವರಾಗಿದ್ದರೂ, ಆ ಗುಂಪಿನ ಇತರರಿಗಿಂತ ಮಿಗಿಲಾಗಿರವರು. ಅದಕ್ಕೆ ಕಾರಣ ಭಗವಂತ ಆಯಾ ಹೆಸರಿನ ತನ್ನ ವಿಭೂತಿ ರೂಪಗಳನ್ನು ಅವರೊಳಗೆ ಇರಿಸಿ, ನೆಲೆಸಿರುವುದೇ ಆಗಿದೆ. ಅವರಾರೂ ಭಗವಂತನಲ್ಲವಾದರೂ, ಭಗವಂತನ ಆ ರೂಪಗಳ ಸನ್ನಿಧಾನದಿಂದಾಗಿ, ತಮ್ಮ ಗುಂಪಿನಲ್ಲಿ ಮೇಲ್ಮೆ ಪಡೆದವರು ಎಂಬುದು ಇದರ ಭಾವ.

ಮೂರನೆಯ ಗುಂಪು ಸಜಾತೀಯವಸ್ತುಗಳಲ್ಲಿ ನಿಶ್ಚಿತವಾಗಿಯೂ ಹಿರಿಮೆ ಹೊಂದಿದ ವಸ್ತುಗಳ ಅನಂತರದ ಇತರ ವಸ್ತುಗಳ ಮಧ್ಯೆ ಮೇಲ್ಮೆಯನ್ನು ತಂದುಕೊಡುವ ವಿಭೂತಿರೂಪಗಳದು. ವೇದಗಳಲ್ಲಿ[೧] ಸಾಮವೇದ, ಯಜ್ಞಗಳಲ್ಲಿ ಜಪಯಜ್ಞ, ಆಯುಧ-ಗಳಲ್ಲಿ ವಜ್ರ, ಪಾಂಡವರಲ್ಲಿ ಧನಂಜಯ – ಇವು ಈ ಬಗೆಯ ವಿಭೂತಿರೂಪಗಳು. ಎಂದರೆ ವೇದಗಳಲ್ಲಿ ಋಗ್ವೇದ, ಯಜ್ಞಗಳಲ್ಲಿ ಜ್ಞಾನಯಜ್ಞ, ಆಯುಧಗಳಲ್ಲಿ ಸುದರ್ಶನಚಕ್ರ, ಪಾಂಡವರಲ್ಲಿ ಭೀಮಸೇನ ಶ್ರೇಷ್ಠ ಎಂಬುದು ಸರ್ವವೇದ್ಯವಾದ ವಿಷಯ. ಅನಂತರದ ಸ್ಥಾನ ಕ್ರಮದಲ್ಲಿ ತೆಗೆದುಕೊಂಡರೆ ಯಜುರ್ವೇದ ಮೊದಲಾದವುಗಳದು ಆಗಬಹುದಿತ್ತು. ಆದರೆ ಹಾಗಾಗದೆ, ಸಾಮವೇದ ಮೊದಲಾದವುಗಳು ಶ್ರೇಷ್ಠವೆನ್ನಿಸಲು ಅವುಗಳೊಳಗೆ ಸನ್ನಿಹಿತವಾದ ಭಗವಂತನ ಆಯಾ ಹೆಸರುಗಳ ವಿಭೂತಿರೂಪಗಳೇ ಕಾರಣ ಎಂದು ಅರ್ಥ.

ನಾಲ್ಕನೆಯ ಗುಂಪು ವಿಜಾತೀಯವಸ್ತುವಾಗಿದ್ದು ಇತರ ಸಜಾತೀಯವಸ್ತುಗಳಿಗಿಲ್ಲದ ಹಿರಿಮೆಯನ್ನು ಹೊಂದಿರುವ ಮಹಿಮೆ. ನಕ್ಷತ್ರಗಳಲ್ಲಿ ಚಂದ್ರ, ಜಲಚರಗಳಲ್ಲಿ ವರುಣ, ಯಕ್ಷರಾಕ್ಷಸರಲ್ಲಿ ಕುಬೇರ ಮೊದಲಾದವು ಈ ಬಗೆಯ ವಿಭೂತಿರೂಪಗಳು. ಎಂದರೆ ಚಂದ್ರ ನಕ್ಷತ್ರವಲ್ಲ; ಆದರೂ ಅವನು ಇತರ ನಕ್ಷತ್ರಗಳನ್ನೆಲ್ಲ ಮೀರಿ, ಪ್ರಕಾಶಶಾಲಿಯಾಗಿ ಕಂಗೊಳಿಸುವನು. ವರುಣ ಜಲಚರವಲ್ಲ, ಆದರೂ ಜಲಚರಗಳಿಗಿಲ್ಲದ ಮಹಿಮೆ ಅವನದು. ಕುಬೇರ ಯಕ್ಷನೂ ಅಲ್ಲ, ರಾಕ್ಷಸನೂ ಅಲ್ಲ, ಆದರೂ ಅವನು ಯಕ್ಷರಾಕ್ಷಸರ ಅಧಿಪತಿ. ಹೀಗೆ ಆ ಗುಂಪಿಗೆ ಸೇರದಿದ್ದರೂ, ಆ ಗುಂಪಿನ ಇತರರನ್ನು ಮೀರಿ, ತಾನು ಮಹಿಮೆ ಹೊಂದಿರುವುದು ಅವರ ಸಾಧನೆ. ಅದಕ್ಕೆ ಕಾರಣ ಅವರಲ್ಲಿ ನೆಲೆಸಿರುವ ಆಯಾ ಹೆಸರಿನ ವಿಭೂತಿರೂಪಗಳು.

ಶ್ರೀಮಧ್ವಾಚಾರ್ಯರ ಈ ಅಪೂರ್ವ ವಿವರಣೆಯಿಂದಾಗಿ ವಿಭೂತಿರೂಪಗಳು ವಿಭಿನ್ನನೆಲೆಯಲ್ಲಿ ತೆರೆದುಕೊಂಡು ಹೊಸರೀತಿಯ ಚಿಂತನೆಗೆ ಅನುವು ಮಾಡಿಕೊಡುತ್ತದೆ. ನಕ್ಷತ್ರವಲ್ಲದ ಚಂದ್ರ, ಜಲಚರವಲ್ಲದ ವರುಣ, ಯಕ್ಷರಾಕ್ಷಸರಲ್ಲದ

---

೧. ವೇದಾನಾಂ ಸಾಮವೇದೋಽಸ್ಮಿ ದೇವಾನಾಮಸ್ಮಿ ವಾಸವಃ।
ಇಂದ್ರಿಯಾಣಾಂ ಮನಶ್ಚಾಸ್ಮಿ ಭೂತಾನಾಮಸ್ಮಿ ಚೇತನಾ॥ – ಗೀತಾ (೧೦/೨೨)

ಕುಬೇರ ಇವರ ಉಲ್ಲೇಖ ಆ ಗುಂಪಿನಲ್ಲಿ ಎಂತು ಬಂತು? ಎಂಬ ಸಂಶಯವನ್ನೂ ನಿವಾರಿಸುತ್ತದೆ.

*****

ಇವುಗಳೊಂದಿಗೆ ಅಕ್ಷಯವಾದ ಕಾಲ, ನಾರಿಯರ ವಾಕ್ ಮೊದಲಾದವುಗಳಲ್ಲೂ ತನ್ನ ವಿಭೂತಿರೂಪ ಇರುವುದನ್ನು ಭಗವಂತ ತಿಳಿಸಿಕೊಟ್ಟಿರುವನು[೧].

*****

ಅವುಗಳೊಂದಿಗೆ ಸಕಲಪ್ರಾಣಿಗಳಲ್ಲಿನ ಎಲ್ಲದಕ್ಕೂ ಭಗವಂತನೇ ಮೂಲಕಾರಣ; ಅವನ ಹೊರತು ಚರಾಚರಗಳಲ್ಲಿ ಯಾವುದೂ ತಾನಾಗಿಯೇ ಇರಲಾರದು. ಯಾವಯಾವುದು ತನ್ನ ಗುಂಪಿನಲ್ಲಿ ಮಿಗಿಲೆನ್ನಿಸಿದೆಯೋ, ಸಂಪತ್ತಿನಿಂದ ಕೂಡಿದೆಯೋ, ಮೇಲ್ಮೆ ಪಡೆದಿದೆಯೋ ಅವೆಲ್ಲವೂ ಭಗವಂತನ ತೇಜಸ್ಸಿನ ಅಂಶದಿಂದ ಒಡಗೂಡಿದ್ದು ಎಂದೇ ತಿಳಿಯಬೇಕು. ಎಲ್ಲಕ್ಕಿಂತ ಹೆಚ್ಚಾಗಿ ಭಗವಂತನು ಇಡೀ ಜಗತ್ತನ್ನೆಲ್ಲ ವ್ಯಾಪಿಸಿ, ನೆಲೆಸಿರುವನು[೨].

*****

---

೧. ಮೃತ್ಯುಃ ಸರ್ವಹರಶ್ಚಾಹಮುದ್ಭವಶ್ಚ ಭವಿಷ್ಯತಾಮ್ ।
ಕೀರ್ತಿಃ ಶ್ರೀರ್ವಾಕ್ ಚ ನಾರೀಣಾಂ ಸ್ಮೃತಿರ್ಮೇಧಾ ಧೃತಿಃ ಕ್ಷಮಾ ॥ – ಗೀತಾ (೧೦/೩೪)

೨. ಅಥವಾ ಬಹುನೈತೇನ ಕಿಂ ಜ್ಞಾತೇನ ತವಾರ್ಜುನ ।
ವಿಷ್ಟಭ್ಯಾಹಮಿದಂ ಕೃತ್ಸ್ನಂ ಏಕಾಂಶೇನ ಸ್ಥಿತೋ ಜಗತ್ ॥ – ಗೀತಾ (೧೦/೪೨)

# ಅಧ್ಯಾಯ - ೧೧

## ವಿಶ್ವರೂಪ ತೋರಲು ಪ್ರಾರ್ಥನೆ

ಭಗವಂತನ ಮುಖದಿಂದ ವಿಭೂತಿಗಳ ಮುಖಗಳನ್ನು ಕೇಳಿದ ಅರ್ಜುನ, ಅವನನ್ನು ಬೇಡಿಕೊಂಡ: ''ನನ್ನನ್ನು ಅನುಗ್ರಹಿಸಲೆಂದು ನೀನು ಭಗವಂತನನ್ನು ಕುರಿತ ಶ್ರೇಷ್ಠರಹಸ್ಯವನ್ನು ಅರುಹಿದೆ. ಈ ಮಾತಿನಿಂದ ನನ್ನ ಈ ಮೋಹ ಅಳಿಯಿತು. ಪ್ರಾಣಿಗಳ ಹುಟ್ಟು ಸಾವುಗಳ ಬಗೆಯನ್ನು ನಾನು ವಿವರವಾಗಿ ನಿನ್ನಿಂದ ತಿಳಿದೆ. ಪುಂಡರೀಕಾಕ್ಷ! ನಿನ್ನಿಂದ ನಿನ್ನ ಕೊನೆಯಿರದ ಮಾಹಾತ್ಮ್ಯವನ್ನೂ ತಿಳಿದೆ. ಪರಮೇಶ್ವರ! ನೀನು ನಿನ್ನ ಬಗ್ಗೆ ತಿಳಿಸಿದ್ದೆಲ್ಲ ನಿಜವೆಂದು ಮನವರಿಕೆಯಾಗಿದೆ. ಪುರುಷೋತ್ತಮ! ನಿನ್ನ ಅಚಿಂತ್ಯಶಕ್ತಿಯ ವಿಶ್ವರೂಪವನ್ನು ಕಾಣಲು ನಾನು ಬಯಸಿರುವೆ. ಪ್ರಭುವೇ! ಯೋಗೇಶ್ವರನೇ! ಅದನ್ನು ಕಾಣಲು ನನ್ನಿಂದ ಸಾಧ್ಯವೆಂದು ನಿನಗೆ ತೋರಿದರೆ, ನಿನ್ನ ಅವ್ಯಯವಾದ ಆ ರೂಪವನ್ನು ನನಗೆ ತೋರಿಸು''.

*****

ಶ್ರವಣದ ಫಲ ಎಂದರೆ ಇದೇ. ದರ್ಶನಕ್ಕಾಗಿ ಹಾತೊರೆಯುವಂತಾಗುವುದು. ಅದಕ್ಕೆಂದೇ ಶ್ರವಣವನ್ನು ಶಾಸ್ತ್ರಗಳು ಸಾಧನೆಯ ಮೊದಲ ಮೆಟ್ಟಿಲನ್ನಾಗಿ ವಿಧಿಸಿವೆ. ಭಗವಂತನ ಮಹಿಮೆಯೇ ಅಪೂರ್ವ. ಅದನ್ನು ಆ ಭಗವಂತನ ಬಾಯಿಂದಲೇ ಕೇಳಿದ ಸುಯೋಗ ಅರ್ಜುನನದು. ಅದಕ್ಕೆಂದೇ ಅವನಿಗೆ ಅವನ ವಿಶ್ವರೂಪದರ್ಶನದ ಬಗ್ಗೆ ವಿಶಿಷ್ಟಕಾತರ. ಹೇಳಿದ ಭಗವಂತ ಅದನ್ನು ತೋರಿಸುವ ಅನುಗ್ರಹವನ್ನೂ ಮಾಡಬಲ್ಲ ಎಂಬುದು ಅರ್ಜುನನ ಆಶಯ. ಅದಕ್ಕೆಂದೇ ಅವನಲ್ಲಿ ಬಗೆಬಗೆಯ ಇಂತಹ ಪ್ರಾರ್ಥನೆ[೧].

*****

ಹಾಗೆ ಕೇಳುವಲ್ಲೂ ಅರ್ಜುನನದು ವಿಶಿಷ್ಟ ಆದರ್ಶ. ಕೇಳಿದ್ದರಿಂದ ತನ್ನ ಮೋಹ ಅಳಿದಿದೆ. ಆದರೂ ನೋಡುವ ತವಕ ಉಳಿದಿದೆ. ಆದರೂ ತನ್ನಿಂದ ಅದು ಸಾಧ್ಯವೆಂಬ ಭರವಸೆ ಇಲ್ಲವಾಗಿದೆ. ಅದನ್ನು ನಿರ್ಧರಿಸಬೇಕಾದವನು ಪುನಃ ಭಗವಂತನೇ. ಅವನ ನಿಶ್ಚಯ ಹೇಗಿದ್ದರೂ ಅದಕ್ಕೆ ತಾನು ತಲೆಬಾಗುವವನೇ ಎಂಬ ವಿನಯದ ಸ್ಪರ್ಶವೂ ಅವನ ಮಾತಿನಲ್ಲಿದೆ. ಅವನ ಇಂತಹ ಒಂದೊಂದು ಪರಿಯೂ ಅವನು ಎಷ್ಟು ಉತ್ತಮ ಅರ್ಹತೆ ಪಡೆದ ಮಹಾತ್ಮ ಎನ್ನುವುದಕ್ಕೆ ದ್ಯೋತಕ.

*****

---

೧. ಯಥಾ ಶ್ರುತೇ ಧ್ಯಾನಂ ಶಕ್ಯಂ ತಥಾ ಸ್ವರೂಪಸ್ಥಿತಿರನೇನಾಧ್ಯಾಯೇನೋಚ್ಯತೇ। – ಗೀ.ಭಾ.

## ದೇವರನ್ನೆಂತು ಕಾಣುವುದು?

ಅರ್ಜುನನ ಪ್ರಾರ್ಥನೆಯನ್ನು ಮನ್ನಿಸಿದ ಕೃಷ್ಣ ತನ್ನ ವಿಶ್ವರೂಪವನ್ನು ತೋರಲು ಸಮ್ಮತಿಸಿದ. ಆದರೆ [೧]ಅದನ್ನು ಕಾಣಲು ಬರಿಗಣ್ಣಿಂದ ಸಾಧ್ಯವಿಲ್ಲವೆಂದು ತಿಳಿಸುತ್ತಾ ಅದನ್ನು ಕಾಣುವ ದಿವ್ಯದೃಷ್ಟಿಯನ್ನು ತಾನೇ ದಯಪಾಲಿಸುವುದಾಗಿ ನುಡಿದು, ಹಾಗೆ ಅದನ್ನು ನೀಡಿದ. ಹಾಗೆ ನೀಡುವ ಮುನ್ನ ಅವನು ತಾನು ತೋರುವ ತನ್ನ ವಿಶ್ವರೂಪದ ಬಗ್ಗೆ ರೋಚಕವಿವರಗಳನ್ನು ನೀಡುವನು.

ಭಗವಂತನು ಅರ್ಜುನನಿಗೆ ದಿವ್ಯದೃಷ್ಟಿಯನ್ನು ನೀಡುವ ಈ ಪ್ರಸಂಗ ಎಲ್ಲರಿಗೂ "ದೇವರು ಏಕೆ ಕಾಣುತ್ತಿಲ್ಲ?" ಎಂಬ ಪ್ರಶ್ನೆಗೆ ನೀಡಿದ ಉತ್ತರವೇ ಆಗಿದೆ. ಭಗವಂತ ಎಲ್ಲೆಡೆಯೂ, ಯಾವಾಗಲೂ ಇರುವವನು. ಆದರೆ ಅವನನ್ನು ಬರಿಗಣ್ಣಿಂದ ಕಾಣಲು ಸಾಧ್ಯವಿಲ್ಲ. ಅದಕ್ಕೆ ದಿವ್ಯದೃಷ್ಟಿಯೇ ಬೇಕು. ಸೂಕ್ಷ್ಮಾಣು(ಬ್ಯಾಕ್ಟೀರಿಯಾ, ವೈರಸ್)ಗಳನ್ನು ಕಾಣಲು ಬರಿಗಣ್ಣಿಗೆ ಆಗದು. ಅದಕ್ಕೆ ಸೂಕ್ಷ್ಮದರ್ಶಕ, ಎಲೆಕ್ಟ್ರಾನ್‌ಸೂಕ್ಷ್ಮದರ್ಶಕಗಳೇ ಆಗಬೇಕು. ಭಗವದ್ದರ್ಶನಕ್ಕೂ ಅಂತೆಯೇ. ದಿವ್ಯದೃಷ್ಟಿ ಇರಲೇಬೇಕು. ಅದನ್ನೂ ಸಹ ಅವನೇ ಕರುಣಿಸಬೇಕು. ಆಗಲೇ ಅವನ ದರ್ಶನ ಸಾಧ್ಯ. ಅದಿಲ್ಲದ ಜನಕ್ಕೆ ಅವನೆಂತು ಕಂಡಾನು? ಆ ದಿವ್ಯದೃಷ್ಟಿಗಿಂತ ಮುನ್ನ ಶಾಸ್ತ್ರದೃಷ್ಟಿಯು ಅವಶ್ಯ. ಅದು ಅಂತಹ ದಿವ್ಯದೃಷ್ಟಿ ಪಡೆಯಲು ಸಾಧನವೂ ಆಗಿ ನೆರವಾಗುತ್ತದೆ.

ಇರುವ ವಸ್ತುಗಳೆಲ್ಲ ಕಣ್ಣಿಗೆ ಗೋಚರಿಸಲೇಬೇಕೆಂದೇನಿಲ್ಲ[೨]. ಗಾಳಿ ಇರುವುದು ನಿಜ. ಆದರೆ ಅದು ಕಣ್ಣಿಗೆ ಗೋಚರಿಸದು, ಸ್ಪರ್ಶಕ್ಕೆ ಮಾತ್ರ ತಿಳಿಯುವುದು. ಪರಿಮಳವು ಕಣ್ಣಿಗೆ ಕಾಣದೇ ಮೂಗಿಗೆ ತಿಳಿಯುವುದು. ರುಚಿಯು ನಾಲಿಗೆಗೆ ಅರಿವಾಗುವುದು. ಶಬ್ದವು ಕಿವಿಗೆ ಮಾತ್ರವೇ ಕೇಳುವುದು. ಎಂದರೆ ಒಂದು ವಸ್ತುವನ್ನು ಅದಕ್ಕೆ ಅನುಗುಣವಾದ ಪ್ರಮಾಣದಿಂದ ಅರಿಯಬೇಕಲ್ಲದೆ ನಾವು ತಿಳಿದ ಯಾವುದೋ ಪ್ರಮಾಣಕ್ಕೆ ಅದು ಗೋಚರಿಸಬೇಕು ಎಂದು ವಾದಿಸುವುದಲ್ಲ. ದೇವರಿಲ್ಲ ಎಂದು ವಾದಿಸುವ ಜನರ ವಿಚಾರ ಸರಣಿ ಹೀಗೆ ಲಂಗುಲಗಾಮಿಲ್ಲದೆ ಸಾಗುವಂತಹುದು. ಅದಕ್ಕೆ ಉತ್ತರವಾಗಿ ಈ ಪ್ರಸಂಗ ನಿರೂಪಿತವಾಗಿದೆ.

ಭಗವಂತನ ರೂಪಗಳು ನೂರಾರು, ಸಾವಿರಾರು; ಅವುಗಳೂ ಅನೇಕತೆರ; ಅವೆಲ್ಲ ಅಲೌಕಿಕ; ಅವುಗಳ ವರ್ಣಗಳೂ ಬಹುಬಗೆಯವು. ದ್ವಾದಶಾದಿತ್ಯರನ್ನೂ

೧. ನ ತು ಮಾಂ ಶಕ್ಯಸೇ ದ್ರಷ್ಟುಮನೇನೈವ ಸ್ವಚಕ್ಷುಷಾ।
ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಮ್॥ – ಗೀತಾ (೧೧/೮)

೨. ಪರಿಮಳವು ಸುಮನದೊಳಗನಳನರುಣಿಯೊಳಗಿಪ್ಪಂತೆ ದಾಮೋ-
ದರನು ಬ್ರಹ್ಮಾದಿಗಳ ಮನದಲಿ ತೋರಿ ತೋರದಲೆ।
ಇರುತಿಹ ಜಗನ್ನಾಥವಿಠಲನ ಕರುಣೆ ಪಡೆಯುವ ಮುಮುಕ್ಷುಜೀವರು
ಪರಮಭಾಗವರತನು ಕೊಂಡಾಡುವುದು ಪ್ರತಿದಿನವು॥ ಹರಿಕಥಾಮೃತಸಾರ (೧/೧೩)

ಅಷ್ಟವಸುಗಳನ್ನೂ, ಅಶ್ವಿನಿದೇವತೆಗಳನ್ನು, ನಲವತ್ತೊಂಭತ್ತು ಮರುತ್ತುಗಳನ್ನು, ಹಾಗೆಯೇ ಆ ಮುಂಚೆ ಕಂಡಿರದ ಅನೇಕ ಆಶ್ಚರ್ಯಗಳನ್ನು ಅಲ್ಲಿ ಕಾಣಬಹುದು. ಚರಾಚರಾತ್ಮಕವಾದ ಸಮಸ್ತವಿಶ್ವವನ್ನೇ ಅದರಲ್ಲಿ ಕಾಣಬಹುದು. ಬಯಸುವ ಏನನ್ನೂ ಅಲ್ಲಿ ನೋಡಬಹುದು. ಈ ಪರಿಕಲ್ಪನೆಯಲ್ಲಿ ವಿಶ್ವರೂಪದ ಹಿರಿಮೆ ಸುಂದರವಾಗಿ ಅನಾವರಣಗೊಂಡಿದೆ.

*****

ಅರ್ಜುನನಿಗೆ ತೋರಿದ ವಿಶ್ವರೂಪವನ್ನು ಸಂಜಯ ವರ್ಣಿಸಿದ. ಆ ರೂಪಕ್ಕೆ ಅನಂತಮುಖಗಳು, ಅನಂತನೇತ್ರಗಳು, ಅನೇಕ ಅಚ್ಚರಿಯ ನೋಟಗಳು, ನಾನಾ-ವಿಧವಾದ ದಿವ್ಯಾಭರಣಗಳು, ಕೈಯಲ್ಲಿ ಎತ್ತಿ ಹಿಡಿದ ಅನೇಕತೆರನಾದ ದಿವ್ಯ ಆಯುಧಗಳು. ಅದು ತೊಟ್ಟದ್ದು ದಿವ್ಯಮಾಲೆ, ದಿವ್ಯವಸ್ತ್ರಗಳನ್ನು; ಲೇಪಿಸಿಕೊಂಡಿದ್ದು ದಿವ್ಯವಾದ ಗಂಧವನ್ನು. ಒಳಗೊಂಡಿದ್ದು ಸರ್ವಆಶ್ಚರ್ಯಗಳನ್ನು. ಕೂಡಿದ್ದು ಕ್ರೀಡಾದಿಗುಣಗಳಿಂದ. ಅವಕ್ಕೆ ಎಲ್ಲೆಡೆಯೂ ಮುಖಗಳು; ಕೊನೆಯಂತೂ ಇಲ್ಲವೇ ಇಲ್ಲ. ಸಾವಿರಾರು ಸೂರ್ಯರೇನಾದರೂ ಗಗನದಲ್ಲಿ ಒಮ್ಮೆಲೆ ಮೂಡಿದರೆ ಹೊರಹೊಮ್ಮುವ ಕಾಂತಿ ಆ ವಿಶ್ವರೂಪದ ಕಾಂತಿಗೆ ಸಾಟಿಯಾದೀತು[೧].

ಸಂಜಯನು ಆ ವಿಶ್ವರೂಪವನ್ನು ವರ್ಣಿಸುವ ಪರಿ ಅವನೂ ಸಹ ಅದನ್ನು ಕಣ್ಣಾರೆ ಕಂಡಿದ್ದಕ್ಕೆ ಸೂಚಕ. ಅರ್ಜುನನಿಗೆ ವಿಶ್ವರೂಪದರ್ಶನಕ್ಕೆ ಕೃಷ್ಣನಿತ್ತ ದಿವ್ಯದೃಷ್ಟಿ ನೆರವಾದರೆ, ಅದನ್ನು ಕಾಣಲು ಸಂಜಯನಿಗೆ ನೆರವಾದದ್ದು ಅವನಿಗೆ ವೇದವ್ಯಾಸರಿತ್ತ ದಿವ್ಯದೃಷ್ಟಿ ಎಂದರೆ ಕೃಷ್ಣನು ನೀಡಿದ ದಿವ್ಯದೃಷ್ಟಿ ಮತ್ತು ವ್ಯಾಸರು ನೀಡಿದ ದಿವ್ಯದೃಷ್ಟಿ ಎರಡೂ ಒಂದೇ ತೆರನಾದವು. ಕೃಷ್ಣ ಮತ್ತು ವ್ಯಾಸರಿಬ್ಬರೂ ಭಗವಂತನ ಅವತಾರರೆಂಬುದಕ್ಕೆ ಇದು ಮತ್ತೊಂದು ರೀತಿಯ ಪುರಾವೆ. ವ್ಯಾಸರು ತಾನೇ ಎಂಬುದನ್ನು ಕೃಷ್ಣನು ಆಗಲೇ ತಿಳಿಸಿರುವುದು ಇದಕ್ಕೆ ಪೂರಕ – 'ಮುನೀನಾಮಪ್ಯಹಂ ವ್ಯಾಸಃ'.

*****

ಅರ್ಜುನನು ಕೃಷ್ಣತೋರಿದ ವಿಶ್ವರೂಪದಲ್ಲಿ ಸಕಲಜಗತ್ತು ಹರಡಿ ನೆಲೆಸಿರುವುದನ್ನು ಕಂಡನು. ಅಚ್ಚರಿಯಲ್ಲಿ ಮುಳುಗಿ, ರೋಮಾಂಚನಗೊಂಡು, ಅವನು ಕೃಷ್ಣನಿಗೆ ಶಿರಬಾಗಿ ವಂದಿಸಿ, ಕೈಜೋಡಿಸಿ, ಸ್ತುತಿಸಿದ. ವಿಶ್ವರೂಪದರ್ಶನ ಅರ್ಜುನನಲ್ಲಿ ಕೃಷ್ಣನ ಬಗ್ಗೆ ಭಕ್ತಿಭಾವವನ್ನು ಇನ್ನೂ ಹೆಚ್ಚಾಗಿ ಮೂಡಿಸಿದ್ದಕ್ಕೆ ಇದು ನಿದರ್ಶನ. ಬ್ರಹ್ಮಸಾಕ್ಷಾತ್ಕಾರ ಜ್ಞಾನಿಗಳಿಗೆ ಭಕ್ತಿ ಹೆಚ್ಚಿಸುವ ಮೂಲಕ ಭೇದವನ್ನು ದೃಢಪಡಿಸುವುದೇ ಹೊರತು, ಏಕತೆಯನ್ನು ಸಾಧಿಸದು ಎಂಬುದಕ್ಕೆ ಇದು ಗಮಕ.

---

೧. ದಿವಿ ಸೂರ್ಯಸಹಸ್ರಸ್ಯ ಭವೇದ್ಯುಗಪದುತ್ಥಿತಾ ।
ಯದಿ ಭಾಃ ಸದೃಶೀ ಸಾ ಸ್ಯಾದ್ಭಾಸಸ್ತಸ್ಯ ಮಹಾತ್ಮನಃ ॥ – ಗೀತಾ (೧೧/೧೨)

## ಅರ್ಜುನ ಕಂಡ ವಿಶ್ವರೂಪ

ಅರ್ಜುನ ಮಾಡಿದ ಸ್ತೋತ್ರದಲ್ಲಿ ವಿಶ್ವರೂಪದ ಅದ್ಭುತಚಿತ್ರ ಮೂಡಿದೆ. ಅದರಲ್ಲಿ ಸಕಲದೇವತೆಗಳನ್ನು, ಬಗೆಬಗೆಯ ಪ್ರಾಣಿವಿಶೇಷಗಳನ್ನು ಬ್ರಹ್ಮನನ್ನು, ಎಲ್ಲ ಋಷಿಗಳನ್ನು ಅದ್ಭುತ ಸರ್ಪಗಳನ್ನು ಅವನು ಕಾಣುವನು. ಅದಕ್ಕೆ ಎಣೆಯಿರದ ತೋಳುಗಳು, ಉದರಗಳು, ಮುಖಗಳು, ಕಣ್ಣುಗಳು. ಒಟ್ಟು ರೂಪವು ಅನಂತವೇ. ಅದರ ತುದಿ, ನಡು, ಕೊನೆ – ಎಲ್ಲವೂ ಅಗೋಚರ. ತಲೆಯ ಮೇಲೆ ಕಿರೀಟ, ಕೈಯಲ್ಲಿ ಗದೆ, ಚಕ್ರಗಳು. ಬೆಳಕಿನ ರಾಶಿಯಾಗಿ ಪ್ರಜ್ವಲಿಸುವ ಚಂದ್ರಸೂರ್ಯರಂತಹ ಕಣ್ಣುಕುಕ್ಕುವ ಕಾಂತಿ ಅದರದು. ಅದರ ಗುಣಗಳೂ ಅದರಂತೆಯೇ ತುದಿ, ಮಧ್ಯ, ಕೊನೆಗಳಿರದ ಅನಂತ; ಅದಕ್ಕೆ ಎಣಿಕೆಯಿರದ ತೋಳುಗಳು; ಸೂರ್ಯಚಂದ್ರರಿಗೆ ಜನ್ಮವಿತ್ತ ಕಣ್ಣುಗಳು ಅದರದು; ಬಾಯಲ್ಲಿ ಪ್ರಜ್ವಲಿಸುವ ಬೆಂಕಿ; ಆಕಾಶದವರೆಗೂ ಹಬ್ಬಿರುವ ವ್ಯಾಪ್ತಿ ಅದರದು. ಅದ್ಭುತ! ಭಯಂಕರ! ಇದನ್ನು ಕಂಡು ಮೂರು ಲೋಕಗಳೂ ಕಂಗೆಟ್ಟಿವೆ.

ಮಹರ್ಷಿಗಳ, ಸಿದ್ಧರ ಗುಂಪುಗಳು ಮಂಗಳ ಹಾಡುತ್ತಾ ಅದನ್ನು ಕೊಂಡಾಡುತ್ತಿದ್ದವು. ರುದ್ರರು, ಆದಿತ್ಯರು, ವಸುಗಳು, ಸಾಧ್ಯರು, ವಿಶ್ವೇದೇವತೆಗಳು, ಅಶ್ವಿನಿಗಳು, ಮರುತ್ತುಗಳು, ಪಿತೃಗಳು, ಗಂಧರ್ವರು, ಯಕ್ಷರು, ಅಸುರರು, ಸಿದ್ಧರು ಮೊದಲಾದ ಎಲ್ಲರೂ ಗುಂಪುಗುಂಪಾಗಿ ಅದನ್ನು ಬೆರಗಾಗಿ ನೋಡುತ್ತಿರುವರು.

ಅದಕ್ಕೆ ಅನೇಕಮುಖಗಳು, ಕಣ್ಣುಗಳು, ಬಾಹುಗಳು, ತೊಡೆಗಳು, ಪಾದಗಳು, ಉದರಗಳು. ಮೂರು ಲೋಕಗಳನ್ನೂ ಕಂಗೆಡಿಸುವ ಕೋರೆಗಳಿಂದಾಗಿ ಕರಾಳವಾದ ಮುಖ ಅದರದು. ಪ್ರಳಯಕಾಲದ ಅಗ್ನಿಯಂತಹ ಸುಡುವ ಶಕ್ತಿ ಅದರದು.

ಭೀಷ್ಮರು[೧], ದ್ರೋಣರು, ಸೂತಪುತ್ರನಾದ ಕರ್ಣ, ಜಯದ್ರಥ ಹಾಗೂ ಈ ಧೃತರಾಷ್ಟ್ರನ ಎಲ್ಲ ಮಕ್ಕಳು ಭೂಪಾಲರ ಗುಂಪುಗಳೊಂದಿಗೆ, ಹಾಗೆಯೇ ಅವರ ಪ್ರಮುಖವೀರರೊಂದಿಗೆ ಕೂಡಿ, ಕೋರೆದಾಡೆಗಳಿಂದಾಗಿ ಕರಾಳವೂ, ಭಯಾನಕವೂ ಆದ ಅದರ ಬಾಯೊಳಗೆ ವೇಗವಾಗಿ ನುಗ್ಗುತ್ತಿರುವರು. ಕೆಲವರು ಅದರ ಹಲ್ಲುಗಳ ಮಧ್ಯೆ ಸಿಕ್ಕಿಕೊಂಡು, ತಲೆ ಒಡೆದವರಾಗಿ ಕಾಣುತ್ತಿರುವರು. ಹರಿಯುವ ನದಿಗಳು ಸಮುದ್ರ ಸೇರುವಂತೆ, ಹಾರಿಬೀಳುವ ಪತಂಗಗಳು ಉರಿಯುವ ಬೆಂಕಿಯೊಳಗೆ ಬೀಳುವಂತೆ, ಉಭಯಪಕ್ಷದ ಸೈನಿಕರೆಲ್ಲ ಅದರ ಬಾಯೊಳಗೆ ನುಗ್ಗುತ್ತಿದ್ದರು.

---

೧. ಭೀಷ್ಮರು ಇಚ್ಛಾಮರಣಿಗಳು, ದ್ರೋಣರು ಉಭಯ ಪಂಗಡದ ವೀರರ ಗುರುಗಳು. ಕರ್ಣ ಅಮೋಘವಾದ ಶಕ್ತ್ಯಾಯುಧವನ್ನು ಹೊಂದಿದ್ದವನು, ಜಯದ್ರಥನು ತಂದೆಯ ವರದಿಂದಾಗಿ ಸುಲಭವಾಗಿ ವಧ್ಯನಾಗದಿದ್ದವನು ಎಂಬ ಕಾರಣದಿಂದ ಅವರನ್ನು ಪ್ರತ್ಯೇಕವಾಗಿ ಉಲ್ಲೇಖಿಸಲಾಗಿದೆ ಎಂದು ತಿಳಿಯಬೇಕು: ಯೋಽಸ್ಯ ಶಿರಶ್ಛಿನ್ನಂ ಭೂಮೌ ಪಾತಯತಿ ತಚ್ಛಿರೋ ಭೇತ್ಸ್ಯತೀತಿ ತತ್ಪಿತುರ್ವರಾತ್ ಜಯದ್ರಥೋ ವಿಶೇಷೇಣೋಕ್ತಃ। ಸವರಾ ವಾಸವೀ ಶಕ್ತಿರಿತಿ ಕರ್ಣಃ – ಗೀ. ಭಾ

ಬೆಂಕಿಯುಗುಳುವ ಅದರ ಬಾಯಿಗಳು ಎಲ್ಲ ಜನರನ್ನೂ ನುಂಗಿ, ನೆಕ್ಕುತ್ತಿವೆ. 'ಭಯಂಕರ ರೂಪದ ಅವನಾರು?' ಎಂದು ತಿಳಿಯಬಯಸಿ, ಅರ್ಜುನ ಪ್ರಾರ್ಥಿಸುವನು[೧].

*****

ತನ್ನನ್ನು ಸ್ತುತಿಸಿದ ಅರ್ಜುನನಿಗೆ ಶ್ರೀಕೃಷ್ಣನು ಉತ್ತರಿಸುತ್ತಾ, ಅಲ್ಲಿಯ ಜನರ ಪಾಲಿಗೆ ಕಾಲನಾಗಿ ಬಂದವನು ತಾನು ಎಂದು ತಿಳಿಸಿ ಮುಂದೆ ನಡೆಯುವ ಯುದ್ಧದಲ್ಲಿ ಅರ್ಜುನ ಹಾಗೂ ಇತರ ಕೆಲವರ ಹೊರತು ಉಭಯಸೈನ್ಯಗಳಲ್ಲಿನ ಬೇರಾರೂ ಉಳಿಯರು ಎಂದು ಘೋಷಿಸುತ್ತಾನೆ. ಇದು ಅವನ ಸತ್ಯಸಂಕಲ್ಪತ್ವ ಹಾಗೂ ಸರ್ವಸಾಮರ್ಥ್ಯಗಳಿಗೆ ನಿದರ್ಶನ. ಮುಂದೆ ನಡೆದದ್ದು ಹಾಗೆಯೇ. ಒಟ್ಟು ಹದಿನೆಂಟು ಅಕ್ಷೋಹಿಣಿಸೇನೆಯಲ್ಲಿ ಬದುಕುಳಿದವರು ಪಾಂಡವರಲ್ಲಿ ಪಂಚಪಾಂಡವರು, ಸಾತ್ಯಕಿ ಮತ್ತು ಕೌರವರಲ್ಲಿ ಅಶ್ವತ್ಥಾಮ, ಕೃಪ ಮತ್ತು ಕೃತವರ್ಮ ಎಂಬ ಮೂವರು ಮಾತ್ರ.

*****

## ಭಗವಂತ ನೀಡಿದ ಆಶ್ವಾಸನೆ

"ಯುದ್ಧದಲ್ಲಿ ಗೆಲುವು ನಿನ್ನದೇ. ಶತ್ರುಗಳನ್ನು ಕೊಲ್ಲು; ಕೀರ್ತಿಯನ್ನು ಗಳಿಸು; ರಾಜ್ಯವನ್ನು ಅನುಭವಿಸು. ಇವರೆಲ್ಲ ನನ್ನಿಂದ ಈಗಾಗಲೇ ಹತರಾಗಿರುವರು. ದ್ರೋಣ, ಭೀಷ್ಮ, ಜಯದ್ರಥ, ಕರ್ಣ ಮೊದಲಾದ ಸಕಲರನ್ನೂ ನಾನೇ ಇಲ್ಲವಾಗಿಸಿರುವೆ. ನೀನು ಇವರ ಸಾವಿಗೆ ನೆಪ ಮಾತ್ರ"[೨].

ಇದು ಅಪೂರ್ವಕೃಷ್ಣಸಂದೇಶ. ಯುದ್ಧದಲ್ಲಿ ಅರ್ಜುನ ನಿಮಿತ್ತಮಾತ್ರ; ಜೀವನದಲ್ಲಿಯೂ ಅಂತೆಯೇ; ಪ್ರತಿಯೊಬ್ಬರೂ ನಿಮಿತ್ತ ಮಾತ್ರ. ಪ್ರತಿಯೊಂದು ಕಾರ್ಯವನ್ನೂ ಮಾಡಿ, ಮಾಡಿಸುವವನು ಭಗವಂತನೇ. ಅವನೊಲಿದರೆ ಆಗದ ಕಾರ್ಯವೇ ಇಲ್ಲ; ಒಲಿಯದಿದ್ದರೆ ಆಗುವ ಕಾರ್ಯವೂ ಇರದು. ಈ ತಾತ್ತ್ವಿಕ ಹಿನ್ನೆಲೆಯನ್ನು ಜೀವನದಲ್ಲಿ ಅಳವಡಿಸಿಕೊಂಡರೆ, ಅಹಂಕಾರ, ಮಮಕಾರಗಳಾಗಲಿ, ನಿರಾಶೆ, ಹತಾಶೆಗಳಾಗಲಿ ಎಂದೂ ಒದಗವು. ಮನಸ್ಸು ನಿರಾಳವೆನ್ನಿಸಿ, ನೆಮ್ಮದಿಯ ಜೀವನ ಸಾಧ್ಯವಾಗುವುದು. ಕಾಮಾದಿಶತ್ರುಗಳ ಮೇಲಿನ ಜಯವೂ ಸಹ ಸುಲಭ ಸಾಧ್ಯವೆನ್ನಿಸುವುದು.

---

೧. ಆಖ್ಯಾಹಿ ಮೇ ಕೋ ಭವಾನುಗ್ರರೂಪೋ ನಮೋಽಸ್ತು ತೇ ದೇವವರ ಪ್ರಸೀದ।
ವಿಜ್ಞಾತುಮಿಚ್ಛಾಮಿ ಭವಂತಮಾದ್ಯಂ ನ ಹಿ ಪ್ರಜಾನಾಮಿ ತವ ಪ್ರವೃತ್ತಿಮ್ ॥ -ಗೀತಾ (೧೧/೩೧)

೨. ಕಾಲೋಽಸ್ಮಿ ಲೋಕಕ್ಷಯಕೃತ್ ಪ್ರವೃದ್ಧೋ ಲೋಕಾನ್ ಸಮಾಹರ್ತುಮಿಹ ಪ್ರವೃತ್ತಃ।
ಋತೇಽಪಿ ತ್ವಾಂ ನ ಭವಿಷ್ಯಂತಿ ಸರ್ವೇ ಯೇಽವಸ್ಥಿತಾಃ ಪ್ರತ್ಯನೀಕೇಷು ಯೋಧಾಃ ॥
ತಸ್ಮಾತ್ ತ್ವಮುತ್ತಿಷ್ಠ ಯಶೋ ಲಭಸ್ವ ಜಿತ್ವಾ ಶತ್ರೂನ್ ಭುಂಕ್ಷ್ವ ರಾಜ್ಯಂ ಸಮೃದ್ಧಮ್।
ಮಯೈವೈತೇ ನಿಹತಾಃ ಪೂರ್ವಮೇವ ನಿಮಿತ್ತಮಾತ್ರಂ ಭವ ಸವ್ಯಸಾಚಿನ್ ॥
- ಗೀತಾ (೧೧/೩೨,೩೩)

ಕೃಷ್ಣನು ಭೀಷ್ಮದ್ರೋಣಾದಿಗಳನ್ನೂ ಕೌರವರನ್ನೂ ಕೊಂದದ್ದು ಯಾವಾಗ? ಅದಕ್ಕೆ ಉತ್ತರ ಉದ್ಯೋಗಪರ್ವದಲ್ಲಿದೆ. ಪಾಂಡವರಾಯಭಾರಿಯಾಗಿ ತನ್ನ ಸಭೆಗೆ ಆಗಮಿಸಿದ ಶ್ರೀಕೃಷ್ಣನನ್ನು ದುರ್ಯೋಧನ ಅನ್ನಪಾನಾದಿಗಳ ಆಮಿಷದಿಂದ ವಶಪಡಿಸಿಕೊಳ್ಳಲು ಯತ್ನಿಸುತ್ತಾನೆ. ಕೃಷ್ಣ ಅವನ ಆತಿಥ್ಯವನ್ನು ನಿರಾಕರಿಸಿ, ಅಲ್ಲಿಂದ ಬೀಳ್ಕೊಳ್ಳುತ್ತಾನೆ. ಆಗಲೇ ಕೌರವರ ಪತನ ನಿಶ್ಚಿತವಾಗುತ್ತದೆ. ಅರ್ಜಿಯೇ ನಿರಾಕೃತವಾದಾಗ ಕೆಲಸ ದೊರೆಯುವ ಭರವಸೆ ಇನ್ನೆಲ್ಲಿಯದು? ಅವನ ಅನ್ನನಿರಾಕರಣೆಯ ಕಾರ್ಯ ಇವನ ಪ್ರಾಣಕ್ಕೇ ಸಂಚಕಾರವೆನ್ನಿಸಿತು.

ಇನ್ನು ಭೀಷ್ಮದ್ರೋಣರ ಪರಿ. ಅವರು ಸಹ ಕೃಷ್ಣನನ್ನು ತಮ್ಮ ಮನೆಗೆ ಆಹ್ವಾನಿಸುತ್ತಾರೆ. ಕೃಷ್ಣ ಅದನ್ನು ನಿಷ್ಠುರವಾಗಿ ನಿರಾಕರಿಸುತ್ತಾನೆ. "ನನ್ನ ಭಕ್ತೆ ಕೃಷ್ಣೆಯ ನೆರವಿಗೆ ಧಾವಿಸದ ನಿಮ್ಮ ಆತಿಥ್ಯ ನನಗೆ ಬೇಕಿಲ್ಲ". ಅವರಿಗೆ ತಿಳಿಯಿತು. ತಾವು ಕೃಷ್ಣೆಯ ಬಗ್ಗೆ ತೋರಿಸಿದ ಔದಾಸೀನ್ಯ ತಮ್ಮ ಬಗ್ಗೆ ಕೃಷ್ಣ ಉದಾಸೀನನಾಗಲು ಕಾರಣ. ಭೀಮ ಮುಖ್ಯಪ್ರಾಣ; ಅವನ ಪತ್ನಿ ದ್ರೌಪದಿಯನ್ನು ಉಪೇಕ್ಷಿಸಿದ ಅಪರಾಧ ತಮ್ಮ ಪ್ರಾಣಕ್ಕೆ ಸಂಚಕಾರ. ಕೃಷ್ಣನ ಆ ನಡತೆ ಆಗ ಅವರ ಮನಸ್ಸನ್ನು ಕುಗ್ಗಿಸಿತು; ಮುಂದೆ ಪ್ರಾಣವನ್ನೂ ತೆಗೆಯಿತು. ವಿದ್ಯಾರ್ಥಿ ಅನುತ್ತೀರ್ಣನಾಗಿದ್ದು ತಿಳಿಯುವುದು ಅನಂತರ; ಆದರೆ ಅದು ನಿಶ್ಚಿತವಾಗಿರುವುದು ಅವನು ಉತ್ತರಪತ್ರಿಕೆಯಲ್ಲಿ ಸರಿಯಾದ ಉತ್ತರ ಬರೆಯದಿದ್ದಾಗಲೇ.

*****

ಕೃಷ್ಣನ ಮಾತನ್ನು ಕೇಳಿದ ಅರ್ಜುನ ಮತ್ತೆ ಕೈಜೋಡಿಸಿದ. ಭಯಭೀತನಾಗಿ ಗದ್ಗದಧ್ವನಿಯಿಂದ ನಡುಗುತ್ತಲೇ ವಂದಿಸಿ, ಪುನಃ ಸ್ತುತಿಸತೊಡಗಿದ.

*****

## ಮುಂದುವರೆದ ಅರ್ಜುನನ ಪ್ರಾರ್ಥನೆ

ಕೃಷ್ಣನ ವಿಶ್ವರೂಪವನ್ನು ಕಂಡು ವಿಶ್ವ ನಲಿಯುತ್ತಿದೆ; ರಾಕ್ಷಸರು ಭಯ-ಗೊಂಡಿರುವರು; ಸಿದ್ಧರು ತಲೆಬಾಗುತ್ತಿರುವರು; ಕೃಷ್ಣನು ಬ್ರಹ್ಮಾದಿಗಳ ಜನಕ. ವಾಯು, ಯಮ, ಅಗ್ನಿ ಮೊದಲಾದವರಲ್ಲಿದ್ದು ಸಕಲಕಾರ್ಯಗಳನ್ನು ಮಾಡುವವನು ಅವನೇ. ಅವನು ಜಗತ್ತಿನ ತಂದೆ, ಗುರು, ಪೂಜ್ಯ. ಅವನಿಗೆ ಮೂರುಲೋಕದಲ್ಲೂ ಯಾರೂ ಸಮರಲ್ಲ, ಅಧಿಕನೆಂತು ಇದ್ದಾನು? ಅವನದು ಅನುಪಮಪ್ರಭಾವ; ಅವನು ಸ್ವತಂತ್ರ. ಈ ಹಂತದಲ್ಲಿ ಅರ್ಜುನ ಕೃಷ್ಣನ ಅಂತಹ ಅಪೂರ್ವಹಿರಿಮೆಯನ್ನು ತಿಳಿಯದೆ, ಅವನನ್ನು ಒಬ್ಬ ಯಾದವ, ತನ್ನ ಗೆಳೆಯ ಎಂದು ಭಾವಿಸಿ, ಆಹಾರವಿಹಾರಾದಿ ಪ್ರಸಂಗಗಳಲ್ಲಿ ಸಲಿಗೆಯಿಂದ ನಡೆದುಕೊಂಡದ್ದರ ಬಗ್ಗೆ ಪಶ್ಚಾತ್ತಾಪಪಡುತ್ತಾನೆ. ಅದನ್ನೆಲ್ಲ ಕ್ಷಮಿಸಲು ಪರಿಪರಿಯಿಂದ ಬೇಡಿಕೊಳ್ಳುತ್ತಾನೆ.

ವಿಶ್ವರೂಪದರ್ಶನ ಅರ್ಜುನನಿಗೆ ಏಕಕಾಲದಲ್ಲೇ ಸಂತೋಷ ಭಯಗಳನ್ನು ಉಂಟು-ಮಾಡುತ್ತದೆ. ಅದ್ಭುತವನ್ನು ಕಂಡದ್ದಕ್ಕೆ ಸಂತೋಷ; ಅದರ ಆದ್ಯಂತಗಳು ಕಾಣದ್ದಕ್ಕೆ ಭಯ. ಆ ಸ್ಥಿತಿಯಲ್ಲಿ ಮುಂಚಿನ ನಾಲ್ಕು ಕೈಗಳ ರೂಪವನ್ನೇ ತೋರಿ, ನೆಮ್ಮದಿ ನೀಡಲು ಬೇಡುತ್ತಾನೆ. ಮಕ್ಕಳು ತನ್ನ ತಂದೆತಾಯಿಗಳೇ ಭಯಂಕರ ಮುಖವಾಡ ಧರಿಸಿ ನಿಂತಾಗ, ಅವರು ಯಾರೆಂದು ತಿಳಿದಿದ್ದರೂ, ಮುಖವಾಡದಿಂದಾಗಿ ಭಯಪಟ್ಟು ಅದನ್ನು ಕಳಚಿಡಲು ಮಕ್ಕಳು ಪ್ರಾರ್ಥಿಸುವ ಪರಿ ಅರ್ಜುನನ ಈ ಪ್ರಸಂಗಕ್ಕೆ ನಿದರ್ಶನ.[೧]

ಶ್ರೀಕೃಷ್ಣನು ಅವನನ್ನು ಸಮಾಧಾನಪಡಿಸುತ್ತಾ, ಆ ರೂಪ ಘೋರ, ಅದ್ಭುತ ಎಂಬುದು ನಿಜವಾದರೂ, ತಾನು ಅವನಿಗೆ ಹಾಗೆ ತೋರಿದ್ದು ಮಾತ್ರ ಪ್ರಸನ್ನತೆಯಿಂದಲೇ ಎಂದು ತಿಳಿಸುತ್ತಾನೆ. ಅಂತಹ ರೂಪವನ್ನು ಹಾಗೆ ಕಂಡವರು ಬಹಳಷ್ಟಿಲ್ಲ. ಅದು ವೇದಾಧ್ಯಯನ, ಯಜ್ಞಯಾಗಗಳ ಆಚರಣೆ, ದಾನ, ತಪಸ್ಸು ಮೊದಲಾದ ಎಂತಹ ಸಾಧನೆಗಳಿಗೂ ಗೋಚರವಾಗದಷ್ಟು ಅಪೂರ್ವ ಎಂದು ತಿಳಿಸಿದ. ತನ್ನ ಮುಂಚಿನ ರೂಪವನ್ನೇ ತೋರಿ, ಸಮಾಧಾನಪಡಿಸಿದ.

ನೆಮ್ಮದಿಗೊಂಡ ಅರ್ಜುನನಿಗೆ ಶ್ರೀಕೃಷ್ಣ ಮತ್ತೆ ಕೆಲವು ವಿವರಗಳನ್ನು ನೀಡಿದ. ಆ ವಿಶ್ವರೂಪ ದೇವತೆಗಳೂ ಸಹ ಮತ್ತೆ ಮತ್ತೆ ಕಾಣಬಯಸುವಂತಹುದು. ಆದರೆ ಎಲ್ಲರಿಗೂ ಸುಲಭವಾಗಿ ಎಟಕುವಂತಹುದಲ್ಲ. ವೇದಗಳು, ತಪಸ್ಸು, ದಾನ, ಯಜ್ಞ ಯಾವುದೂ ಅಂತಹ ರೂಪದ ದರ್ಶನಕ್ಕೆ ಸಾಧನವಾಗದು[೨]. ಅನನ್ಯವಾದ ಭಕ್ತಿಯೊಂದೇ ಅದಕ್ಕೆ ಸಾಧನ. ಅವನಿಗೋಸ್ಕರ ಕರ್ಮಗಳನ್ನು ಆಚರಿಸುತ್ತಾ, ಅವನನ್ನೇ ಸರ್ವೋತ್ತಮನೆಂದು ಭಾವಿಸುತ್ತಾ, ಅವನ ಪರಮಭಕ್ತನಾಗಿ ಯಾವ ಪ್ರಾಣಿಗಳಲ್ಲೂ ವೈರಭಾವ ತಾಳದವನು ಭಗವಂತನನ್ನು ಪಡೆಯುವನು ಎಂದು ನಿರೂಪಿಸುವನು[೩].

---

೧. ವಿಶ್ವರೂಪವನ್ನು ಆ ಕಾಲದಲ್ಲಿ ಶ್ರೀಬ್ರಹ್ಮಾದಿ ದೇವತೆಗಳು ಮೊದಲಾದ ಭಕ್ತರೂ ಸಹ ಕಂಡರು:
ತ್ರಿಲೋಕೇಷು ಸ್ಥಿತೈರ್ಭಕ್ತೈರರ್ಜುನಾಯ ಪ್ರದರ್ಶಿತಮ್ ।
ದೃಷ್ಟಂ ವಿಷ್ಣೋರ್ವಿಶ್ವರೂಪಂ ಸ್ವಯೋಗ್ಯತ್ವಾನುರೂಪತಃ ।
ಪ್ರಾಯಃ ಸಹೈವ ಪಾರ್ಥೇನ ಪ್ರಾಯೋ ಭೀತಾಶ್ಚ ತೇಽಖಿಲಾಃ ।
ದರ್ಶನಾಭ್ಯಾಸತೋ ದೃಷ್ಟಿರಾನಂದೋದ್ರೇಕತಾ ಭವೇತ್ ।
ತಸ್ಮಿನ್ ಕಾಲೇ ತು ಭೂಮೇಶ್ಚ ಭಾರಹಾರಾರ್ಥಮುದ್ಯಮಾತ್ ।
ಉಗ್ರತ್ವಮಿವ ಸರ್ವತ್ರ ನ ಭೀತಿರ್ಬ್ರಹ್ಮದರ್ಶಿನಾಮ್ ।
ಅರ್ಜುನಾದಧಿಕಾ ಯೇ ತು ತೇಷಾಂ ಭೀತಿರ್ನ ಚಾಭವತ್ ।
ಶ್ರೀಬ್ರಹ್ಮರುದ್ರಪೂರ್ವಾಣಾಂ ಕೃಷ್ಣಾಯಾ ಭೀಮರಾಮಯೋಃ । (ಇತ್ಯಾಗ್ನೇಯವಚನಾತ್) ಗೀ. ತಾ.

೨. ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ ।
ಶಕ್ಯ ಏವಂವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ ॥ – ಗೀತಾ (೧/೫೩)
ಭಕ್ತ್ಯಾತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ ।
ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ॥ – ಗೀತಾ (೧೧/೫೪)

೩. ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಃ ಸಂಗವರ್ಜಿತಃ ।
ನಿರ್ವೈರಃ ಸರ್ವಭೂತೇಷು ಯಃ ಸ ಮಾಮೇತಿ ಪಾಂಡವ ॥ – ಗೀತಾ (೧೧/೫೫)

# ಅಧ್ಯಾಯ - ೧೨

ಕೃಷ್ಣನ ಒಲುಮೆಯಿಂದ ಮುಕ್ತಿ ಖಚಿತ ಎಂದಾಯಿತು. ಆದರೆ ಮಹಾಲಕ್ಷ್ಮಿಗೂ ಮುಕ್ತಿ ನೀಡುವ ಶಕ್ತಿ ಇದೆ ಎಂಬುದು ವೇದಾದಿಗಳಲ್ಲಿ ಪ್ರತಿಪಾದಿತವಾದ ವಿಚಾರ[೧]. ಮಹಾಲಕ್ಷ್ಮೀಯು ಬ್ರಹ್ಮಾದಿ ದೇವತೆಗಳನ್ನು ನಿಯಂತ್ರಿಸುವ ಮಹಾಶಕ್ತಿ. ಮಹಾವಿಷ್ಣುವಿನ ಪತ್ನಿ; ಅವನಂತೆ ದೇಶತಃ ಕಾಲತಃ ಸರ್ವತ್ರ ವ್ಯಾಪ್ತಳು ಎಂದ ಮೇಲೆ ಅವಳಿಗೆ ಮುಕ್ತಿ ನೀಡುವ ಸಾಮರ್ಥ್ಯ ಸಂಭಾವಿತ. ಹಾಗಿದ್ದಲ್ಲಿ ಇವರಿಬ್ಬರಲ್ಲಿ ಯಾರ ಆರಾಧನೆಯಿಂದ ಮುಕ್ತಿ ಪಡೆಯುವುದು ಶ್ರೇಷ್ಠ? ಈ ಪ್ರಶ್ನೆಗೆ ಈ ಅಧ್ಯಾಯದಲ್ಲಿ ಉತ್ತರವಿದೆ[೨].

*****

## ವಿಷ್ಣುವಿನ ಉಪಾಸನೆಯೇ ಮಿಗಿಲು; ಮಹಾಲಕ್ಷ್ಮಿಯ ಉಪಾಸನೆಯಲ್ಲ

ಭಗವಂತನು ಉತ್ತರಿಸಿದ. "ಯಾರು ನನ್ನಲ್ಲಿ ಮನಸ್ಸಿಟ್ಟು ಕರ್ಮಯೋಗ, ಧ್ಯಾನಯೋಗಗಳಲ್ಲಿ ಸದಾ ತೊಡಗಿ, ಅಪಾರನಂಬಿಕೆಯಿಂದ ನನ್ನನ್ನು ಸೇವಿಸುವರೋ, ಅಂತಹ ಸಾಧಕರೇ ಮಿಗಿಲು ಎಂದು ನನ್ನ ಅಭಿಮತ".

*****

ಅವ್ಯಕ್ತಶಬ್ದವಾಚ್ಯಳಾದ ಮಹಾಲಕ್ಷ್ಮಿಯ ಉಪಾಸನೆಯಿಂದಲೂ ಮುಕ್ತಿ ಸಾಧ್ಯ. ಆದರೆ ಅವರ ಉಪಾಸನೆ ಅಷ್ಟು ಸುಲಭವಾದುದಲ್ಲ. ಹಾಗೆ ಲಕ್ಷ್ಮಿಯನ್ನು ಉಪಾಸಿಸುವಾಗಲೂ ಭಗವದಾರಾಧನೆಯನ್ನು ಬಿಡುವಂತಿಲ್ಲ. ಕೇವಲ ಲಕ್ಷ್ಮಿಯ ಉಪಾಸನೆ ತಾರಕವೂ ಅಲ್ಲ. ತನ್ನ ಪತಿಯಾದ ನಾರಾಯಣನನ್ನು ಬಿಟ್ಟು ತನ್ನನ್ನು ಮಾತ್ರ ಪೂಜಿಸುವುದನ್ನು ಮಹಾಲಕ್ಷ್ಮಿ ಮೆಚ್ಚುವುದಿಲ್ಲ. ಅಲ್ಲದೆ ಮಹಾಲಕ್ಷ್ಮಿಯನ್ನು ಉಪಾಸನೆ ಮಾಡಿ, ಮೋಕ್ಷಕ್ಕೆ ತೆರಳುವವರು ಸಹ ಕೊನೆಗೆ ನಾರಾಯಣನನ್ನು ತಲುಪುವುದು ಅನಿವಾರ್ಯ. ಆದ್ದರಿಂದ ಮಹಾಲಕ್ಷ್ಮಿಯ ಉಪಾಸನೆಯಿಂದ ಮೋಕ್ಷ ಪಡೆಯುವುದಕ್ಕಿಂತ ನಾರಾಯಣನ ಉಪಾಸನೆಯಿಂದ ಮೋಕ್ಷ ಪಡೆಯುವುದೇ ಶ್ರೇಯಸ್ಕರ.

ಮಹಾಲಕ್ಷ್ಮಿಯ ಉಪಾಸನೆಗೆ ವಿಶೇಷ ಇಂದ್ರಿಯನಿಗ್ರಹ ಮೊದಲಾದ ಗುಣಗಳು ಆವಶ್ಯಕ. ಅದರಲ್ಲಿ ನಡೆಯುವ ಸಣ್ಣ ತಪ್ಪೂ ಸಹ ಅನರ್ಥಕ್ಕೆ ಕಾರಣವಾಗುವ

---

೧. ಶ್ರಿಯಂ ವಸಾನಾ ಅಮೃತತ್ವಮಾಯನ್ ಭವಂತಿ ಸತ್ಯಾ ಸಮಿಧಾ ಮಿತದ್ರೌ।

– ಋಗ್ವೇದ (೯/೯೪/೪)

೨. ಅವ್ಯಕ್ತೋಪಾಸನಾದ್ಭಗವದುಪಾಸನಸ್ಯೋತ್ತಮತ್ವಂ ಪ್ರದರ್ಶ್ಯ ತದುಪಾಯಂ ಪ್ರದರ್ಶಯತ್ಯಸ್ಮಿನ್ನಧ್ಯಾಯೇ। – ಗೀ.ಭಾ.

ಸಾಧನನಿರ್ಣಯೋSತ್ರ। – ಗೀ.ತಾ.

ಅಪಾಯವಿದೆ. ನಾರಾಯಣನು ತನ್ನ ಪೂಜೆಯಲ್ಲಿ ನಡೆಯುವ ತಪ್ಪುಗಳನ್ನು ಮನ್ನಿಸುವಂತೆ ಮಹಾಲಕ್ಷ್ಮಿ ಮನ್ನಿಸಲಾರಳು. ಜೊತೆಗೆ ಮಹಾಲಕ್ಷ್ಮಿಯ ಉಪಾಸನೆ-ಯಿಂದ ಮೋಕ್ಷ ಪಡೆಯುವುದು ಬಳಸುದಾರಿಯೂ ಸಹ ಆಗಿದೆ. ಆದ್ದರಿಂದಲೇ ಅದು ಶೀಘ್ರಫಲಕಾರಿಯೂ ಆಗದು. ಈ ಕಾರಣದಿಂದಲೂ ನಾರಾಯಣನ ಉಪಾಸನೆಯಿಂದ ಮೋಕ್ಷ ಪಡೆಯುವುದೇ ಲೇಸು.

ನಾರಾಯಣನು ಮನ್ನಿಸುವಂತೆ, ಮಹಾಲಕ್ಷ್ಮಿಯು ಭಕ್ತರ ಅಪರಾಧಗಳನ್ನು ಮನ್ನಿಸದಿರಲು ಅವನಂತೆ ಸ್ವತಂತ್ರಳಲ್ಲದಿರುವುದೇ ಕಾರಣ. ಸ್ವತಂತ್ರನಾದವನು ಸ್ವೇಚ್ಛೆಯಿಂದ ವರ್ತಿಸುವಂತೆ, ಅಸ್ವತಂತ್ರರು ವರ್ತಿಸಲು ಸಾಧ್ಯವಿಲ್ಲವಷ್ಟೆ! ಲೋಕದಲ್ಲೂ ಅಷ್ಟೆ ಮುಖ್ಯಾಧಿಕಾರಿಯು ಕೆಲವು ನ್ಯೂನತೆಗಳನ್ನು ಮನ್ನಿಸುವ ಸಾಮರ್ಥ್ಯ ಹೊಂದಿರುವಂತೆ, ಕೆಳಗಿನ ಅಧಿಕಾರಿಗಳು ಹೊಂದಿರಲು ಸಾಧ್ಯವಿಲ್ಲ. ಮಹಾಲಕ್ಷ್ಮೀ ಸದಾ ಭಗವದಧೀಳಾದ್ದರಿಂದ ಅವನು ಒಲಿಯುವವನಿಗೆ ಮಾತ್ರವೇ ಅವಳು ಅನುಗ್ರಹಿಸುವಳು. ಇಲ್ಲವಾದಲ್ಲಿ ಇಲ್ಲ.

ರಾಮಾಯಣದಲ್ಲಿ ಶ್ರೀರಾಮನ ಪಟ್ಟಾಭಿಷೇಕದ ಬಳಿಕ ಅವನು ಹನುಮಂತನಿಗೆ ಇತರರಿಗಿಂತ ಮಿಗಿಲಾಗಿ ಸಹಭೋಗವೆಂಬ ವಿಶೇಷ ಅನುಗ್ರಹವನ್ನು ನೀಡುವನು. ಬ್ರಹ್ಮ ಪದವಿಯನ್ನು ಅನುಗ್ರಹಿಸುವನು. ಆ ಬಳಿಕ ಅವನ ಆದೇಶದಂತೆ ಮಹಾಲಕ್ಷ್ಮಿಯ ಅವತಾರಳಾದ ಸೀತೆಯು ಅವನು ನೀಡಿದ ಅತ್ಯಮೂಲ್ಯವಾದ ರತ್ನಾಹಾರವನ್ನು ಹನುಮಂತನಿಗೆ ನೀಡಿ ತಾನು ಅನುಗ್ರಹಿಸುವಳು. ಇದು ಶ್ರೀಹರಿಯು ಒಲಿಯುವವನಿಗೆ ಮಾತ್ರವೇ ಮಹಾಲಕ್ಷ್ಮಿಯು ಸಹ ಅನುಗ್ರಹಿಸುವಳು ಎಂಬುದಕ್ಕೆ ಪುರಾವೆಯಾಗಿದೆ.

ಸೀತೆಯನ್ನು ಬಯಸಿದ ರಾವಣ ಸಕುಟುಂಬ ಸಪರಿವಾರನಾಗಿ ಸರ್ವನಾಶ ಕಂಡಿದ್ದು ಸಹ ರಾಮಾಯಣದ ಸಂದೇಶ. ಎಂದರೆ ಶ್ರೀರಾಮನನ್ನು ಬಿಟ್ಟು ಸೀತೆಯನ್ನು ಮಾತ್ರ ಬಯಸಿದ ಅವನು ಇಲ್ಲಿ ತಿಳಿಸಿರುವಂತೆ ಘೋರ ಅನರ್ಥಕ್ಕೆ ಗುರಿಯಾದ. ಆದರೆ ಶ್ರೀರಾಮನನ್ನು ಭಕ್ತಿಯಿಂದ ಆರಾಧಿಸಿದ ಹನುಮಂತ ಸೀತೆಯ ಅನುಗ್ರಹಕ್ಕೂ ಪಾತ್ರನಾದ.

*****

ಕೆಲವರು ಇಲ್ಲಿಯ ಸಮಸ್ಯೆಯನ್ನು 'ನಿರ್ಗುಣೋಪಾಸನೆ ಹಾಗೂ ಸಗುಣೋ-ಪಾಸನೆಗಳಲ್ಲಿ ಯಾವುದು ಮಿಗಿಲು' ಎಂಬುದಾಗಿ ಅರ್ಥೈಸಿರುವುದುಂಟು. ಆದರೆ ಅದು ಇಲ್ಲಿ ಅಸಂಗತ. ಪ್ರಶ್ನೆ ಹಾಗಿದ್ದಿದ್ದರೆ, ನಿರ್ಗುಣೋಪಾಸನೆಗಿಂತ ಸಗುಣೋಪಾಸನೆ ಶ್ರೇಷ್ಠ ಎಂದು ಈ ಪ್ರಸಂಗದ ಅರ್ಥವಾಗುತ್ತದೆ. ಹಾಗಿದ್ದರೆ ನಿರ್ಗುಣಬ್ರಹ್ಮನ ಪರಿಕಲ್ಪನೆ ಅರ್ಥಹೀನವಾಗಿ ತಮ್ಮ ಮತಕ್ಕೇ ಅದರಿಂದ ನ್ಯಾಯಸಲ್ಲುವಂತಾಗುವುದಿಲ್ಲ. ಆದ್ದರಿಂದ

ಆಚಾರ್ಯ ಮಧ್ವರು ವಿವರಿಸಿರುವಂತೆ ಇಲ್ಲಿಯ ಅರ್ಥ ಲಕ್ಷ್ಮೀನಾರಾಯಣರ ಉಪಾಸನೆಯನ್ನು ಕುರಿತಾದುದೇ ಸರಿ.

*****

ಪದ್ಮಪುರಾಣದಲ್ಲಿ ಗೀತಾಮಾಹಾತ್ಮ್ಯ ವರ್ಣಿತವಾಗಿದ್ದು ಹನ್ನೆರಡನೆಯ ಅಧ್ಯಾಯದ ಅಲ್ಲಿಯ ಮಾಹಾತ್ಮ್ಯ ಹೀಗಿದೆ. ಒಬ್ಬ ರಾಜಕುಮಾರ ತನ್ನ ತಂದೆ ಅಶ್ವಮೇಧಯಾಗವನ್ನು ಹಮ್ಮಿಕೊಂಡು, ಅದು ಪೂರೈಸುವ ಮುನ್ನವೇ ಯಜ್ಞಾಶ್ವ ಅಪಹರಣವಾಗಿ ಅದರ ಚಿಂತೆಯಲ್ಲಿ ಅವನು ಮೃತನಾದ; ಅವನು ತಂದೆಯ ಅಪೇಕ್ಷೆಯನ್ನು ಪೂರೈಸಲೆಂದು ಯಜ್ಞಾಶ್ವದ ಇರವನ್ನು ತಿಳಿಯಲೆಂದು ಕೊಲ್ಹಾಪುರದ ಮಹಾಲಕ್ಷ್ಮಿಯನ್ನು ಶರಣು ಹೊಂದುತ್ತಾನೆ. ಆಗ ಮಹಾಲಕ್ಷ್ಮಿಯು ಸಿದ್ಧಸಾಧನ ಎಂಬವನ ಬಳಿಗೆ ಕಳುಹಿಸಿ, ಅವನ ಮೂಲಕ ಅವನ ಸಂಕಲ್ಪವನ್ನೂ ಈಡೇರಿಸುತ್ತಾಳೆ. ಅವನಿಂದ ಯಜ್ಞದ ಕುದುರೆ ದೊರೆಯುವುದರೊಂದಿಗೆ, ಮೃತನಾಗಿದ್ದ ರಾಜನೂ ಮರಳಿ ಬದುಕಿ, ಉದ್ಧೃತನಾಗುತ್ತಾನೆ.

ಇದೂ ಸಹ ಹನ್ನೆರಡನೆಯ ಅಧ್ಯಾಯವು ಲಕ್ಷ್ಮೀನಾರಾಯಣರ ಉಪಾಸನೆಗೆ ಸಂಬಂಧಿಸಿದ ಅರ್ಥವನ್ನೇ ಸಮರ್ಥಿಸುತ್ತದೆ ಎಂಬುದನ್ನು ಗಮನಿಸಬೇಕು.

*****

ಭಗವಂತನ ಆರಾಧನೆ ಸುಲಭ ಎಂಬುದನ್ನು ಈ ಅಧ್ಯಾಯಲ್ಲಿ ಬಗೆ ಬಗೆಯಾಗಿ ನಿರೂಪಿಸಲಾಗಿದೆ. ಭಗವಂತನಲ್ಲಿ ಮನಸ್ಸು ಬುದ್ಧಿಗಳನ್ನು ತೊಡಗಿಸುವುದರಿಂದ ಅವನ ಒಲುಮೆ ಸಾಧ್ಯ. ಅದಾಗದಿದ್ದಲ್ಲಿ ಅದಕ್ಕಾಗಿ ಪ್ರಯತ್ನಿಸುವುದರಿಂದಲೂ, ಒಳಿತು ಖಚಿತ. ಅಂತಹ ಅಭ್ಯಾಸವೂ ಅಸಾಧ್ಯವೆನ್ನಿಸಿದರೆ, ಅವನು ಮೆಚ್ಚುವ ಕರ್ಮಗಳನ್ನಾದರೂ ಆಚರಿಸಿದರೂ ಸಾಕು. ಅದೂ ಸಿದ್ಧಿಗೆ ಕಾರಣ. ಅಂತಹ ಜಪಾರ್ಚನಾದಿಕರ್ಮಾಚರಣೆಯೂ ಅಶಕ್ಯವೆನ್ನಿಸಿದರೆ, ಸಕಲಕರ್ಮಗಳ ಫಲದ ಬಯಕೆಯನ್ನಾದರೂ ತೊರೆಯಬೇಕು. ಅದೂ ಸದ್ಗತಿಗೆ ಸಾಧನವೇ[1].

*****

---

೧. ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ ।
ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ ॥
ಅಥ ಚಿತ್ತಂ ಸಮಾಧಾತುಂ ನ ಶಕ್ನೋಷಿ ಮಯಿ ಸ್ಥಿರಮ್ ।
ಅಭ್ಯಾಸಯೋಗೇನ ತತೋ ಮಾಮಿಚ್ಛಾಪ್ತುಂ ಧನಂಜಯ ॥
ಅಭ್ಯಾಸೇಽಪ್ಯಸಮರ್ಥೋಽಸಿ ಮತ್ಕರ್ಮಪರಮೋ ಭವ ।
ಮದರ್ಥಮಪಿ ಕರ್ಮಾಣಿ ಕುರ್ವನ್ ಸಿದ್ಧಿಮವಾಪ್ಸ್ಯಸಿ ॥
ಅಥೈತದಪ್ಯಶಕ್ತೋಽಸಿ ಕರ್ತುಂ ಮದ್ಯೋಗಮಾಶ್ರಿತಃ ।
ಸರ್ವಕರ್ಮಫಲತ್ಯಾಗಂ ತತಃ ಕುರು ಯತಾತ್ಮವಾನ್ ॥ - ಗೀತಾ (೧೨/೮-೧೧)

ಕೇವಲ ಅಭ್ಯಾಸಕ್ಕಿಂತ ಜ್ಞಾನ ಮಿಗಿಲು. ಕೇವಲ ಜ್ಞಾನಕ್ಕಿಂತ ಧ್ಯಾನ ಮಿಗಿಲು. ಕೇವಲ ಧ್ಯಾಸಕ್ಕಿಂತ ಕರ್ಮಫಲತ್ಯಾಗರೂಪವಾದ ನಿಷ್ಕಾಮಧ್ಯಾನ ಮಿಗಿಲು. ಅಂತಹ ಕರ್ಮಫಲತ್ಯಾಗರೂಪವಾದ ನಿಷ್ಕಾಮಧ್ಯಾನದಿಂದಲೇ ಮೋಕ್ಷ ।

*****

## ಭಗವದ್ಭಕ್ತನ ಲಕ್ಷಣಗಳು

ಅಧ್ಯಾಯದ ಉಳಿದ ಭಾಗ ಭಗವದ್ಭಕ್ತನ ಲಕ್ಷಣಗಳಿಗೆ ಮೀಸಲು. ಅದು ನೀಡುವ ಭಕ್ತನ ಚಿತ್ರ ಅಪೂರ್ವವಾದದ್ದು.

ಯಾವ ಪ್ರಾಣಿಗಳಲ್ಲೂ ವೈರವಿರದವನು, ಎಲ್ಲರೊಡನೆ ಸ್ನೇಹದಿಂದಿರುವವನು, ಪರರ ಸಂಕಟಕ್ಕೆ ಮರುಗುವವನು, ಮಮಕಾರ ತೊರೆದವನು, ಅಹಂಕಾರ ಬಿಟ್ಟವನು, ಲೌಕಿಕಸುಖದುಃಖಗಳನ್ನು ಸಮಭಾವದಿಂದ ಕಾಣುವವನು, ಕ್ಷಮಾಶೀಲನು, ಅನುಗಾಲ ಸಂತೃಪ್ತಿಯಿಂದ ಇರುವವನು, ಕರ್ಮಯೋಗ ಧ್ಯಾನಯೋಗದಲ್ಲಿ ತೊಡಗಿದವನು, ಮನಸ್ಸನ್ನು ನಿಯಂತ್ರಿಸಿದವನು, ದೃಢವಾಗಿ ತತ್ತ್ವ ತಿಳಿದವನು, ಮನಸ್ಸು ಬುದ್ಧಿಗಳನ್ನು ಭಗವಂತನಿಗೊಪ್ಪಿಸಿದವನು, ಜನರನ್ನು ಅಂಜಿಸದವನು, ದುರ್ಜನರಿಗೆ ಅಂಜದವನು, ಉದ್ರೇಕ, ರೋಷ, ಅಂಜಿಕೆ, ಉದ್ವೇಗಗಳಿಗೆ ಒಳಗಾಗದವನು, ದುರಾಸೆ ಪಡದವನು, ಒಳಹೊರಗೆ ಚೊಕ್ಕಟವಾಗಿರುವವನು, ಕರ್ತವ್ಯನಿಪುಣನು, ಯಾವುದಕ್ಕೂ ಅಂಟಿಕೊಳ್ಳದವನು, ಕಂಗೆಡದವನು, ಭಗವಂತನಿಗೆ ಮೆಚ್ಚಿಗೆಯಾಗದ ಸಕಲಕಾರ್ಯಗಳನ್ನೂ ತೊರೆದವನು (ಸಕಲಕರ್ಮಗಳ ಫಲವನ್ನೂ ಭಗವಂತನಿಗೆ ಒಪ್ಪಿಸುವವನು, ಸಕಲಕರ್ಮಗಳಲ್ಲೂ ಫಲದ ನಂಟು ತೊರೆದವನು), (ಲೌಕಿಕಸುಖಕ್ಕೆ) ಉಬ್ಬದವನು, (ವಿನಾಕಾರಣ ಇತರರನ್ನು) ದ್ವೇಷಿಸದವನು, (ಬಯಸಿದ್ದು ದೊರೆಯದಾಗ)ಕೊರಗದವನು, (ಸಲ್ಲದ್ದನ್ನು)ಬಯಸದವನು, (ಲೌಕಿಕ) ಒಳಿತುಕೆಡುಕುಗಳನ್ನು ಹಚ್ಚಿಕೊಳ್ಳದವನು, ಶತ್ರುಮಿತ್ರರಲ್ಲಿ ಸಮನಾಗಿರುವವನು, ಮಾನ-ಅಪಮಾನಗಳನ್ನು ಶೀತ-ಉಷ್ಣ ಸುಖ-ದುಃಖಗಳನ್ನು ಸಮಭಾವದಿಂದ ಕಾಣುವವನು, - ಫಲದ ನಂಟು ತೊರೆದವನು, ಹೊಗಳಿಕೆ, ತೆಗಳಿಕೆಗಳನ್ನು ಹಚ್ಚಿಕೊಳ್ಳದವನು, ಚಿಂತನಶೀಲನು, ದೊರೆತದ್ದರಲ್ಲಿ ಸಂತೃಪ್ತಿ ಕಾಣುವವನು, ಒಂದೇ ಸ್ಥಳಕ್ಕೆ ಜೋತುಬೀಳದವನು ಹೀಗೆ ಸ್ಥಿತಪ್ರಜ್ಞನಾದವನೇ ನಿಜವಾದ ಭಗವದ್ಭಕ್ತ ; ಅಂತಹ ಭಕ್ತನು ಭಗವಂತನಿಗೆ ಅತ್ಯಂತಪ್ರಿಯ. ಅವರು ಧರ್ಮಮೋಕ್ಷಗಳಿಗೆ ಸಾಧನವಾಗುವ

ಭಕ್ತಿಯೋಗವನ್ನು ತಿಳಿದು, ಭಗವಂತನನ್ನೇ ಪರದೈವವೆಂದು ಬಗೆದು, ಶ್ರದ್ಧಾಳುಗಳಾಗಿ ತಮ್ಮ ಗತಿಯನ್ನು ಸಾಧಿಸಿಕೊಳ್ಳುವರು[೧].

ಇಲ್ಲಿ ಬಂದಿರುವ ಭಗವದ್ಭಕ್ತನ ಲಕ್ಷಣಗಳು ಆದರ್ಶಸಾಧಕನ ಲಕ್ಷಣಗಳಾಗಿವೆ. ಇಂತಹವನು ಪರಗತಿಯನ್ನು ಸಾಧಿಸುವುದರೊಂದಿಗೆ ಇಹಜೀವನದಲ್ಲೂ ಯಶಸ್ವಿಯಾಗುವನು. ಸದಾ ನೆಮ್ಮದಿಯಿಂದಿದ್ದು ಸಮಾಜದ ಕಲ್ಯಾಣಕ್ಕೂ ಕಾರಣನಾಗುವನು. ಅದಕ್ಕೆಂದೇ ಭಗವದ್ಭಕ್ತನಿಗೆ ಶಾಸ್ತ್ರಪ್ರಪಂಚದಲ್ಲಿ ಹೇಗೋ, ಲೌಕಿಕಪ್ರಪಂಚದಲ್ಲೂ ಅಪಾರಮನ್ನಣೆ.

*****

---

೧. ಸಂತುಷ್ಟಃ ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ।
ಮಯ್ಯರ್ಪಿತಮನೋಬುದ್ಧಿರ್ಯೋ ಮದ್ಭಕ್ತಃ ಸ ಮೇ ಪ್ರಿಯಃ॥
ಯಸ್ಮಾನ್ನೋದ್ವಿಜತೇ ಲೋಕೋ ಲೋಕಾನ್ನೋದ್ವಿಜತೇ ಚ ಯಃ।
ಹರ್ಷಾಮರ್ಷಭಯೋದ್ವೇಗೈರ್ಮುಕ್ತೋ ಯಃ ಸ ಚ ಮೇ ಪ್ರಿಯಃ॥
ಅನಪೇಕ್ಷಃ ಶುಚಿರ್ದಕ್ಷ ಉದಾಸೀನೋ ಗತವ್ಯಥಃ।
ಸರ್ವಾರಂಭಪರಿತ್ಯಾಗೀ ಯೋ ಮದ್ಭಕ್ತಃ ಸ ಮೇ ಪ್ರಿಯಃ॥
ಯೋ ನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಂಕ್ಷತಿ।
ಶುಭಾಶುಭಪರಿತ್ಯಾಗೀ ಭಕ್ತಿಮಾನ್ ಯಃ ಸ ಮೇ ಪ್ರಿಯಃ॥
ಸಮಃ ಶತ್ರೌ ಚ ಮಿತ್ರೇ ಚ ತಥಾ ಮಾನಾಪಮಾನಯೋಃ।
ಶೀತೋಷ್ಣಸುಖದುಃಖೇಷು ಸಮಃ ಸಂಗವಿವರ್ಜಿತಃ॥
ತುಲ್ಯನಿಂದಾಸ್ತುತಿರ್ಮೌನೀ ಸಂತುಷ್ಟೋ ಯೇನ ಕೇನಚಿತ್।
ಅನಿಕೇತಃ ಸ್ಥಿರಮತಿರ್ಭಕ್ತಿಮಾನ್ ಮೇ ಪ್ರಿಯೋ ನರಃ॥
ಯೇ ತು ಧರ್ಮ್ಯಾಮೃತಮಿದಂ ಯಥೋಕ್ತಂ ಪರ್ಯುಪಾಸತೇ।
ಶ್ರದ್ದಧಾನಾ ಮತ್ಪರಮಾ ಭಕ್ತಾಸ್ತೇಽತೀವ ಮೇ ಪ್ರಿಯಾಃ॥ – ಗೀತಾ (೧೨/೧೪-೨೦)

# ಅಧ್ಯಾಯ - ೧೩

ಪ್ರಕೃತಿ-ಪುರುಷ, ಕ್ಷೇತ್ರ-ಕ್ಷೇತ್ರಜ್ಞ ಮತ್ತು ಜ್ಞಾನ(ಸಾಧನ)-ಜ್ಞೇಯ ಎಂಬ ಆರು ಮುಖ್ಯವಿಷಯಗಳ ಬಗ್ಗೆ [೧]ವಿವೇಚನೆಯು ಈ ಅಧ್ಯಾಯದಲ್ಲಿ ಬಂದಿದೆ.

*****

## ಕ್ಷೇತ್ರ - ಕ್ಷೇತ್ರಜ್ಞ

ಅವ್ಯಕ್ತಾದಿತತ್ತ್ವಗಳಿಂದ ಕೂಡಿದ ಈ ವಿಶ್ವವೇ ಕ್ಷೇತ್ರ. ಈ ವಿಶ್ವವನ್ನು ಸಮಗ್ರ ಬಲ್ಲ ಭಗವಂತನೇ ಕ್ಷೇತ್ರಜ್ಞ[೨]. ಆ ಕ್ಷೇತ್ರಾದಿಗಳ ಸ್ವರೂಪವು ಋಷಿವಾಣಿಯಲ್ಲೂ, ವೇದಮಂತ್ರಗಳಲ್ಲೂ, ನಿರ್ಣಾಯಕವಾದ ಬ್ರಹ್ಮಸೂತ್ರಗಳಲ್ಲೂ ಬಂದಿದೆ[೩].

ಆಕಾಶ(ಗಣೇಶ), ವಾಯು(ಪ್ರಧಾನವಾಯುಪುತ್ರನಾದ ಮರೀಚಿ), ತೇಜಸ್ಸು (ಅಗ್ನಿ), ಅಪ್-ಜಲ(ವರುಣ) ಮತ್ತು ಪೃಥ್ವಿ(ಧರಾದೇವಿ) ಎಂಬ ಪಂಚಮಹಾಭೂತಗಳು; ಅಹಂಕಾರತತ್ತ್ವ(ಶಿವ), ಬುದ್ಧಿತತ್ತ್ವ(ಉಮಾ), ಮಹತ್ತತ್ತ್ವ(ಚತುರ್ಮುಖಬ್ರಹ್ಮ) ಅವ್ಯಕ್ತತತ್ತ್ವ(ಸತ್ತ್ವ, ರಜಸ್ ಮತ್ತು ತಮಸ್ ಎಂಬ ತ್ರಿಗುಣಗಳಿಂದ ಕೂಡಿದ ಮೂಲಪ್ರಕೃತಿ – ಮಹಾಲಕ್ಷ್ಮಿ), ಚಕ್ಷುಸ್ಸು(ಸೂರ್ಯ), ಶ್ರೋತ್ರ(ಚಂದ್ರ), ತ್ವಕ್ (ವಾಯುಪುತ್ರ ಮರುತ್), ಜಿಹ್ವೆ(ವರುಣ) ಮತ್ತು ಘ್ರಾಣ(ಅಶ್ವಿನೀದೇವತೆಗಳು) ಎಂಬ ಐದು ಜ್ಞಾನೇಂದ್ರಿಯಗಳು; ವಾಕ್(ಅಗ್ನಿ), ಕೈಗಳು (ವಾಯುಪುತ್ರರಾದ ಇಬ್ಬರು ಮರುತ್ತುಗಳು), ಕಾಲುಗಳು(ಯಜ್ಞ ಮತ್ತು ಶಂಭು), ಪಾಯು(ಯಮ) ಮತ್ತು ಉಪಸ್ಥ(ಶಿವ ಮತ್ತು ಸ್ವಾಯಂಭುವಮನು) ಎಂಬ ಐದು ಕರ್ಮೇಂದ್ರಿಯಗಳು; ಮತ್ತು ಮನಸ್ಸು(ಸ್ಕಂದ, ಇಂದ್ರ, ಅನಿರುದ್ಧ) ಎಂಬ ಒಟ್ಟು ಹನ್ನೊಂದು ಇಂದ್ರಿಯಗಳು; ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧ(ಈ ಐದಕ್ಕೆ ಕ್ರಮವಾಗಿ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂಬ ಶಿವಪುತ್ರರು) ಎಂಬ ಐದು ಇಂದ್ರಿಯವಿಷಯಗಳು; ಇಚ್ಛೆ(ಮಹಾಲಕ್ಷ್ಮಿ ಮತ್ತು ಭಾರತಿ), ದ್ವೇಷ(ಕಲಿ), ಸುಖ(ಮುಖ್ಯಪ್ರಾಣ), ದುಃಖ(ದ್ವಾಪರ), ದೇಹ(ಜೀವ), ಚೇತನಾ(ಮಹಾಲಕ್ಷ್ಮಿ) ಮತ್ತು ಧೈರ್ಯ(ಸರಸ್ವತಿ, ಭಾರತಿ).

---

೧. ಪೂರ್ವೋಕ್ತಜ್ಞಾನಜ್ಞೇಯಕ್ಷೇತ್ರಪುರುಷಾನ್ ಪಿಂಡೀಕೃತ್ಯ ವಿವಿಚ್ಯ ದರ್ಶಯತ್ಯನೇನಾಧ್ಯಾಯೇನ।
– ಗೀ. ಭಾ.

ಸರ್ವಾರ್ಥಸಂಕ್ಷೇಪೋಽಯಮ್। – ಗೀ. ತಾ.

೨. ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ।
ಕ್ಷೇತ್ರಕ್ಷೇತ್ರಜ್ಞಯೋರ್ಜ್ಞಾನಂ ಯತ್ ತಜ್ಜ್ಞಾನಂ ಮತಂ ಮಮ॥ – ಗೀತಾ (೧೩/೩)

೩. ಋಷಿಭಿರ್ಬಹುಧಾ ಗೀತಂ ಛಂದೋಭಿರ್ವಿವಿಧೈಃ ಪೃಥಕ್।
ಬ್ರಹ್ಮಸೂತ್ರಪದೈಶ್ಚೈವ ಹೇತುಮದ್ಭಿರ್ವಿನಿಶ್ಚಿತಮ್॥ – ಗೀತಾ (೧೩/೫)

ಇವಿಷ್ಟು ಕ್ಷೇತ್ರ ಹಾಗೂ ಅದರ ವಿಕಾರಗಳ ಸಂಗ್ರಹವಾದ ನಿರೂಪಣೆ.

*****

ಇಲ್ಲಿಯ ಕ್ಷೇತ್ರವನ್ನು ಶರೀರವೆಂದೂ, ಶರೀರದೊಳಗಿನ ಜೀವನನ್ನು ಕ್ಷೇತ್ರಜ್ಞನೆಂದೂ ಕೆಲವರು ವ್ಯಾಖ್ಯಾನಿಸಿರುವುದುಂಟು. ಆದರೆ ಇಲ್ಲಿಯ ಮುಂದಿನ ವಿವರಗಳಂತೆ ಕ್ಷೇತ್ರವೆಂಬುದು ಶರೀರಕ್ಕೆ ಮಾತ್ರ ಅನ್ವಯಿಸದೆ, ಇಡೀ ವಿಶ್ವಕ್ಕೆ ಅನ್ವಯಿಸುವುದು ಎಂಬುದು ಸ್ಪಷ್ಟ. ಅಂತಹ ವಿಶ್ವವನ್ನು ಜೀವ ಖಂಡಿತ ಅರಿತಿಲ್ಲವಾದ್ದರಿಂದ ಅವನೆಂದೂ ಕ್ಷೇತ್ರಜ್ಞನೆನ್ನಿಸಲಾರ. ವಿಶ್ವವನ್ನು ಬಲ್ಲ ಭಗವಂತನೇ ಕ್ಷೇತ್ರಜ್ಞ ಎಂಬುದು ಇಲ್ಲಿಯ ಭಾವ. ಶರೀರವನ್ನೇ ಕ್ಷೇತ್ರವೆಂದಿಟ್ಟುಕೊಂಡರೂ, ಜೀವ ಕ್ಷೇತ್ರಜ್ಞನಾಗಲಾರ. ಯಾವನೂ ತನ್ನ ಶರೀರವನ್ನು ಪೂರ್ಣ ತಿಳಿದಿಲ್ಲ ಎಂಬುದು ಅನುಭವದಿಂದಲೇ ಸಿದ್ಧವಾಗಿರುವ ವಿಚಾರ. ಹಾಗೆ ತಿಳಿದಿದ್ದಲ್ಲಿ, ಶರೀರಪರೀಕ್ಷೆಗೆಂದು ಯಾರೂ ವೈದ್ಯರ ಬಳಿಗೆ ತೆರಳಬೇಕಾಗಿರಲಿಲ್ಲ. ವೈದ್ಯರೂ ಶರೀರವನ್ನು ಪೂರ್ಣ ಬಲ್ಲವರೇನಲ್ಲ. ಅವರಿಗೂ ತೆರತೆರನಾದ ಉಪಕರಣಗಳ ನೆರವು ಬೇಕೇ ಬೇಕು. ಆಗಲೂ ಸಮಗ್ರ ದೇಹದ ಅರಿವು ಬಂದೇ ಬರುವುದೆಂಬ ನಿಶ್ಚಯವೇನಿಲ್ಲ. ಎಂದರೆ ನಿಜವಾದ ಅರ್ಥದಲ್ಲಿ ಕ್ಷೇತ್ರಜ್ಞನೆಂದರೆ ಭಗವಂತನೇ. ವಿಷ್ಣುಸಹಸ್ರನಾಮದಲ್ಲೂ ಕ್ಷೇತ್ರಜ್ಞ ಎಂಬುದು ಭಗವಂತನ ಹೆಸರಾಗಿಯೇ ನಿರೂಪಿತ-ವಾಗಿರುವುದು ಇದಕ್ಕೆ ಪೋಷಕ: ಕ್ಷೇತ್ರಂ ಕ್ಷೇತ್ರಜ್ಞ ಏವ ಚ

*****

## ಜ್ಞಾನಪ್ರಾಪ್ತಿಯ ಇಪ್ಪತ್ತು ಸಾಧನೆಗಳು

ಕ್ಷೇತ್ರ-ಕ್ಷೇತ್ರಜ್ಞ ನಿರೂಪಣೆಯ ಅನಂತರ ಬ್ರಹ್ಮಜ್ಞಾನಕ್ಕೆ ಸಾಧನವಾದ ಇಪ್ಪತ್ತು ವಿಶೇಷಧರ್ಮಗಳು ಇಲ್ಲಿ ನಿರೂಪಿತವಾಗಿದೆ.[೧] ಅವುಗಳೆಂದರೆ – ತನ್ನ ಬಗ್ಗೆ ಕೊಚ್ಚಿಕೊಳ್ಳ-ದಿರುವುದು, ಬೀಗದಿರುವುದು, ಮತ್ತೊಬ್ಬರನ್ನು ನೋಯಿಸದಿರುವುದು, (ಸುಖ-ದುಃಖಗಳನ್ನು) ಸಹಿಸಿಕೊಳ್ಳುವುದು, ನಡೆನುಡಿಗಳಲ್ಲಿ ನೇರವಾಗಿರುವುದು, ಗುರು-

---

೧. ಅಮಾನಿತ್ವಮದಂಭಿತ್ವಮಹಿಂಸಾ ಕ್ಷಾಂತಿರಾರ್ಜವಮ್ ।
ಆಚಾರ್ಯೋಪಾಸನಂ ಶೌಚಂ ಸ್ಥೈರ್ಯಮಾತ್ಮವಿನಿಗ್ರಹಃ ॥
ಇಂದ್ರಿಯಾರ್ಥೇಷು ವೈರಾಗ್ಯಮನಹಂಕಾರ ಏವ ಚ ।
ಜನ್ಮಮೃತ್ಯುಜರಾವ್ಯಾಧಿದುಃಖದೋಷಾನುದರ್ಶನಮ್ ॥
ಅಸಕ್ತಿರನಭಿಷ್ವಂಗಃ ಪುತ್ರದಾರಗೃಹಾದಿಷು ।
ನಿತ್ಯಂ ಚ ಸಮಚಿತ್ತತ್ವಮಿಷ್ಟಾನಿಷ್ಟೋಪಪತ್ತಿಷು ॥
ಮಯಿ ಚಾನನ್ಯಯೋಗೇನ ಭಕ್ತಿರವ್ಯಭಿಚಾರಿಣೀ ।
ವಿವಿಕ್ತದೇಶಸೇವಿತ್ವಮರತಿರ್ಜನಸಂಸದಿ ॥
ಅಧ್ಯಾತ್ಮಜ್ಞಾನನಿತ್ಯತ್ವಂ ತತ್ತ್ವಜ್ಞಾನಾರ್ಥದರ್ಶನಮ್ ।
ಏತಜ್ಜ್ಞಾನಮಿತಿ ಪ್ರೋಕ್ತಮಜ್ಞಾನಂ ಯದತೋಽನ್ಯಥಾ ॥ – ಗೀತಾ (೧೩/೮-೧೨)

ಹಿರಿಯರನ್ನು ಸೇವಿಸುವುದು, ಮೈಮನಸ್ಸುಗಳನ್ನು ಚೊಕ್ಕಟವಾಗಿಟ್ಟುಕೊಳ್ಳುವುದು, ಸ್ವಧರ್ಮವನ್ನು ಎಂದೂ ತೊರೆಯದಿರುವುದು, ಮನಸ್ಸನ್ನು ವಿಶೇಷವಾಗಿ ಹತೋಟಿಯಲ್ಲಿಟ್ಟುಕೊಳ್ಳುವುದು, ಇಂದ್ರಿಯವಿಷಯಗಳಲ್ಲಿ ವೈರಾಗ್ಯ, ಅಹಂಕಾರ ಪಡದಿರುವುದು, ಹುಟ್ಟು ಸಾವು, ಮುಪ್ಪು ಹಾಗೂ ರೋಗಗಳ ಕೆಡುಕುಗಳ ಬಗ್ಗೆ ಸದಾ ಎಚ್ಚರದಿಂದಿರುವುದು, ಮಕ್ಕಳು, ಮಡದಿ, ಮನೆ ಮೊದಲಾದವುಗಳ ಬಗ್ಗೆ ಮೋಹವಿಲ್ಲ-ದಿರುವುದು, ಅತಿಯಾಗಿ ಹಚ್ಚಿಕೊಳ್ಳದಿರುವುದು, ಬೇಕುಬೇಡಗಳು ಒದಗಿದಾಗ ಉಬ್ಬದೆ, ಕುಗ್ಗದೆ ಸದಾ ಒಂದೇ ತೆರನಾಗಿರುವುದು, ಭಗವಂತನಲ್ಲಿ ಬೇರೆಡೆಗೆ ಹಾಯದ ದೃಢವಾದ ಭಕ್ತಿ, ಏಕಾಂತದಲ್ಲಿರುವುದು, ಜನಜಂಗುಳಿಯಿಂದ ದೂರವಾದ ನಿರ್ಮಲಪ್ರದೇಶ-ದಲ್ಲಿರುವುದು, ಸದಾ ಭಗವಂತನನ್ನು ಚಿಂತಿಸುತ್ತಿರುವುದು, ಬ್ರಹ್ಮಸಾಕ್ಷಾತ್ಕಾರಕ್ಕೆಂದು ಶಾಸ್ತ್ರಾಧ್ಯಯನ ಮಾಡುವುದು – ಇವೆಲ್ಲ ತತ್ತ್ವಜ್ಞಾನದ ಪ್ರಧಾನಸಾಧನಗಳು. ಈ ಗುಣಗಳನ್ನು ಅಳವಡಿಸಿಕೊಳ್ಳದವನಿಗೆ ಎಂದೂ ತತ್ತ್ವಜ್ಞಾನ ಸಿದ್ಧಿಸದು.

ಜ್ಞಾನಸಾಧಕನಿಗೆ ಬೇಕಾದ ಅರ್ಹತೆಗಳೆಲ್ಲ ಇಲ್ಲಿ ಅತ್ಯಂತ ಅಡಕವಾಗಿ ನಿರೂಪಿತವಾಗಿದ್ದು ಇವುಗಳನ್ನು ಅಳವಡಿಸಿಕೊಳ್ಳುವುದು ಸರ್ವೋನ್ನತಿಯ ಪ್ರಮುಖ ಸಾಧನವಾಗುವುದು.

*****

ಮುಂದಿನ ಭಾಗವು ಜ್ಞೇಯದ ನಿರೂಪಣೆ. ಜ್ಞೇಯವೆಂದರೆ ಅಗತ್ಯವಾಗಿ ತಿಳಿಯಲ್ಪಡಬೇಕಾದ ವಸ್ತು ಎಂದರ್ಥ. ಯಾವ ವಸ್ತುವನ್ನು ತಿಳಿಯುವುದರಿಂದ ಇಹಪರಗಳ ಸಫಲತೆ ಸಾಧಿಸುವುದೂ, ಅದೇ ನಿಜವಾದ ಜ್ಞೇಯ. ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕವಿದ್ದಂತೆ. ಅಂತಹ ಜ್ಞೇಯಗಳಲ್ಲಿ ಭಗವಂತನಿಗೇ ಅಗ್ರಸ್ಥಾನ. ಆದ್ದರಿಂದ ಜ್ಞೇಯವೆಂದರೆ ಅವನೇ; ಅವನನ್ನು ತಿಳಿಯುವುದರಿಂದ ಮಾತ್ರವೇ ಮೋಕ್ಷವು ಲಭಿಸುವುದು.

*****

## ಬ್ರಹ್ಮತತ್ತ್ವದ ಹಿರಿಮೆ

ಭಗವಂತನಿಗೆ ಪ್ರಾಕೃತದೇಹವಾಗಲಿ, ಪ್ರಾಕೃತ ಇಂದ್ರಿಯವಾಗಲಿ, ಇರುವುದಿಲ್ಲ. ಅವನ ದೇಹ ಇಂದ್ರಿಯಾದಿಗಳೆಲ್ಲ ಅವನ ಸ್ವರೂಪವೇ.[೧] ಅವನಿಗೆ ಎಲ್ಲೆಡೆಯೂ ಕಣ್ಣುಗಳು, ಕಿವಿಗಳು, ತಲೆಗಳು, ಮುಖಗಳು, ಕೈಕಾಲುಗಳು, ಮೊದಲಾಗಿ ಸಕಲ ಅವಯವಗಳೂ, ಇಂದ್ರಿಯಗಳು; ಅವೂ ಸಹ ಅವನಂತೆ ಸರ್ವತ್ರ ವ್ಯಾಪ್ತವಾದವುಗಳು. ಅವನ ಒಂದೊಂದು ಇಂದ್ರಿಯವೂ, ಇತರ ಸಕಲ ಇಂದ್ರಿಯಗಳ ಕಾರ್ಯದಲ್ಲೂ

---

೧. ಅನಾದಿಮತ್ ಪರಂ ಬ್ರಹ್ಮ ನ ಸತ್ ತನ್ನಾಸದುಚ್ಯತೇ ॥
ಸರ್ವತಃ ಪಾಣಿಪಾದಂ ತತ್ ಸರ್ವತೋಽಕ್ಷಿಶಿರೋಮುಖಮ್ ।
ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥ – ಗೀತಾ (೧೩/೧೩,೧೪)

ಪೂರ್ಣಸಮರ್ಥವಾದುದು. ಅವನು ಅಂತೆಯೇ ಅವನ ಅವಯವಗಳೂ ಸಹ. ಅವೆಲ್ಲವೂ ಅವನಂತೆಯೇ ಪರಿಪೂರ್ಣ, ಅವನು ಸರ್ವಶಕ್ತ ಹಾಗೂ ಸರ್ವವ್ಯಾಪ್ತ. ಅವನು ಅನಂತಕಲ್ಯಾಣಗುಣಗಳ ಆಗರ. ಸದಾ ಸತ್ತ್ವಾದಿಪ್ರಾಕೃತಗುಣರಹಿತ; ಅವನು ಎಲ್ಲರ ಒಳಗೂ, ಹೊರಗೂ ವ್ಯಾಪಿಸಿರುವವನು. ಸದಾ ಒಂದೇ ತೆರನಾಗಿ ಇರುವವನು. ಯಾವ ಇಂದ್ರಿಯಗಳಿಗೂ ನಿಲುಕದವನು. ಎಲ್ಲರಿಗಿಂತಲೂ ದೂರನೂ, ಎಲ್ಲರಿಗಿಂತ ಸನಿಹನೂ ಆದವನು; ಸಕಲಪ್ರಾಣಿಗಳಲ್ಲಿ ನೆಲೆಸಿದ್ದೂ ಏಕರೂಪನಾದವನು. ಅವನು ಎಲ್ಲ ಬೆಳಕುಗಳಿಗೂ ಬೆಳಕು; ತಮಸ್ಸಿಗೆ ಅತೀತನಾದವನು; ಜ್ಞಾನಸ್ವರೂಪನು; ಸ್ವಪ್ರಕಾಶನು; ಜ್ಞಾನಗೋಚರನು.[೧]

ಇಲ್ಲಿ ಬಂದಿರುವ ಭಗವತ್ತತ್ತ್ವದ ವರ್ಣನೆ ತುಂಬಾ ಅಪೂರ್ವವಾದುದು, ಸಮಗ್ರವೇದೋಪನಿಷತ್ತುಗಳಲ್ಲಿ ನಿರೂಪಿತವಾದ ಬ್ರಹ್ಮತತ್ತ್ವದ ಸ್ವರೂಪ ಇಲ್ಲಿ ಅಡಕವಾಗಿ ನಿರೂಪಿತವಾಗಿದೆ. ಭಗವಂತನನ್ನು ಹೀಗೆ ಸ್ಫುಟವಾಗಿ ತಿಳಿಸಿಕೊಡುವ ಕಾರಣದಿಂದಲೂ ಭಗವದ್ಗೀತೆಗೆ ಆ ಹೆಸರು ಸಾರ್ಥಕ.

*****

## ಪುರುಷ - ಪ್ರಕೃತಿ

ಪ್ರಕೃತಿಯೆಂದರೆ ಪಂಚಭೂತಗಳು ಮೊದಲಾದ ಇಪ್ಪತ್ತೈದು ತತ್ತ್ವಗಳಿಂದ ಕೂಡಿದ ಜಡಪ್ರಕೃತಿ. ಪುರುಷ ಎಂದರೆ ಸಕಲಜೀವರು ಹಾಗೂ ಅವರೆಲ್ಲರಿಗೂ ಒಡೆಯನಾದ ಭಗವಂತ. ಇವರೆಲ್ಲ ಅನಾದಿ ಹಾಗೂ ನಿತ್ಯ. ಇಚ್ಛೆ ಮೊದಲಾದವುಗಳು ಪ್ರಕೃತಿಯ ವಿಕಾರಗಳು. ಸತ್ತ್ವಾದಿಗುಣಗಳು ಪ್ರಕೃತಿಯ ಕಾರ್ಯಗಳು[೨].

*****

---

೧. ಸರ್ವೇಂದ್ರಿಯಗುಣಾಭಾಸಂ ಸರ್ವೇಂದ್ರಿಯವಿವರ್ಜಿತಮ್ ।
ಅಸಕ್ತಂ ಸರ್ವಭೃಚ್ಚೈವ ನಿರ್ಗುಣಂ ಗುಣಭೋಕ್ತೃ ಚ ॥
ಬಹಿರಂತಶ್ಚ ಭೂತಾನಾಮಚರಂ ಚರಮೇವ ಚ ।
ಸೂಕ್ಷ್ಮತ್ವಾತ್ ತದವಿಜ್ಞೇಯಂ ದೂರಸ್ಥಂ ಚಾಂತಿಕೇ ಚ ತತ್ ॥
ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಮ್ ।
ಭೂತಭರ್ತೃ ಚ ತಜ್ಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣು ಚ ॥
ಜ್ಯೋತಿಷಾಮಪಿ ತಜ್ಜ್ಯೋತಿಸ್ತಮಸಃ ಪರಮುಚ್ಯತೇ ।
ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿ ಸರ್ವಸ್ಯ ವಿಷ್ಠಿತಮ್ ॥
ಇತಿ ಕ್ಷೇತ್ರಂ ತಥಾ ಜ್ಞಾನಂ ಜ್ಞೇಯಂ ಚೋಕ್ತಂ ಸಮಾಸತಃ ।
ಮದ್ಭಕ್ತ ಏತದ್ವಿಜ್ಞಾಯ ಮದ್ಭಾವಾಯೋಪಪದ್ಯತೇ ॥ – ಗೀತಾ (೧೩/೧೫-೧೯)

೨. ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ ।
ವಿಕಾರಾಂಶ್ಚ ಗುಣಾಂಶ್ಚೈವ ವಿದ್ಧಿ ಪ್ರಕೃತಿಸಂಭವಾನ್ ॥ – ಗೀತಾ (೧೩/೨೦)

ಜೀವನ ದೇಹೇಂದ್ರಿಯಗಳ ಉತ್ಪತ್ತಿಯನ್ನು ಚಿತ್‌ಪ್ರಕೃತಿಯಾದ ಮಹಾಲಕ್ಷ್ಮಿಯು ಅಚಿತ್‌ಪ್ರಕೃತಿಯ ಮೂಲಕ ಮಾಡಿಸುವಳು. ದೇಹದಲ್ಲಿನ ಜೀವನಿಗೆ ಸುಖದುಃಖಾದಿಗಳ ಅನುಭವವನ್ನು ಭಗವಂತನು ತಂದುಕೊಡುವನು. ಪ್ರಕೃತಿಯಿಂದಾದ ದೇಹದಲ್ಲಿ ನೆಲೆಸಿರುವ ಜೀವನು ಪ್ರಕೃತೀಯ ಗುಣಗಳಾದ ಸುಖಾದಿಗಳನ್ನು ಅನುಭವಿಸುವನು. ತ್ರಿಗುಣಗಳ ಸಂಪರ್ಕವೇ ಜೀವನಿಗೆ ಶುಭಾಶುಭಯೋನಿಗಳಲ್ಲಿನ ಹುಟ್ಟಿಗೆ ಕಾರಣ. ಈ ದೇಹದಲ್ಲಿ (ಜೀವನೊಂದಿಗಿ) ಪರಮಚೇತನನಾದ ಭಗವಂತನು ನೆಲೆಸಿರುವನು. ಅವನು ತನ್ನ ಇಚ್ಛಾನುಸಾರವಾಗಿ ಸಕಲಜೀವರನ್ನು ಅವರ ಯೋಗ್ಯತೆಗೆ ತಕ್ಕಂತೆ ಪ್ರೇರೇಪಿಸುವನು. ಎಲ್ಲರನ್ನೂ ಪೊರೆಯುವನು; ಸರ್ವಕರ್ಮಫಲಗಳ ಸಾರಭೋಕ್ತೃವೂ, ಮಹಾಶಕ್ತಿಶಾಲಿಯೂ ಆಗಿರುವನು.[೧]

*****

## ಬ್ರಹ್ಮಜ್ಞಾನಕ್ಕೆ ಸಾಧನಗಳು

(ಶ್ರವಣಮನನಗಳಿಂದ ಕೂಡಿದ) ಕೆಲವರು ಪರಮಾತ್ಮನನ್ನು ಬುದ್ಧಿಯಿಂದ ದೇಹದಲ್ಲಿ ಕಾಣುವರು. ಮತ್ತೆ ಕೆಲವರು (ಅಪರೋಕ್ಷ)ಜ್ಞಾನದಿಂದಲೂ, ಧ್ಯಾನದಿಂದಲೂ ಪರಮಾತ್ಮನನ್ನು ಕಾಣುವರು. ಶ್ರವಣಾದಿಗಳಿಲ್ಲದ ಮತ್ತೆ ಕೆಲವರು ಕರ್ಮಯೋಗದಿಂದಲೂ (ಜ್ಞಾನಧ್ಯಾನಗಳಿಂದಲೂ) ಸಾಕ್ಷಾತ್ಕರಿಸಿಕೊಳ್ಳುವರು. ಕೆಲವು ಋಷಿಗಳು ತಮ್ಮ ಪ್ರತಿಭೆಯಿಂದ ಶ್ರವಣಾದಿಗಳಿಲ್ಲದೆ, ಹರಿಯನ್ನು ತಿಳಿದು, ಮನಸ್ಸಿನಿಂದ ಹೃದಯದಲ್ಲಿ ಅವನನ್ನು ಧ್ಯಾನದಿಂದ ಕಾಣುವರು.[೨] ನಾರದಾದಿ ಮತ್ತೆ ಕೆಲವು ಮುನಿಗಳು ಅವನನ್ನು ದೇಹದ ಹೊರಗೂ ಕಾಣುವರು. ದೇವತೆಗಳು ತಮ್ಮ ಪ್ರತಿಭಾಯೋಗದಿಂದ ಧ್ಯಾನದ ಸಹಾಯವಿಲ್ಲದೆ, ವಿಷ್ಣುಪ್ರಸಾದದಿಂದ ಲಭಿಸಿದ ಸ್ವಪ್ರತಿಭೆಯಿಂದ ವಿಷ್ಣುವನ್ನು ಒಳಗೂ ಹೊರಗೂ ಕಾಣುವರು. ಕೆಲವು ರಾಜರು ಅಶ್ವಮೇಧಾದಿ ಕರ್ಮರೂಪ ಉಪಾಯದಿಂದ ಶ್ರವಣ ಮತ್ತು ಸ್ವಪ್ರತಿಭೆಯಿಂದ ಸದಾ

---

೧. ಕಾರ್ಯಕಾರಣಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ।
ಪುರುಷಃ ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ॥
ಪುರುಷಃ ಪ್ರಕೃತಿಸ್ಥೋ ಹಿ ಭುಂಕ್ತೇ ಪ್ರಕೃತಿಜಾನ್ ಗುಣಾನ್।
ಕಾರಣಂ ಗುಣಸಂಗೋಽಸ್ಯ ಸದಸದ್ಯೋನಿಜನ್ಮಸು॥
ಉಪದ್ರಷ್ಟಾಽನುಮಂತಾ ಚ ಭರ್ತಾ ಭೋಕ್ತಾ ಮಹೇಶ್ವರಃ।
ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ ಪುರುಷಃ ಪರಃ॥
ಯ ಏವಂ ವೇತ್ತಿ ಪುರುಷಂ ಪ್ರಕೃತಿಂ ಚ ಗುಣೈಃ ಸಹ।
ಸರ್ವಥಾ ವರ್ತಮಾನೋಽಪಿ ನ ಸ ಭೂಯೋಽಭಿಜಾಯತೇ॥ – ಗೀತಾ (೧೩/೨೦-೨೪)

೨. ಧ್ಯಾನೇನಾತ್ಮನಿ ಪಶ್ಯಂತಿ ಕೇಚಿದಾತ್ಮಾನಮಾತ್ಮನಾ।
ಅನ್ಯೇ ಸಾಂಖ್ಯೇನ ಯೋಗೇನ ಕರ್ಮಯೋಗೇನ ಚಾಪರೇ॥ – ಗೀತಾ (೧೩/೨೫)

ಭಗವಂತನನ್ನು ಸ್ಮರಿಸುತ್ತಾ ಶ್ರೀಹರಿಯನ್ನು ಕಾಣುವರು. ಹೀಗೆ ಪರಮಾತ್ಮನನ್ನು ತಿಳಿಯಲಾಗದ ಮತ್ತೆ ಕೆಲವರು ಬಲ್ಲವರಿಂದ ಕೇಳಿ ತಿಳಿದು, ಉಪಾಸನೆ ಮಾಡುವರು. ಶ್ರವಣವನ್ನೇ ನೆಚ್ಚುವ ಅವರೂ ಸಹ ಮುಂದೊಮ್ಮೆ ಮೃತ್ಯುವನ್ನು ದಾಟಿಯೇ ದಾಟುವರು.

*****

ಜ್ಞಾನ, ಧ್ಯಾನ, ಕರ್ಮಯೋಗಗಳ ವಿಶಿಷ್ಟಅನುಷ್ಠಾನದಿಂದ ಪರಮಾತ್ಮನನ್ನು ತಿಳಿಯುವ ಸಾಮರ್ಥ್ಯ ಕೆಲವರದು. ಹಾಗೆ ತಿಳಿಯಲಾಗದವರು ಚಿಂತಿಸಬೇಕಿಲ್ಲ, ಅವರು ಭಗವದ್ವಿಚಾರವನ್ನು ಬಲ್ಲವರಿಂದ ಸರಿಯಾಗಿ ಸದಾ ಕೇಳುತ್ತಲೇ ಇದ್ದರೂ, ಅದು ಸದ್ಗತಿಗೆ ದಾರಿಯಾಗುವುದು. ಅಂತೂ ಜ್ಞಾನವಿಲ್ಲದೆ ಮೋಕ್ಷವಿಲ್ಲ ಎಂಬುದು ನಿಶ್ಚಿತ.[೧] ಆದರೆ ಅಂತಹ ಜ್ಞಾನಸಂಪಾದನೆಯ ದಾರಿ ಮಾತ್ರ ಎಲ್ಲರಿಗೂ ಒಂದೇ ತೆರನಾಗಿರಬೇಕಾಗಿಲ್ಲ ಎಂಬುದು ಇಲ್ಲಿಯ ಪ್ರತಿಪಾದನೆ.

*****

## ಪ್ರಕೃತಿಪುರುಷರ ಹಿರಿಮೆ

ಕ್ಷೇತ್ರಕ್ಷೇತ್ರಜ್ಞರ ಸಂಯೋಗವಿಲ್ಲದೆ, ಎಂದರೆ ಶ್ರೀಲಕ್ಷ್ಮೀನಾರಾಯಣರ ಅನುಗ್ರಹವಿಲ್ಲದೆ, ಜಡಚೇತನರೂಪವಾದ ಯಾವುದೂ ಹುಟ್ಟದು. ಎಲ್ಲರಲ್ಲೂ ಭಗವಂತನು ಒಂದೇ ತೆರನಾಗಿ ನೆಲೆಸಿರುವನು. ಅವುಗಳು ಅಳಿದರೂ, ತಾನು ಮಾತ್ರ ಅಳಿಯದೆ ಉಳಿಯುವನು. ಅವನನ್ನು ಹೀಗೆ ಅಳಿಯದವನೆಂದು ಅರಿಯುವುದೂ ಸಹ ಜ್ಞಾನಿಯ ಲಕ್ಷಣ. ಭಗವಂತನು ಎಲ್ಲಿಯೇ ಇದ್ದರೂ, ಅವನು ನಿರ್ದೋಷ ಹಾಗೂ ಗುಣಪೂರ್ಣ ಎಂದು ಅರಿತವನು ಜ್ಞಾನಶೂನ್ಯನಾಗನು; ಕೇಡಿಗೊಳಗಾಗನು; ತಪ್ಪದೆ ಸದ್ಗತಿಗೂ ತೆರಳುವನು.

*****

ಸಕಲಕರ್ಮಗಳು ಅವರವರ ಸ್ವಭಾವಕ್ಕನುಗುಣವಾಗಿ ಪ್ರಕೃತಿಯ ಮೂಲಕ ಭಗವಂತನಿಂದಲೇ ಮಾಡಿಸಲ್ಪಡುವವು; ತಾನು ಅಸ್ವತಂತ್ರ; ಭಗವಂತನಿಗೆ ಬೇರಾರೂ ನಿಯಾಮಕರಿಲ್ಲ; ಅವನು ಸರ್ವತಂತ್ರಸ್ವತಂತ್ರ ಎಂದು ತಿಳಿದವನು ನಿಜವಾದ ಜ್ಞಾನಿ; ಅವನಿಗೆ ಸದ್ಗತಿ ಖಚಿತ.

*****

---

೧. ಅನ್ಯೇ ತ್ವೇವಮಜಾನಂತಃ ಶ್ರುತ್ವಾಽನ್ಯೇಭ್ಯ ಉಪಾಸತೇ ।
ತೇಽಪಿ ಚಾತಿತರಂತ್ಯೇವ ಮೃತ್ಯುಂ ಶ್ರುತಿಪರಾಯಣಾಃ ॥ – ಗೀತಾ (೧೩/೨೬)

ಪ್ರಾಣಿಗಳು ನಾನಾತೆರ; ಅವರಲ್ಲಿ ನೆಲೆಸಿರುವ ಭಗವಂತನು ಮಾತ್ರ ಒಬ್ಬನೇ. ಅವೆಲ್ಲ ರೂಪುಗೊಂಡಿರುವುದೂ ಅವನಿಂದಲೇ ಎಂದು ಅರಿಯುವವನು ಭಗವಂತನನ್ನು ಸೇರುವನು.[೧]

*****

ಭಗವಂತನು [೨]ಅನಾದಿ, ತ್ರಿಗುಣರಹಿತ ಹಾಗೂ ನಾಶರಹಿತ. ಆದ್ದರಿಂದಲೇ ಅವನು ಎಲ್ಲಿದ್ದರೂ, ಯಾರೊಳಗಿದ್ದರೂ, ದುಃಖಾದಿದೋಷಗಳು ಅಂಟವು. ಅವನು ಎಲ್ಲ ಮಾಡಿಯೂ, ಏನೂ ಮಾಡದವನೆನ್ನಿಸುವನು. ಗಗನದಂತೆ ಅವನು ಎಲ್ಲೆಡೆ ವ್ಯಾಪಿಸಿದ್ದೂ ನಿರ್ಲಿಪ್ತನಾದವನು. ಒಬ್ಬ ಸೂರ್ಯ ಲೋಕವನ್ನೆಲ್ಲ ಬೆಳಗುವಂತೆ ಒಬ್ಬನೇ ಭಗವಂತ ಇಡೀ ವಿಶ್ವವನ್ನು ಬೆಳಗುವನು.[೩]

*****

ಕ್ಷೇತ್ರಕ್ಷೇತ್ರಜ್ಞರ ಅಂತರವನ್ನು ಜೀವಿಗಳಿಗೆ ಪ್ರಕೃತಿಬಂಧದಿಂದ ಬಿಡುಗಡೆಯ ಮಾರ್ಗವನ್ನೂ, ಜ್ಞಾನದೃಷ್ಟಿಯಿಂದ ತಿಳಿಯುವವರು ಪರಮಾತ್ಮನನ್ನು ಹೊಂದುವರು.[೪]

*****

ಕ್ಷೇತ್ರಕ್ಷೇತ್ರಜ್ಞರಲ್ಲಿ ಅಭೇದವಿರದೆ, ಭೇದವೇ ಇರುವುದು. ಜೀವಿಗಳಿಗಿರುವ ಪ್ರಕೃತಿಬಂಧದ ಪರಿಹಾರಕ್ಕೆ ಭಗವದನುಗ್ರಹವೇ ಸಾಧನ.

*****

---

೧. ಯದಾ ಭೂತಪೃಥಗ್ಭಾವಮೇಕಸ್ಥಮನುಪಶ್ಯತಿ।
ತತ ಏವ ಚ ವಿಸ್ತಾರಂ ಬ್ರಹ್ಮ ಸಂಪದ್ಯತೇ ತದಾ॥ - ಗೀತಾ (೧೩/೩೧)

೨. ಅನಾದಿತ್ವಾನ್ನಿರ್ಗುಣತ್ವಾತ್ ಪರಮಾತ್ಮಾಽಯಮವ್ಯಯಃ।
ಶರೀರಸ್ಥೋಽಪಿ ಕೌಂತೇಯ ನ ಕರೋತಿ ನ ಲಿಪ್ಯತೇ॥ - ಗೀತಾ (೧೩/೩೨)

೩. ಯಥಾ ಪ್ರಕಾಶಯತ್ಯೇಕಃ ಕೃತ್ಸ್ನಂ ಲೋಕಮಿಮಂ ರವಿಃ।
ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ॥ - ಗೀತಾ (೧೩/೩೪)

೪. ಕ್ಷೇತ್ರಕ್ಷೇತ್ರಜ್ಞಯೋರೇವಮಂತರಂ ಜ್ಞಾನಚಕ್ಷುಷಾ।
ಭೂತಪ್ರಕೃತಿಮೋಕ್ಷಂ ಚ ಯೇ ವಿದುರ್ಯಾಂತಿ ತೇ ಪರಮ್॥ - ಗೀತಾ (೧೩/೩೫)

# ಅಧ್ಯಾಯ - ೧೪

ಅವಶ್ಯ ತಿಳಿಯಬೇಕಾದ ಮತ್ತೊಂದು ಉಪಯುಕ್ತ ವಿಷಯದ ಬಗ್ಗೆ ಈ [೧]ಅಧ್ಯಾಯ ಬೆಳಕು ಚೆಲ್ಲುತ್ತದೆ. ಈ ವಿಷಯದ ಪರಿಜ್ಞಾನದಿಂದಲೇ ಮುಕ್ತಿ ಸಾಧ್ಯ. ಹಾಗೆ ಮುಕ್ತಿಗೆ ತೆರಳಿದವರಿಗೆ ಮತ್ತೆ ಹುಟ್ಟುಸಾವುಗಳ ಅಪಾಯವಿರುವುದಿಲ್ಲ ಎಂದು ಭಗವಂತನೇ ತಿಳಿಸಿರುವನು.[೨]

ಚೇತನಪ್ರಕೃತಿಯಾದ ಮಹಾಲಕ್ಷ್ಮಿ ಭಗವಂತನ ಪತ್ನಿ. ಭಗವಂತ ಅವಳ ಮೂಲಕ ಸಕಲಜೀವಿಗಳ ಉತ್ಪತ್ತಿಗೆ ಕಾರಣನಾಗುವನು. ಆದ್ದರಿಂದ ಬಗೆಬಗೆಯ ಯೋನಿಗಳಲ್ಲಿ ಹುಟ್ಟುವ ದೇಹಿಗಳಿಗೆಲ್ಲ ಮಹಾಲಕ್ಷ್ಮಿಯೇ ತಾಯಿ; ಮಹಾವಿಷ್ಣುವೇ ತಂದೆ.[೩] ಲಕ್ಷ್ಮೀನಾರಾಯಣರು ಜಗಜ್ಜನಕ, ಜಗಜ್ಜನನಿಯರು ಎಂಬುದು ಇಲ್ಲಿಯ ಮುಖ್ಯ ತತ್ತ್ವ.

*****

## ಗುಣತ್ರಯ ವಿವರ

ಸತ್ತ್ವ, ರಜಸ್ಸು ಮತ್ತು ತಮಸ್ಸು ಎಂಬ ಮೂರು ಗುಣಗಳು ಈ ಜಡಪ್ರಕೃತಿಯಿಂದ ಹುಟ್ಟಿದಂತವುಗಳು. ದೇಹದಲ್ಲಿರುವ ಸ್ವರೂಪತಃ ನಾಶವಿಲ್ಲದ ಜೀವಿಗಳನ್ನು ಇವು ಬಲವಾಗಿ ಬಿಗಿದಿರುವುವು. ಸತ್ತ್ವಾದಿಗುಣಗಳಿಗೆ ಕ್ರಮವಾಗಿ ಶ್ರೀದೇವಿ, ಭೂದೇವಿ ಮತ್ತು ದುರ್ಗಾದೇವಿಯರು ಅಭಿಮಾನಿದೇವತೆಯಾಗಿರುವರು. ಇವು ಮಹಾಲಕ್ಷ್ಮಿಯ ರೂಪಗಳು. ಶ್ರೀದೇವಿಯು ಸಾತ್ತ್ವಿಕರನ್ನೂ ಭೂದೇವಿಯು ರಾಜಸರನ್ನೂ, ದುರ್ಗಾದೇವಿಯು ತಾಮಸರನ್ನೂ ಬಂಧಿಸುವಳು.[೪]

*****

---

೧. ಸಾಧನಂ ಪ್ರಾಧಾನ್ಯೇನೋತ್ತರೈರಧ್ಯಾಯೈರ್ವಕ್ತಿ । - ಗೀ.ಭಾ.
ಕ್ಷೇತ್ರಕ್ಷೇತ್ರಜ್ಞಸಂಯೋಗಸ್ಪಷ್ಟೀಕರಣಪೂರ್ವಕಂ ತ್ರೈಗುಣ್ಯಂ ವಿವಿಚ್ಯ ದರ್ಶಯತಿ । - ಗೀ.ತಾ.

೨. ಪರಂ ಭೂಯಃ ಪ್ರವಕ್ಷ್ಯಾಮಿ ಜ್ಞಾನಾನಾಂ ಜ್ಞಾನಮುತ್ತಮಮ್ ।
ಯಜ್ಜ್ಞಾತ್ವಾ ಮುನಯಃ ಸರ್ವೇ ಪರಾಂ ಸಿದ್ಧಿಮಿತೋ ಗತಾಃ ॥
ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ।
ಸರ್ಗೇಽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ ॥ - ಗೀತಾ (೧೪/೧,೨)

೩. ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್ ।
ಸಂಭವಃ ಸರ್ವಭೂತಾನಾಂ ತತೋ ಭವತಿ ಭಾರತ ॥
ಸರ್ವಯೋನಿಷು ಕೌಂತೇಯ ಮೂರ್ತಯಃ ಸಂಭವಂತಿ ಚ ।
ತಾಸಾಂ ಬ್ರಹ್ಮ ಮಹದ್ಯೋನಿರಹಂ ಬೀಜಪ್ರದಃ ಪಿತಾ ॥ - ಗೀತಾ (೧೪/೩,೪)

೪. ಸತ್ತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಂಭವಾಃ ।
ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಮವ್ಯಯಮ್ ॥ - ಗೀತಾ (೧೪/೫)

## ಸತ್ತ್ವಾದಿತ್ರಿಗುಣಗಳ ಕಾರ್ಯ

ಇವುಗಳಲ್ಲಿ ಸತ್ತ್ವಗುಣ(ಶ್ರೀತತ್ತ್ವ)ವು ನಿರ್ಮಲವಾದುದರಿಂದ ಜ್ಞಾನಪ್ರಾಪ್ತಿಗೆ ಕಾರಣವಾಗುವುದು, (ರೋಗಾದಿ)ದೋಷಗಳನ್ನು ಪರಿಹರಿಸುವುದು. ಅದು ಸುಖದ ನಂಟನ್ನೂ ಜ್ಞಾನದ ನಂಟನ್ನೂ ಸಹ ಒದಗಿಸಿಕೊಡುವುದು.[೧]

ರಜೋಗುಣ(ಭೂ ತತ್ತ್ವ)ವು ರಂಜಿಸುವ ಸ್ವಭಾವದ್ದು. ಆಸೆ ಆಕಾಂಕ್ಷೆಗಳನ್ನು ಹುಟ್ಟಿಸುವಂತಹುದು. ಅದು ಮನುಷ್ಯನನ್ನು ಕರ್ಮದ ನಂಟಿನಿಂದ ಬಿಗಿಯುವುದು.[೨]

ತಮೋಗುಣ(ದುರ್ಗಾತತ್ತ್ವ)ವು ಅಜ್ಞಾನಕ್ಕೆ ಕಾರಣವಾಗುವಂಥಹುದು. ಸಕಲಜೀವಿ- ಗಳಿಗೂ ಮಂಕುಕವಿಸುವಂತಹುದು. ಅದು ಮರೆವು, ಆಲಸ್ಯ, ನಿದ್ರೆಗಳಿಂದ ಕಾಡುವುದು.[೩]

ಸತ್ವಗುಣ(ಶ್ರೀತತ್ತ್ವ)ವು ಸುಖದಲ್ಲಿ ಓಲಾಡಿಸುವುದು; ರಜೋಗುಣವು (ಭೂ ತತ್ತ್ವ) ಕರ್ಮದಲ್ಲಿ ತೊಡಗಿಸುವುದು; ತಮೋಗುಣ(ದುರ್ಗಾತತ್ತ್ವ)ವು ಜ್ಞಾನವನ್ನು ಮರೆಮಾಡಿ ದಾರಿತಪ್ಪಿಸಿಬಿಡುವುದು.[೪]

*****

ಸತ್ತ್ವಗುಣ ಹೆಚ್ಚಿದಾಗ, ಅದು ರಜೋಗುಣ ತಮೋಗುಣಗಳನ್ನು ಮೆಟ್ಟಿ ನಿಲ್ಲುವುದು. ರಜೋಗುಣವು ಹೆಚ್ಚಿದಾಗ, ಅದು ಸತ್ತ್ವಗುಣ ತಮೋಗುಣಗಳನ್ನೂ, ಹಾಗೆಯೇ ತಮೋಗುಣವು ಹೆಚ್ಚಿದಾಗ, ಅದು ಸತ್ತ್ವ ಮತ್ತು ರಜೋಗುಣಗಳನ್ನೂ ಮೀರಿ ನಿಲ್ಲುವವು.[೫]

ಯಾವಾಗ ಸಕಲ ಇಂದ್ರಿಯಗಳಲ್ಲಿ ಜ್ಞಾನದ ಬೆಳಕು ಮೂಡುವುದೋ, ಆಗ ಈ ದೇಹದಲ್ಲಿ ಸತ್ತ್ವಗುಣವು ಪ್ರಬಲವಾಗಿದೆ ಎಂದು ತಿಳಿಯಬೇಕು.[೬]

---

೧. ತತ್ರ ಸತ್ತ್ವಂ ನಿರ್ಮಲತ್ವಾತ್ ಪ್ರಕಾಶಕಮನಾಮಯಮ್ ।
ಸುಖಸಂಗೇನ ಬಧ್ನಾತಿ ಜ್ಞಾನಸಂಗೇನ ಚಾನಘ ॥ - ಗೀತಾ (೧೪/೬)

೨. ರಜೋ ರಾಗಾತ್ಮಕಂ ವಿದ್ಧಿ ತೃಷ್ಣಾಸಂಗಸಮುದ್ಭವಮ್ ।
ತನ್ನಿಬಧ್ನಾತಿ ಕೌಂತೇಯ ಕರ್ಮಸಂಗೇನ ದೇಹಿನಮ್ ॥ - ಗೀತಾ (೧೪/೭)

೩. ತಮಸ್ತ್ವಜ್ಞಾನಜಂ ವಿದ್ಧಿ ಮೋಹನಂ ಸರ್ವದೇಹಿನಾಮ್ ।
ಪ್ರಮಾದಾಲಸ್ಯನಿದ್ರಾಭಿಸ್ತನ್ನಿಬಧ್ನಾತಿ ಭಾರತ ॥ - ಗೀತಾ (೧೪/೮)

೪. ಸತ್ತ್ವಂ ಸುಖೇ ಸಂಜಯತಿ ರಜಃ ಕರ್ಮಣಿ ಭಾರತ ।
ಜ್ಞಾನಮಾವೃತ್ಯ ತು ತಮಃ ಪ್ರಮಾದೇ ಸಂಜಯತ್ಯುತ ॥ - ಗೀತಾ (೧೪/೯)

೫. ರಜಸ್ತಮಶ್ಚಾಭಿಭೂಯ ಸತ್ತ್ವಂ ಭವತಿ ಭಾರತ ।
ರಜಃ ಸತ್ತ್ವಂ ತಮಶ್ಚೈವ ತಮಃ ಸತ್ತ್ವಂ ರಜಸ್ತಥಾ ॥ - ಗೀತಾ (೧೪/೧೦)

೬. ಸರ್ವದ್ವಾರೇಷು ದೇಹೇಽಸ್ಮಿನ್ ಪ್ರಕಾಶ ಉಪಜಾಯತೇ ।
ಜ್ಞಾನಂ ಯದಾ ತದಾ ವಿದ್ಯಾದ್ವಿವೃದ್ಧಂ ಸತ್ತ್ವಮಿತ್ಯುತ ॥ - ಗೀತಾ (೧೪/೧೧)

ಜಿಪುಣತನ, ಸಲ್ಲದ ಚಟುವಟಿಕೆ, ಕಾಮ್ಯಕರ್ಮಗಳ ಆರಂಭ, ದುಗುಡ ಮತ್ತು ಸಲ್ಲದ ಬಯಕೆ – ಇವೆಲ್ಲ ರಜೋಗುಣವು ಬಲಿತಾಗ ಕಾಣಿಸಿಕೊಳ್ಳುವುವು. ಮಂಕು, ಕೆಲಸಗೇಡಿತನ, ಮರೆವು ಮತ್ತು ಹಾಗೆಯೇ ಅವಿವೇಕ – ಇವುಗಳೆಲ್ಲ ತಮೋಗುಣವು ಪ್ರಬಲವಾದಾಗ ತಲೆದೋರುವವು.[೧]

*****

ಸತ್ತ್ವಗುಣವು ಪ್ರಬಲವಾದಾಗ ಮೃತನಾಗುವ ಜೀವಿಯು ಉತ್ತಮತತ್ತ್ವಜ್ಞಾನಿಗಳಿಗೆ ದೊರೆಯುವ ನಿರ್ಮಲದೇಹಗಳನ್ನು ಪಡೆಯುವನು (ಸಾತ್ತ್ವಿಕಮನೆತನದಲ್ಲಿ ಜನಿಸುವನು).[೨]

ರಜೋಗುಣವು ಬಲಿತಾಗ ಸತ್ತವನು ಕಾಮ್ಯಕರ್ಮಿಗಳ ವಂಶದಲ್ಲಿ ಹುಟ್ಟುವನು. ತಮೋಗುಣದಲ್ಲಿ ಸತ್ತವನು ತಿಳಿಗೇಡಿಗಳ(ದೈತ್ಯರ) ಕುಲದಲ್ಲಿ ಹುಟ್ಟುವನು.[೩]

ಗುಣತ್ರಯಗಳ ವ್ಯಾಪಾರವನ್ನು ವಿಶ್ಲೇಷಿಸುವ ಇಲ್ಲಿಯ ಪರಿ ಅನನ್ಯವಾದುದು. ಸತ್ವ ಗುಣವು ಒಳಿತಿಗು, ತಮೋ ಗುಣವು ಕೆಡುಕಿಗು, ರಜೋ ಗುಣವು ಇವೆರಡ ಮಿಶ್ರಣಕ್ಕೂ ಕಾರಣ.

ದೇಹದ ದೃಷ್ಟಿಯಿಂದ ಬಾಲ್ಯದಲ್ಲಿ ಸತ್ವ ಗುಣವು ಪ್ರಬಲ ಅದರಿಂದಾಗಿ ಬಾಲಕರ ಚಟುವಟಿಕೆ ತೀವ್ರವಾಗಿರುವುದು. ತಾರುಣ್ಯದಲ್ಲಿ ರಜೋಗುಣದ ಪ್ರವೇಶ ಪ್ರಾರಂಭವಾಗಿ ಸಂಪಾದನೆ ಮೊದಲಾದ ಕಾರ್ಯಗಳಲ್ಲಿ ತೊಡಗಿಸುವುದು. ತಾರುಣ್ಯ ಕಳೆಯುತ್ತಿದ್ದಂತೆ ತಲೆ ಎತ್ತುವ ತಮೋ ಗುಣವು ಇಂದ್ರಿಯ ಪಾಟವವನ್ನು ಕುಗ್ಗಿಸುವುದು; ವೃದ್ಧಾಪ್ಯವು ಆವರಿಸುತ್ತಾ ದೇಹದ ಚಟುವಟಿಕೆ ಕುಂದುತ್ತಾ ಹೋಗುವುದು. ಕೊನೆಗಾಲದಲ್ಲಂತೂ ತಮೋ ಗುಣದ್ದೇ ಪ್ರಾಬಲ್ಯ. ಕೊನೆಯಂತೂ ಮರಣವೇ.

ಪ್ರತಿನಿತ್ಯದಲ್ಲೂ ಸೂರ್ಯೋದಯದ ಮುಂಚಿನ ಬ್ರಾಹ್ಮ ಮುಹೂರ್ತದಲ್ಲಿ ಸತ್ವಗುಣದ್ದು ಪ್ರಾಬಲ್ಯ ಆಗ ಚಿಂತನೆಯು ಪ್ರಖರವಾಗಿದ್ದು ಜ್ಞಾನ ಕಾರ್ಯಕ್ಕೆ ಅನುಕೂಲಿಸುವಂತಿರುವುದು. ಕ್ರಮವಾಗಿ ರಜೋಗುಣದ ಪ್ರಾಬಲ್ಯವು ಉಂಟಾಗಿ

---

೧. ಲೋಭಃ ಪ್ರವೃತ್ತಿರಾರಂಭಃ ಕರ್ಮಣಾಮಶಮಃ ಸ್ಪೃಹಾ।
ರಜಸ್ಯೇತಾನಿ ಜಾಯಂತೇ ವಿವೃದ್ಧೇ ಭರತರ್ಷಭ॥
ಅಪ್ರಕಾಶೋಽಪ್ರವೃತ್ತಿಶ್ಚ ಪ್ರಮಾದೋ ಮೋಹ ಏವ ಚ।
ತಮಸ್ಯೇತಾನಿ ಜಾಯಂತೇ ವಿವೃದ್ಧೇ ಕುರುನಂದನ॥ – ಗೀತಾ (೧೪/೧೨,೧೩)

೨. ಯದಾ ಸತ್ತ್ವೇ ಪ್ರವೃದ್ಧೇ ತು ಪ್ರಲಯಂ ಯಾತಿ ದೇಹಭೃತ್।
ತದೋತ್ತಮವಿದಾಂ ಲೋಕಾನಮಲಾನ್ ಪ್ರತಿಪದ್ಯತೇ॥ – ಗೀತಾ (೧೪/೧೪)

೩. ರಜಸಿ ಪ್ರಲಯಂ ಗತ್ವಾ ಕರ್ಮಸಂಗಿಷು ಜಾಯತೇ।
ತಥಾ ಪ್ರಲೀನಸ್ತಮಸಿ ಮೂಢಯೋನಿಷು ಜಾಯತೇ॥ – ಗೀತಾ (೧೪/೧೫)

ದೈಹಿಕ ಚಟುವಟಿಕೆ ಪ್ರಾಶಸ್ತ್ಯ ಪಡೆಯುವುದು. ದ್ರವ್ಯಸಂಪಾದನೆ, ಹಸಿವು ಮೊದಲಾದವುಗಳು ಆಗ ಕಾಣಿಸಿಕೊಳ್ಳುವುವು. ಮಧ್ಯಾಹ್ನವು ಕಳೆಯುತ್ತಿದ್ದಂತೆ ತಮೋ ಗುಣವು ಸಾಧಿಸುವಂತಾಗಿ ದೈಹಿಕ ಚಟುವಟಿಕೆ ಕುಗ್ಗುವುದು. ರಾತ್ರಿ ಕವಿಯುತ್ತಲೇ ನಿದ್ರೆಯು ಆವರಿಸುವುದು. ಹೀಗೆ ದಿನನಿತ್ಯದಲ್ಲಿ ಗುಣತ್ರಯಗಳ ವ್ಯಾಪಾರ ನಡೆಯುವುದು.

ಮನುಷ್ಯನು ಓಡಾಡುವುದು ಮೊದಲಾದ ಕಾರ್ಯಗಳು ಸತ್ವ ಗುಣದ ಫಲ. ಕೂಡುವುದು ಮೊದಲಾದವುಗಳು ರಜೋಗುಣದ ಕಾರ್ಯ, ನಿದ್ರೆ, ಆಲಸ್ಯ ಮೊದಲಾದವುಗಳು ತಮೋಗುಣದ ಕಾರ್ಯ.

ಈ ಮೂರು ಗುಣಗಳಲ್ಲಿ ಪರಸ್ಪರ ಮೇಲಾಟ ಸದಾ ನಡೆಯವುದು. ಮೇಲುಗೈ ಸಾಧಿಸಿದ ಗುಣದ ಕಾರ್ಯ ಪ್ರಕಟವಾಗುವುದು. ವ್ರತ, ಉಪವಾಸ, ಸಾತ್ವಿಕ ಆಹಾರ, ತೀರ್ಥಯಾತ್ರೆ, ಶಾಸ್ತ್ರಾಧ್ಯಯನ, ಧ್ಯಾನ, ಸಜ್ಜನರ ಸಹವಾಸ ಮೊದಲಾದವುಗಳು ಸತ್ವ ಗುಣದ ವೃದ್ಧಿಗೆ ಕಾರಣವಾಗುವ ಅಂಶಗಳು.

ಲೌಕಿಕ ಪರಿಸರ, ರಾಜಸ ಆಹಾರ, ಲೌಕಿಕ ಗ್ರಂಥಗಳ ಅಧ್ಯಯನ, ರಾಜಸರ ಒಡನಾಟ, ನಿಯಂತ್ರಣ ತಪ್ಪಿದ ಜೀವನ ಶೈಲಿ ಮೊದಲಾದವುಗಳು ರಜೋಗುಣವನ್ನು ಹೆಚ್ಚಿಸುವ ಅಂಶಗಳು.

ಕೇಡಿಗರ ಸಹವಾಸ, ತಾಮಸ ಆಹಾರ, ಅಶ್ಲೀಲ ಕೃತಿಗಳ ಅಧ್ಯಯನ, ದಾರಿ ತಪ್ಪಿದವರ ಒಡನಾಟ, ಕೆಟ್ಟ ವಿಚಾರಗಳ ಚಿಂತನೆ ಮೊದಲಾದವುಗಳು ತಮೋಗುಣದ ಹೆಚ್ಚಳಕ್ಕೆ ಕಾರಣವಾಗುವ ಅಂಶಗಳು.

ಈ ಹಿನ್ನೆಲೆಯಲ್ಲಿ ಉತ್ತಮ ಸಾಧನೆಯನ್ನು ಬಯಸುವವನು ಸದಾ ಕಾಲ ಸತ್ವ ಗುಣದ ವೃದ್ಧಿಯತ್ತ ಗಮನವಿರಿಸಿ ತನ್ನ ಜೀವನಶೈಲಿಯನ್ನು ರೂಪಿಸಿಕೊಳ್ಳುವುದು ಅತ್ಯಗತ್ಯ. ರಜೋಗುಣ, ತಮೋಗುಣಗಳಿಗೆ ಕಾರಣವಾಗುವ ಅಂಶಗಳನ್ನು ನಿಯಂತ್ರಿಸುವುದು ಸಾಧಕನ ಮುಖ್ಯ ಕರ್ತವ್ಯಗಳಲ್ಲಿ ಒಂದು. ದೇಹಕ್ಕೆ ಜೀವಸತ್ವಗಳ ಕೊರತೆಯಾದಾಗ ವೈದ್ಯನು ಹೇಳುವ ರೀತಿಯಲ್ಲಿ ಆಹಾರ, ಔಷಧಿ ಮೊದಲಾದವುಗಳಿಂದ ಅವನ್ನು ಸರಿಪಡಿಸಿಕೊಳ್ಳುವಂತೆ, ಸತ್ವ ಗುಣದ ನ್ಯೂನತೆಯನ್ನು ಸರಿದೂಗಿಸಲು ಜ್ಞಾನಿಗಳು ಹೇಳುವ ರೀತಿಯಲ್ಲಿ ಸಾತ್ವಿಕ ಜೀವನ ಶೈಲಿಯನ್ನು ಅಳವಡಿಸಿಕೊಳ್ಳುವುದು ಯಶಸ್ಸಿಗೆ ಮುಖ್ಯ ಸಾಧನ.

*****

## ತ್ರಿಗುಣಗಳ ಫಲ

ಸತ್ಕರ್ಮಗಳಿಗೆ ನಿರ್ಮಲವಾದ ಸಾತ್ತ್ವಿಕಫಲ, ರಾಜಸಕರ್ಮಗಳ ಫಲ ದುಃಖ ಬೆರೆತ ಸುಖ, ಅವಿವೇಕ, ನಿದ್ರೆ ತಾಮಸಕರ್ಮದ ಫಲ.[೧]

ಸತ್ತ್ವಗುಣದಿಂದ ವಿವೇಕ ಮೂಡುವುದು. ರಜೋಗುಣದಿಂದ (ಸ್ವರ್ಗಾದಿ) ವಿಷಯಾಸಕ್ತಿ ಹುಟ್ಟುವುದು. ತಮೋಗುಣದಿಂದ ಮರೆವು, ಅವಿವೇಕ ಹುಟ್ಟುವವು, ಮಂಕು ಸಹ ಕವಿಯುವುದು.[೨]

ಸತ್ತ್ವಗುಣ ಮೈಗೂಡಿಸಿಕೊಂಡವರು (ಜನೋಲೋಕ ಮೊದಲಾದ)ಮೇಲಿನ ದಿವ್ಯಲೋಕಗಳಿಗೆ ತೆರಳುವರು. ರಾಜಸರು (ಸ್ವರ್ಗಾದಿ)ನಡುವಿನ ಲೋಕಗಳಲ್ಲಿ ನಿಲ್ಲುವರು. ಹೀನಗುಣದ ತಾಮಸರು ತಮಸ್ಸಿಗೆ ಬೀಳುವರು.[೩]

*****

ಜೀವಿಯು ಎಲ್ಲ ವಿಕಾರಗಳಿಗೆ ಪ್ರಕೃತಿಯ ತ್ರಿಗುಣಗಳ ಹೊರತು ಬೇರೆ ಕಾರಣವಿಲ್ಲ ಎಂದು ಯಾವಾಗ ತಿಳಿಯುವನೋ, ಪರಮಾತ್ಮನನ್ನು ಗುಣಗಳಿಗೆ ಅತೀತನಾದ ಸ್ವತಂತ್ರಚೇತನನೆಂದು ಅರಿಯುವನೋ ಆವಾಗ ಭಗವಂತನಲ್ಲೇ ನೆಲೆಸುವನು.[೪]

ಪ್ರಕೃತಿಯ ಗುಣಗಳಿಗೆ ಅತೀತನಾದ ಪರಮಾತ್ಮನೇ ಎಲ್ಲದಕ್ಕೂ ಕಾರಣನು; ಅವನೇ ಗುಣಗಳಿಗಿಂತ ಮಿಗಿಲಾದವನು ಎಂದು ತಿಳಿಯುವವನೇ ನಿಜವಾದ ಮನುಷ್ಯ – ಹಾಗಲ್ಲದವನು ಪಶು.[೫]

ಶರೀರದಲ್ಲಿ ಕಾಣಿಸಿಕೊಳ್ಳುವ ಈ ಮೂರು ಗುಣಗಳನ್ನು ಮೀರಿದಾಗ ಜೀವಿಯು ಹುಟ್ಟು, ಸಾವು ಮತ್ತು ಮುಪ್ಪಿನ ದುಃಖಗಳಿಂದ ಪಾರಾಗಿ ಮುಕ್ತನಾಗುವನು.

ಹೀಗೆ, ಗುಣಗಳಿಗೆ ಅನುಗುಣವಾಗಿ ಸಾಧನೆ ಮುಂದುವರೆಯುತ್ತಿದ್ದಂತೆ ಜೀವಿಯ ಜ್ಞಾನ ವಿಕಾಸಗೊಳ್ಳುತ್ತಾ ಹೋಗುವುದು. ಕೊನೆಯ ಹಂತದಲ್ಲಿ ದೇಹದ ಅಭಿಮಾನವನ್ನು

---

೧. ಕರ್ಮಣಃ ಸುಕೃತಸ್ಯಾಹುಃ ಸಾತ್ತ್ವಿಕಂ ನಿರ್ಮಲಂ ಫಲಮ್ ।
ರಜಸಸ್ತು ಫಲಂ ದುಃಖಮಜ್ಞಾನಂ ತಮಸಃ ಫಲಮ್ ॥ – ಗೀತಾ (೧೪/೧೬)

೨. ಸತ್ತ್ವಾತ್ ಸಂಜಾಯತೇ ಜ್ಞಾನಂ ರಜಸೋ ಲೋಭ ಏವ ಚ ।
ಪ್ರಮಾದಮೋಹೌ ತಮಸೋ ಭವತೋಽಜ್ಞಾನಮೇವ ಚ ॥ – ಗೀತಾ (೧೪/೧೭)

೩. ಊರ್ಧ್ವಂ ಗಚ್ಛಂತಿ ಸತ್ತ್ವಸ್ಥಾ ಮಧ್ಯೇ ತಿಷ್ಠಂತಿ ರಾಜಸಾಃ ।
ಜಘನ್ಯಗುಣವೃತ್ತಿಸ್ಥಾ ಅಧೋ ಗಚ್ಛಂತಿ ತಾಮಸಾಃ ॥ – ಗೀತಾ (೧೪/೧೮)

೪. ನಾ(ಽ)ನ್ಯಂ ಗುಣೇಭ್ಯಃ ಕರ್ತಾರಂ ಯದಾ ದ್ರಷ್ಟಾಽನುಪಶ್ಯತಿ ।
ಗುಣೇಭ್ಯಶ್ಚ ಪರಂ ವೇತ್ತಿ ಮದ್ಭಾವಂ ಸೋಽಧಿಗಚ್ಛತಿ ॥ – ಗೀತಾ (೧೪/೧೯)

೫. ಏತೇಭ್ಯಃ ಸತ್ತ್ವಾದಿಗುಣೇಭ್ಯೋಽನ್ಯಂ ಕರ್ತಾರಮೀಶಂ ಯದಾ ಪಶ್ಯತಿ ತದೈವಾಯಂ ನಾ ಪುರುಷಃ ।
ಅನ್ಯಥಾ ಪಶುಸಮಃ । – ಗೀ.ತಾ. (೧೪/೧೯)

ಪೂರ್ಣವಾಗಿ ತೊರೆಯುವ ಕಾಲ ಒದಗುವುದು. ಆಗ ಮೂರು ಗುಣಗಳ ಪ್ರಭಾವವನ್ನು ಸಹ ಮೀರಿ ನಿಲ್ಲಲು ಸಾಧ್ಯವಾಗುವುದು. ಈ ಹಂತದಲ್ಲಿ ಕೇವಲ ಸ್ವಾಭಾವಿಕವೆನ್ನಿಸುವಂತಹ ಸಾತ್ವಿಕತೆಯು ಪ್ರಕಟವಾಗಿ ಸಾಧನೆಯ ಉತ್ತುಂಗವನ್ನು ತಲುಪಲು ಸಾಧ್ಯವಾಗುವುದು. ಪ್ರಾಕೃತ ದೇಹದಲ್ಲಿದ್ದು ಅದರ ಪ್ರಭಾವಕ್ಕೆ ಒಳಗಾಗುವ ಅಪೂರ್ವ ಹಂತ ಇದಾಗಿದೆ. ಇದನ್ನು ಮೂರು ಗುಣಗಳನ್ನು ದಾಟಿದ ಹಂತ ಎನ್ನುವರು. ಇದನ್ನು ಸಾಧಿಸಿದವು ಗುಣಾತೀತ ಎನ್ನಿಸುವನು.

*****

"ಈ ಮೂರು ಗುಣಗಳನ್ನು ದಾಟಿದವನ ಲಕ್ಷಣಗಳೇನು? ಅವನ ನಡತೆ ಎಂತಹುದು? ಈ ಮೂರು ಗುಣಗಳನ್ನು ಅವನು ದಾಟುವನಾದರೂ ಎಂತು?" ಎಂಬುದಕ್ಕೆ ಈ ಅಧ್ಯಾಯದ ಮುಂದಿನ ಭಾಗದಲ್ಲಿ ಉತ್ತರವಿದೆ.

*****

## ಗುಣಾತೀತನ ಲಕ್ಷಣಗಳು

ಗುಣಾತೀತನಾದ ಜ್ಞಾನಿಯು ಲೌಕಿಕಜ್ಞಾನವನ್ನಾಗಲಿ, ಪ್ರವೃತ್ತಿಯನ್ನಾಗಲಿ, ಅಜ್ಞಾನವನ್ನಾಗಲಿ ಅವು ಒದಗಿದಾಗ ದ್ವೇಷಿಸನು; ಒದಗದಿದ್ದಾಗ ಹಂಬಲಿಸನು. ಉದಾಸೀನನಂತೆ ನಿರ್ವಿಕಾರದಿಂದಿದ್ದು ಸತ್ತ್ವಾದಿಪ್ರಕೃತಿಯ ಗುಣಗಳಿಂದಾಗಿ ವಿಚಲಿತನಾಗನು. (ಅಸ್ವತಂತ್ರವಾದ ಆ) ಗುಣಗಳು ಪರಮಾತ್ಮನ ಇಚ್ಛೆಯಂತೆ ತಮ್ಮ ಕಾರ್ಯದಲ್ಲಿ ತೊಡಗುವುವು ಎಂದು ನೆಮ್ಮದಿಯಿಂದಿರುವವನು ಸಲ್ಲದ ಕಾರ್ಯಗಳಲ್ಲಿ ತೊಡಗನು. ಅವನು ಲೌಕಿಕಸುಖದುಃಖಗಳನ್ನು ಸಮನಾಗಿ ಕಾಣುತ್ತಾ ನೆಮ್ಮದಿಯಿಂದಿರುವನು. ಆ ವಿವೇಕಿಯ ಪಾಲಿಗೆ ಮಣ್ಣು, ಕಲ್ಲು, ಚಿನ್ನಗಳೆಲ್ಲ ಒಂದೇ; ಪ್ರಿಯಾಪ್ರಿಯಗಳೂ ಒಂದೇ; ನಿಂದೆಪ್ರಶಂಸೆಗಳೂ ಒಂದೇ. ಮಾನಾವಮಾನಗಳು ಅವನಿಗೆ ಒಂದೇ. ಶತ್ರುಪಕ್ಷ, ಮಿತ್ರಪಕ್ಷಗಳೂ ಅವನಿಗೆ ಒಂದೇ. ಸಲ್ಲದ ಯಾವ ಕಾರ್ಯದಲ್ಲೂ ಅವನು ತೊಡಗುವುದಿಲ್ಲ. 'ಗುಣಾತೀತ'ನೆಂದರೆ ಅವನೇ. ಮತ್ತು ಯಾವನು ಭಗವಂತನನ್ನು ಹೊಯ್ದಾಡದ ಭಕ್ತಿಯೋಗದಿಂದ ಆರಾಧಿಸತೊಡಗುವನೊ, ಅವನು ಈ ಗುಣಗಳನ್ನು ದಾಟಿ, ಚೇತನಪ್ರಕೃತಿ(ಮಹಾಲಕ್ಷ್ಮಿ)ಯಂತೆ ಭಗವಂತನಿಗೆ ಪ್ರಿಯನೆನಿಸುವನು. (ಚೇತನ ಪ್ರಕೃತಿಯನ್ನು ಸೇರುವನು). ಎಂದೂ ಅಳಿಯದ, ಬದಲೂ ಆಗದ ಚಿತ್ ಪ್ರಕೃತಿ(ಮಹಾಲಕ್ಷ್ಮಿ)ಗೂ ಭಗವಂತನೇ ಆಸರೆ. ಸನಾತನಧರ್ಮಕ್ಕೂ, ಕೇವಲಸುಖಸ್ವರೂಪದ ಮೋಕ್ಷಕ್ಕೂ ಸಹ ಆಸರೆ ಅವನೇ.

ಎರಡನೇ ಅಧ್ಯಾಯದ ಕೊನೆಯಲ್ಲಿ ಬಂದಿರುವ ಸ್ಥಿತಪ್ರಜ್ಞನ ಲಕ್ಷಣಗಳ ಮುಂದುವರೆದ ಭಾಗದಂತೆ ಗುಣಾತೀತನ ಲಕ್ಷಣಗಳು ಇರುವವು. ಇದರಿಂದ

ಸ್ಥಿತಪ್ರಜ್ಞನೆಂದರೆ ಗುಣಾತೀತ ಎಂದಾಗುವುದು. ಅದರಂತೆ ಹನ್ನೆರಡನೇ ಅಧ್ಯಾಯದ ಉತ್ತರಾರ್ಧದಲ್ಲಿ ಬಂದಿರುವ ಭಗವದ್ಭಕ್ತನ ಲಕ್ಷಣಗಳೂ ಸಹ ಇದೇ ತೆರನಾಗಿವೆ. ಭಗವದ್ಭಕ್ತನಾದವನೇ ನಿಜವಾದ ಸ್ಥಿತಪ್ರಜ್ಞ ಎಂಬುದು ಇದರ ನಿಜವಾದ ಅರ್ಥ.

*****

ಈ ಅಧ್ಯಾಯ ನೀಡುವ ಗುಣತ್ರಯಗಳ ವಿವರ ತುಂಬ ಅಪೂರ್ವ. ಸತ್ತ್ವಗುಣ, ರಜೋಗುಣ, ತಮೋಗುಣ ಎಂಬ ಈ ಮೂರು ಪ್ರಕೃತಿಯ ಗುಣಗಳು. ಹುಟ್ಟುವ ಸಮಸ್ತಜಡಚೇತನವು ಈ ಗುಣಗಳ ಬಂಧನಕ್ಕೆ ಒಳಪಟ್ಟವುಗಳೇ. ಗುಣ ಎಂಬುದಕ್ಕೆ ಹಗ್ಗ ಎಂಬ ಅರ್ಥವೂ ಇದೆ. ಈ ತ್ರಿಗುಣಗಳ ಬಂಧನ ಮೂರುಹಗ್ಗಗಳ ಬಂಧನದಂತೆ ಬಲವಾದ ಬಂಧನ; ಮುಪ್ಪುರಿಯ ಬಂಧನ.

*****

## ಬ್ರಹ್ಮ ನಿರ್ಗುಣನೇ

ಈ ಮೂರು ಗುಣಗಳಿಗೂ ಕ್ರಮವಾಗಿ ಮಹಾಲಕ್ಷ್ಮಿಯ ಶ್ರೀ, ಭೂ, ದುರ್ಗಾ ಅಭಿಮಾನಿರೂಪಗಳು. ಅವಳೇ ಅಭಿಮಾನಿಯಾದ್ದರಿಂದ ಈ ಗುಣಗಳ ಬಂಧನ ಮಹಾಲಕ್ಷ್ಮಿಗೆ ಎಷ್ಟು ಮಾತ್ರಕ್ಕೂ ಇರುವುದಿಲ್ಲ. ಅವಳ ಪತಿಯಾದ ನಾರಾಯಣನಿಗಂತೂ ಅವುಗಳ ಪ್ರಸಕ್ತಿಯೆ ಇಲ್ಲ. ಅದಕ್ಕೆ ಅವರಿಬ್ಬರೂ ಅಗುಣರು, ತ್ರಿಗುಣವರ್ಜಿತರು. ಅವರಿಗೆ ಇಲ್ಲದಿರುವ ಗುಣಗಳೆಂದರೆ ಈ ಮೂರು. ಆದ್ದರಿಂದಲೇ ಅವರು ನಿರ್ಗುಣರು. ಈ ವಿವೇಚನೆ ಬ್ರಹ್ಮನ ನಿರ್ಗುಣತ್ವ, ಸಗುಣತ್ವದ ಗೊಂದಲವನ್ನು ಪರಿಹರಿಸುವ ಅಪೂರ್ವ ವಿಷಯ. ಬ್ರಹ್ಮನು ಸಗುಣ; ಜ್ಞಾನಾನಂದಾದಿ ಅನಂತಾನಂತಕಲ್ಯಾಣಗುಣಪೂರ್ಣನಾದ್ದರಿಂದ. ಅವನು ನಿರ್ಗುಣ; ಪ್ರಕೃತಿಯ ಈ ಮೂರು ಗುಣಗಳ ಬಂಧನ ಎಂದೂ ಇಲ್ಲದವನಾದ್ದರಿಂದ. ಮಹಾಭಾರತದ ಮೊದಲ ಶ್ಲೋಕದಲ್ಲಿ[೧] ನಾರಾಯಣನನ್ನು 'ತ್ರೈಗುಣ್ಯವರ್ಜಿತಂ' ಎಂಬುದಾಗಿ ಕರೆದಿರುವ ಔಚಿತ್ಯ ಇದರಿಂದ ಸ್ಫುಟಪಡುವುದು.

ಹೀಗೆ ಈ ಅಧ್ಯಾಯದ ವಿವರ ಬಹುಮುಖ್ಯವಾದ ತಾತ್ತ್ವಿಕಸಮಸ್ಯೆಯನ್ನು ಅತ್ಯಂತಸಮರ್ಥರೀತಿಯಲ್ಲಿ ಬಗೆಹರಿಸಿದೆ. ಶ್ರೀಮಧ್ವರು ಇದನ್ನು ತಮ್ಮ ಗ್ರಂಥಗಳಲ್ಲೆಲ್ಲ ವಿಶೇಷರೀತಿಯಲ್ಲಿ ಪ್ರತಿಪಾದಿಸಿರುವರು.

*****

---

೧. ನಾರಾಯಣಂ ಸುರಗುರುಂ ಜಗದೇಕನಾಥಂ ಭಕ್ತಪ್ರಿಯಂ ಸಕಲಲೋಕನಮಸ್ಕೃತಂ ಚ।
ತ್ರೈಗುಣ್ಯವರ್ಜಿತಮಜಂ ವಿಭುಮಾದ್ಯಮೀಶಂ ವಂದೇ ಭವಘ್ನಮಮರಾಸುರಸಿದ್ಧವಂದ್ಯಮ್ ॥

## ಗುಣತ್ರಯಗಳ ಬಂಧನದ ಬಗೆ

ಇಲ್ಲಿ ಮತ್ತೊಂದು ವಿಶೇಷವೂ ಉಂಟು. ಎಲ್ಲ ಜೀವರಿಗೂ ತ್ರಿಗುಣದ ಬಂಧನವಿದ್ದರೂ, ಆ ಬಂಧನದ ಪರಿಯಲ್ಲಿ ವ್ಯತ್ಯಾಸವಿದೆ. ಸಾತ್ತ್ವಿಕರಿಗೆ ಸತ್ತ್ವಗುಣಪ್ರಧಾನವಾದ ಬಂಧನ; ರಾಜಸರಿಗೆ ರಜೋಗುಣಪ್ರಧಾನವಾದ ಬಂಧನ; ತಾಮಸರಿಗೆ ತಮೋಗುಣಪ್ರಧಾನವಾದ ಬಂಧನ. ಆದ್ದರಿಂದ ಆಯಾ ಚೇತನರು ಅವರವರ ಹಾದಿಯಲ್ಲೇ ಸಾಗಲು ಇದು ಪೂರಕವಾಗುತ್ತದೆ. ಕಾರಣವಶಾತ್ ಆಗೊಮ್ಮೆ ಈಗೊಮ್ಮೆ ಇದರಲ್ಲಿ ವ್ಯತ್ಯಾಸ ಕಂಡರೂ, ಪ್ರಧಾನವಾಗಿ ಈ ನಿಯಮ ಹಾಗೆಯೇ ನಡೆಯುವುದು.

*****

ಸಾತ್ತ್ವಿಕರಲ್ಲೂ ಬಂಧನ ಏಕರೀತಿಯದಲ್ಲ. ಜೀವರ ಯೋಗ್ಯತೆ ಹೆಚ್ಚಿದಂತೆಲ್ಲ ಸತ್ತ್ವದ ಪ್ರಮಾಣ ಅವರ ದೇಹದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಇರುವುದು. ದೇವತೆಗಳು, ಋಷಿಗಳು, ಪಿತೃಗಳು, ಚಕ್ರವರ್ತಿಗಳು ಮತ್ತು ಮನುಷ್ಯೋತ್ತಮರು ಎಂಬ ಐದು ವಿಧ ಮುಕ್ತಿಯೋಗ್ಯರಲ್ಲಿ ದೇವತೆಗಳಲ್ಲಿ ಸಹಜವಾಗಿಯೇ ಸತ್ತ್ವಗುಣದ ಅಂಶ ವಿಶೇಷವಾಗಿ-ರುತ್ತದೆ. ಅದರಲ್ಲೂ ಗರುಡಶೇಷರುದ್ರಾದಿ ಉತ್ತಮದೇವತೆಗಳಲ್ಲಿ ಅದರ ಪ್ರಮಾಣ ಇನ್ನೂ ಹೆಚ್ಚು. ಋಜುಗಳ ದೇಹದಲ್ಲಂತೂ ಸತ್ತ್ವಗುಣದ ಪ್ರಮಾಣ ಅತ್ಯಧಿಕ. ಬ್ರಹ್ಮದೇವರ ದೇಹವಂತು ಕೇವಲಸತ್ತ್ವಗುಣಪೂರ್ಣ. ಆದ್ದರಿಂದ ಋಜುಗಳಿಗೆ ತ್ರಿಗುಣಮಯ ದೇಹವಿದ್ದರೂ, ಅವರಿಗೆ ಅವುಗಳ ಬಂಧನ ಎಷ್ಟುಮಾತ್ರಕ್ಕೂ ಇರದು ಎಂಬುದು ಒಂದು ಪ್ರಮೇಯವಿಶೇಷ.

*****

ಸತ್ತ್ವಗುಣ ಹೆಚ್ಚಿದಂತೆ ಜ್ಞಾನ, ಬಲ, ಆಯುಷ್ಯ, ಆರೋಗ್ಯ ಮೊದಲಾದ ಸಕಲಸದ್ಗುಣಗಳು ಹೆಚ್ಚು ಹೆಚ್ಚಾಗಿ ಪ್ರಕಟವಾಗುವವು. ರಜೋಗುಣ, ತಮೋಗುಣಗಳ ಹೆಚ್ಚಳದೊಂದಿಗೆ ಅವುಗಳಿಗೆ ಸಂಬಂಧಿಸಿದ ಗುಣಧರ್ಮಗಳು ಸಹ. ಆದ್ದರಿಂದಲೇ ಉತ್ತಮರ ಜ್ಞಾನಬಲಾದಿಗಳು ವಿಶಿಷ್ಟವಾಗಿರಲು ಸಾಧ್ಯ. ಈ ರೀತಿಯಾದ ಗುಣದ ಪ್ರಭಾವ ಯುಗಕ್ರಮಕ್ಕೂ ಅನ್ವಯಿಸುವಂತಹುದು. ಕೃತಯುಗದಲ್ಲಿ ಸತ್ತ್ವದ ಪ್ರಮಾಣ ಸಕಲಪದಾರ್ಥಗಳಲ್ಲೂ ಮಿಗಿಲು; ತ್ರೇತಾಯುಗದಲ್ಲಿ ಅದು ಕಿಂಚಿನ್ನ್ಯೂನ; ದ್ವಾಪರದಲ್ಲಿ ಮತ್ತೂ ಕಡಿಮೆ; ಕಲಿಯುಗದಲ್ಲಿ ತೀರ ಕಡಿಮೆ. ಅದರೊಂದಿಗೆ ಇತರ ಗುಣಗಳ ಹೆಚ್ಚಳವೂ ಸಹ ಯೋಗ್ಯತೆ ಅನುಗುಣವಾಗಿಯೇ ಇರುವುದು

*****

ದೈನಂದಿನಜೀವನದಲ್ಲೂ ಈ ಗುಣಗಳ ಪ್ರಭಾವ ಬದಲಾಗುವಂತಹುದು. ಪ್ರಾತಃ ಕಾಲದಲ್ಲಿ ಸತ್ತ್ವಗುಣದ ಸಂಬಂಧ ಹೆಚ್ಚು. ಅದಕ್ಕೆಂದೇ ಆಗ ಜ್ಞಾನಬಲಾದಿಗಳು

ಮಿಗಿಲು; ಹಸಿವು, ನಿದ್ರೆಗಳು ಕಡಿಮೆ. ಮಧ್ಯಾಹ್ನ ಬರುತ್ತಿರುವಂತೆಯೇ ರಜೋಗುಣದ ಪ್ರಾಬಲ್ಯ ತಲೆಹಾಕತೊಡಗುವುದು. ಆಗ ಜ್ಞಾನಕ್ಕಿಂತ ಕರ್ಮದಲ್ಲಿ ಪ್ರವೃತ್ತಿ ಹೆಚ್ಚು. ಸೂರ್ಯ ಮುಳುಗತೊಡಗುವ ವೇಳೆಗೆ ತಮೋಗುಣ ವಿಜೃಂಭಿಸತೊಡಗುವುದು. ಆಯಾಸ, ನಿದ್ರೆಗಳು ತಲೆದೋರುವವು. ರಾತ್ರಿಯಲ್ಲಿ ತಮೋಗುಣದ ಅತಿರೇಕ. ಆಗಂತೂ ನಿದ್ರೆಗೇ ಪ್ರಾಧಾನ್ಯ.

*****

ವಯೋಮಾನದಲ್ಲೂ ಈ ಗುಣಗಳ ಪ್ರಭಾವವನ್ನು ಗುರುತಿಸಬಹುದು. ಬಾಲ್ಯದಲ್ಲಿ ಸತ್ತ್ವಗುಣದ ಪ್ರಮಾಣ ಹೆಚ್ಚು. ಅದಕ್ಕೆಂದೇ ಬಾಲಕರಲ್ಲಿ ವಿಶೇಷಲವಲವಿಕೆ, ತಿಳಿಯುವ ಕಾತರ, ನೆನಪಿನ ಶಕ್ತಿ, ಹಾರುವ, ಓಡುವ ಸಾಮರ್ಥ್ಯ ತುಂಬಿರುತ್ತದೆ. ಅದಕ್ಕೆಂದೇ 'ಕೌಮಾರ ಆಚರೇತ್ ಪ್ರಾಜ್ಞಃ ಧರ್ಮಃ ಭಾಗವತಾನಿಹ' (ಭಗವತ್ಪ್ರೀತಿಕರವಾದ ಧರ್ಮಗಳನ್ನು ಜಾಣನು ಚಿಕ್ಕಂದಿನಲ್ಲೇ ಆಚರಿಸತೊಡಗಬೇಕು) ಎಂದು ಭಾಗವತದ ಸಂದೇಶ. ಇಪ್ಪತ್ತೈದರ ವೇಳೆಗೆ ರಜೋಗುಣ ಪ್ರಬಲಗೊಳ್ಳುತ್ತದೆ. ಆಗ ತಿಳಿಯುವ ಕಾತರಕ್ಕಿಂತ ಉದ್ಯೋಗ ಮಾಡುವ, ಸಂಸಾರಕ್ಕಿಳಿಯುವ ಮನೋಭಾವ ಮೂಡುವುದು. ಅರವತ್ತರ ವೇಳೆಗೆ ನಿಧಾನವಾಗಿ ತಮೋಗುಣ ವಿಜೃಂಭಿಸತೊಡಗುವುದು. ದೇಹದಲ್ಲಿ ಶಕ್ತಿ ಉಡುಗಿ, ಮನಸ್ಸಿನಲ್ಲೂ ಉತ್ಸಾಹ ಕುಗ್ಗಿ ಜೀವ ನಲುಗತೊಡಗುವನು. ಕ್ರಮೇಣ ಇಂದ್ರಿಯಗಳು ಶಿಥಿಲಗೊಂಡು ಓಡಾಟವೂ ದುಃಸಾಧ್ಯವಾಗುವುದು; ರೋಗರುಜಿನಗಳು ಕಾಡತೊಡಗುವವು. ತೀರ ಕೊನೆಗಾಲದಲ್ಲಿ ಹಾಸಿಗೆಗೆ ಅಂಟುವುದೊಂದೇ ಸಾಧ್ಯ. ಮೃತ್ಯುವೇ ಅದರ ಕೊನೆ.

ಗುಣಗಳ ಪ್ರಭಾವವನ್ನು ಹೀಗೆ ಅರಿತ ಮೇಲೆ, ಅವುಗಳನ್ನು ನಿಯಂತ್ರಿಸುವಲ್ಲಿ ಜಾಣ್ಮೆ ತೋರಿಸುವುದು ವಿವೇಕ. ಬಾಲ್ಯಾದಿವಯೋಮಾನವನ್ನು ಪ್ರಾತಃ ಕಾಲಾದಿಕಾಲಮಾನವನ್ನು ಸದುಪಯೋಗಪಡಿಸಿಕೊಂಡು ಜ್ಞಾನವೃದ್ಧಿ ಮಾಡಿಕೊಳ್ಳುವುದು ಒಂದು ಬಗೆ. ಅಥವಾ ಸತ್ತ್ವಗುಣ ಪ್ರಧಾನವಾದ ಆಹಾರ, ವಿಹಾರಗಳನ್ನು ರೂಢಿಸಿಕೊಂಡು ಜೀವನಪೂರ್ತಿ ಜ್ಞಾನಕಾರ್ಯದ ಸಾಧ್ಯತೆಗಳನ್ನು ವಿಸ್ತರಿಸಿಕೊಳ್ಳುವುದು ಮತ್ತೊಂದು ಬಗೆ. ಸತ್ತ್ವಗುಣಸಂಪನ್ನರಾದ ಜ್ಞಾನಿಗಳ ಒಡನಾಟ, ಸದ್ವಿಚಾರಪೂರಿತಗ್ರಂಥಗಳ ಅಧ್ಯಯನ, ಅಧ್ಯಾಪನ, ತೀರ್ಥಕ್ಷೇತ್ರಗಳ ಅಲೆದಾಟ ಇವೆಲ್ಲ ಸತ್ತ್ವಗುಣದ ಸಂಪರ್ಕವನ್ನು ಹೆಚ್ಚಿಸುವ ಪ್ರಮುಖ ಸಾಧನಗಳು. ''ಸಂಗವಾಗಲಿ ಸಾಧು ಸಂಗವಾಗಲಿ'' ಎಂದು ಜ್ಞಾನಿಗಳು ನುಡಿದಿರುವುದು ಇದಕ್ಕೇ.

ಚಾತುರ್ಮಾಸ್ಯವ್ರತ, ಏಕಾದಶೀ ಉಪವಾಸ ಮೊದಲಾದವುಗಳಲ್ಲಿ ದೀಕ್ಷೆ, ಸತ್ಯಧರ್ಮಗಳ ಅನುಷ್ಠಾನಗಳು ಸಹ ಸತ್ತ್ವಗುಣವನ್ನು ಉದ್ದೀಪನಗೊಳಿಸುವ ಸಾಧನಗಳು.

*****

# ಅಧ್ಯಾಯ - ೧೫

## ಜಗದ್ವೃಕ್ಷ

ಜಗತ್ತನ್ನು ಅಶ್ವತ್ಥವೃಕ್ಷವೆಂದು ಬಣ್ಣಿಸುತ್ತಾ, ಅದಕ್ಕೆ ಆಧಾರನಾದ ಭಗವಂತನ ಹಿರಿಮೆಯನ್ನು ಸಾರುವ ವಿಶಿಷ್ಟ ಅಧ್ಯಾಯ[೧] ಹದಿನೈದನೆಯದು. ಪ್ರತಿನಿತ್ಯ ಭೋಜನಪೂರ್ವದಲ್ಲಿ ಪಠಿಸಲೇಬೇಕಾದ ಮಂತ್ರವಾಗಿ ಸಹ ಇದು ಆಸ್ತಿಕರ ಸಾಧನೆಯಲ್ಲಿ ವಿಹಿತವಾಗಿದೆ.

ಈ ಜಗತ್ತು ಬುಡ(ಭಗವಂತ, ಚಿತ್‌ಪ್ರಕೃತಿ ಹಾಗೂ ಜಡಪ್ರಕೃತಿ) ಮೇಲಿದ್ದು ರೆಂಬೆಗಳು(ವಿಷ್ಣುವಿಗಿಂತ ಕೆಳಗಿನವರಾದ ಬ್ರಹ್ಮಾದಿದೇವತಾವೃಂದ) ಕೆಳಗಿರುವ ಒಂದು ಅಳಿವಿರದ ಅಶ್ವತ್ಥ(ಅಶ್ವದಂತೆ ಚಂಚಲವಾದ; ನಾಳೆ ಇಂದಿನಂತಿರದೆ ಸದಾ ಬದಲಾಗುವ)ವೃಕ್ಷ. ವೇದವಾಕ್ಯಗಳು ಇದರ ಎಲೆಗಳು. ಇದನ್ನು ಹೀಗೆ ಅರಿತವನು ವೇದ ಬಲ್ಲವನು[೨].

ತ್ರಿಗುಣಗಳಿಂದಾಗಿ ಬಲಿತಿರುವ ಇದರ ಶಾಖೆಗಳು ಕೆಳಗೂ, ಮೇಲೂ ಹಬ್ಬಿನಿಂತಿವೆ. ಶಬ್ದಾದಿ ಇಂದ್ರಿಯವಿಷಯಗಳೇ ಇದರ ಚಿಗುರುಗಳು. ಇದರ ಬುಡಗಳು (ವಿಷ್ಣು-ರೂಪಗಳು, ಚಿದಚಿತ್‌ಪ್ರಕೃತಿಗಳು ಮತ್ತು ಸತ್ತ್ವಾದಿತ್ರಿಗುಣಗಳು) ಮನುಷ್ಯಲೋಕದಲ್ಲಿ ಕರ್ಮಕ್ಕೆ ತಕ್ಕಂತೆ (ಫಲ ನೀಡುವುದರಿಂದಾಗಿ) ಕೆಳಗೂ ಎಲ್ಲೆಡೆ ತುಂಬಿವೆ.[೩]

ಇದರ ರೂಪವು ಸಮಗ್ರವಾಗಿ ಎಂದೂ ಕಾಣದು. ಇದರ ಕೊನೆ ಕಾಣದು; ಮೊದಲೂ ಕಾಣದು; ನೆಲೆಯೂ ಗೋಚರಿಸದು(ಇದರ ಸೃಷ್ಟಿಸ್ಥಿತಿಲಯಗಳಿಗೆ ಕಾರಣನಾದ ಭಗವಂತ ಅಗೋಚರ ಎಂದರ್ಥ). ಆಳವಾಗಿ ಬೇರೂರಿರುವ ಈ ಅಶ್ವತ್ಥವನ್ನು ಬಲವಾದ ಅಸಂಗ(ವಿರಕ್ತಿ, ವಿಷ್ಣುಭಕ್ತಿ)ವೆಂಬ ಶಸ್ತ್ರದಿಂದ ವಿವೇಚಿಸಬೇಕು.[೪]

*****

---

೧. ಸಂಸಾರಸ್ವರೂಪತದತ್ಯಯೋಪಾಯವಿಜ್ಞಾನಾನ್ಯಸ್ಮಿನ್ನಧ್ಯಾಯೇ ದರ್ಶಯತಿ। – ಗೀ. ಭಾ.
ತ್ರಯೋದಶೋಕ್ತಂ ವಿವಿಚ್ಯ ದರ್ಶಯತಿ। – ಗೀ. ತಾ.

೨. ಊರ್ಧ್ವಮೂಲಮಧಃಶಾಖಮಶ್ವತ್ಥಂ ಪ್ರಾಹುರವ್ಯಯಮ್।
ಛಂದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸ ವೇದವಿತ್ ॥ – ಗೀತಾ (೧೫/೧)

೩. ಅಧಶ್ಚೋರ್ಧ್ವಂ ಪ್ರಸೃತಾಸ್ತಸ್ಯ ಶಾಖಾ ಗುಣಪ್ರವೃದ್ಧಾ ವಿಷಯಪ್ರವಾಲಾಃ।
ಅಧಶ್ಚ ಮೂಲಾನ್ಯನುಸಂತತಾನಿ ಕರ್ಮಾನುಬಂಧೀನಿ ಮನುಷ್ಯಲೋಕೇ॥ – ಗೀತಾ (೧೫/೨)

೪. ನ ರೂಪಮಸ್ಯೇಹ ತಥೋಪಲಭ್ಯತೇ ನಾಂತೋ ನ ಚಾದಿರ್ನ ಚ ಸಂಪ್ರತಿಷ್ಠಾ।
ಅಶ್ವತ್ಥಮೇನಂ ಸುವಿರೂಢಮೂಲಮಸಂಗಶಸ್ತ್ರೇಣ ದೃಢೇನ ಛಿತ್ವಾ॥ – ಗೀತಾ (೧೫/೩)

## ಜಗತ್ತು ಅಶ್ವತ್ಥವೇಕೆ?

ಇಷ್ಟು ವಿವೇಚನೆಯಿಂದ ತಿಳಿಯುವಂತೆ ಜಗತ್ತು ಅಶ್ವತ್ಥವೃಕ್ಷ. ಅಶ್ವತ್ಥ ಎಂದರೆ ಅಶ್ವದಂತೆ ಚಂಚಲವಾಗಿ ಇರುವಂತಹುದು ಎಂದರ್ಥ. ಅಶ್ವದ ರೀತಿನೀತಿಗಳನ್ನು ಬಲ್ಲವರಿಗೆ ಇದು ಅರ್ಥವಾಗುವ ವಿಷಯ. ಅಶ್ವವೆಂದೂ ಸದಾ ಧಾವಿಸಲು ಸಿದ್ಧವಾಗಿರುವಂತೆಯೇ ಇರುತ್ತದೆ. ಜಗತ್ತು ಈ ತೆರನಾದುದು. ಸದಾ ಮುನ್ನುಗ್ಗುವಂತಹುದು. ಇದಕ್ಕೆ ತಡೆ ಯೆಂಬುದೇ ಇಲ್ಲ, ಅದಕ್ಕೆಂದೇ ಈ ಜಗತ್ತು ಅಶ್ವತ್ಥ. ಭಗವಂತ ಹಾಗಲ್ಲ; ಅವನೆಂದೂ ಸ್ಥಿರವಾದವನು. ಚಂಚಲವಾದ ಈ ಜಗತ್ತಿನ ಚಿಂತೆಯನ್ನು ಕಡಿಮೆ ಮಾಡಿ, ಸದಾ ಸ್ಥಿರನಾದ ಭಗವಂತನ ಚಿಂತನೆಯನ್ನು ಮಾಡುತ್ತಾ ಜೀವನ ಸಾರ್ಥಕಮಾಡಿಕೊಳ್ಳಬೇಕು ಎಂದು ಇದರ ಭಾವ.

ಅಶ್ವತ್ಥ ಎಂಬುದಕ್ಕೆ ಮತ್ತೊಂದು ಅರ್ಥ – 'ಶ್ವ' ಎಂದರೆ ನಾಳೆ; 'ತ್ಥ' ಎಂದರೆ ಇಂದಿನಂತೆಯೇ ಇರುವಂತಹುದು; ಎಂದರೆ ಎಂದೂ ಬದಲಾಗದಂತಹದ್ದು. ಆದರೆ ಜಗತ್ತು ಅಶ್ವತ್ಥ. ಎಂದರೆ ಎಂದೂ ಇದು ಇಂದಿರುವಂತೆ ಇರುವಂತಹುದಲ್ಲ; ಸದಾ ಬದಲಾಗುತ್ತಲೇ ಇರುವಂತಹುದು. ಜಗತ್ತನ್ನು ಗಮನಿಸುವ ಜನರಿಗೆಲ್ಲ ಇದು ಸ್ಪಷ್ಟ

ಭಗವಂತ ಎಂದೂ ಬದಲಾಗದವನು. ಬದಲಾಗುವ ಜಗತ್ತು ತಾತ್ಕಾಲಿಕ ವಿಳಾಸದಂತೆ; ಬದಲಾಗದ ಭಗವಂತ ಶಾಶ್ವತವಿಳಾಸದಂತೆ. ಜಗತ್ತನ್ನು ಎಷ್ಟು ಅರಿತರೂ, ಅದು ಸದಾ ಬದಲಾಗುವುದರಿಂದ ಅದು ಖಚಿತವಾಗದೆ, ಗುರಿ ಮುಟ್ಟುವುದು ಅಸಾಧ್ಯ. ಭಗವಂತನ ವಿಚಾರ ಹಾಗಲ್ಲ, ಅವನು ಸದಾ ಒಂದೇ ರೀತಿ ಇರುವವನಾದ್ದರಿಂದ ಅವನ ಬಗ್ಗೆ ತಿಳಿಯುವುದು ಸಾರ್ಥಕ. ಅದರಿಂದ ಗುರಿ ಮುಟ್ಟುವುದೂ ನಿಶ್ಚಿತ.

*****

ಎಲ್ಲವನ್ನೂ ಭಗವಂತನಿಗೆ ಅರ್ಪಿಸುವುದರ ಹಿನ್ನೆಲೆಯೂ ಇದೇ. ದೂರಪ್ರಯಾಣ ಮಾಡುವವನು ತನ್ನ ಸಾಮಾನುಗಳ ರಕ್ಷಣೆಯನ್ನು ಎಲ್ಲೋ ಇಳಿಯುವ ಸಹಪ್ರಯಾಣಿಕನಿಗೆ ಒಪ್ಪಿಸದೆ, ತನ್ನೊಂದಿಗೆ ದೂರ ಪ್ರಯಾಣಿಸುವ ಸಹಪ್ರಯಾಣಿಕನಿಗೆ ಒಪ್ಪಿಸುವುದು ಸ್ವಭಾವ. ಅಲ್ಲಿಯ ತತ್ತ್ವವೂ ಇದೇ. ಬೇರಾರಿಗೆ ಒಪ್ಪಿಸಿದರೂ, ಅವರೇ ಬದಲಾಗುವುದರಿಂದ ಅದು ಸುಭದ್ರವಾಗಲಾರದು. ಭಗವಂತ ಸದಾ ಒಂದೇ ತೆರದವನಾದ್ದರಿಂದ ಅವನಿಗೆ ಅರ್ಪಿಸುವುದು ನಮಗೆ ಸದಾ ಲಭ್ಯ ಹಾಗೂ ಸುರಕ್ಷಿತ.

*****

## ಛೇದನವೆಂದರೆ ವಿಮರ್ಶೆ

ವೃಕ್ಷವನ್ನು ಛೇದಿಸಿದಾಗ ಅದರೊಳಗಿನ ಕಾಂಡ ಗೋಚರಿಸುವಂತೆ, ಜಗತ್ತನ್ನು ಛೇದಿ-ಸಿದಾಗ ಅದರೊಳಗಿನ ಭಗವಂತ ಗೋಚರಿಸುವನು. ಈ ವೃಕ್ಷದಚ್ಛೇದನ ಅಷ್ಟು

ಸುಲಭವಾದುದಲ್ಲ. ಇದರ ಬುಡ ಅತ್ಯಂತ ದೃಢವಾದದ್ದು. ಅದಕ್ಕೆಂದೇ ಇದರ ಛೇದನಕ್ಕೆ ಉಪಯೋಗಿಸಬೇಕಾದ ಶಸ್ತ್ರವೂ ತುಂಬಾ ದೃಢವೇ ಆಗಿರಬೇಕು. ಅಂತಹ ಸುದೃಢಶಸ್ತ್ರ-ವೆಂದರೆ ಅಸಂಗವೇ. ಅಸಂಗವೆಂದರೆ ವಿಷಯಸಂಗವಿಲ್ಲದಿರುವಿಕೆ, ಎಂದರೆ ವಿರಕ್ತಿ ಎಂದರ್ಥ. 'ಅ' ಎಂದರೆ ವಿಷ್ಣು ಅವನಲ್ಲಿ ವಿಶೇಷ ಸಂಗ, ಎಂದರೆ ಭಕ್ತಿ ಎಂದರ್ಥ. ವಿರಕ್ತಿ, ಭಕ್ತಿಗಳೇ ನಿಜವಾದ ಸುದೃಢಶಸ್ತ್ರಗಳು ಎಂದು ಭಾವ.[೧]

*****

ಇಲ್ಲಿಯ ಛೇದನಕಾರ್ಯವು ವಿಶಿಷ್ಟವಾದುದು. ಜನ ತಿಳಿದಂತೆ ಇದಕ್ಕೆ ಕತ್ತರಿಸುವುದು ಎಂದರ್ಥವಲ್ಲ; ವಿವೇಚಿಸುವುದು ಎಂದರ್ಥ; ಸಮಸ್ಯೆಯನ್ನು ಬಿಡಿಸುವುದು ಎಂಬಲ್ಲಿ ಹೇಗೋ, ಹಾಗೆ. ಜಗದ್ವೃಕ್ಷವನ್ನು ಛೇದಿಸುವುದು ಎಂದರೆ ಅದರ ಹಿನ್ನೆಲೆಯ ಬುಡ, ರೆಂಬೆ ಮೊದಲಾದವುಗಳನ್ನು ವಿವೇಚಿಸಿ, ತಿಳಿಯುವುದು ಎಂದರ್ಥ. ಹಾಗೆ ಮಾಡಿದಾಗ ಜಗದಾಧಾರನಾದ ಭಗವಂತನು, ಅವನನ್ನು ಆಧರಿಸಿದ ಬ್ರಹ್ಮಾದಿದೇವತೆಗಳು ಅನುಗ್ರಹಿಸಿ, ಉದ್ಧರಿಸುವರು ಎಂದು ಇಲ್ಲಿಯ ಭಾವ.

*****

ಹೀಗೆ ವಿವೇಚಿಸಿಯಾದ ಮೇಲೆ ಅಂತಹ ಭಗವಂತನ ಸ್ವರೂಪವನ್ನು ಆಳವಾಗಿ ಅರಿಯತೊಡಗಬೇಕು. ಇವೆಲ್ಲ ನಶ್ವರವೆಂದಾದ ಮೇಲೆ ಶಾಶ್ವತವಾದ ಪ್ರಪಂಚ ಯಾವುದು ಎಂದು ವಿವೇಚಿಸಿ ತಿಳಿಯಬೇಕು. ಅದು ಭಗವಂತನ ನೆಲೆಯಾದ ವೈಕುಂಠ ಎಂದು, ಅದನ್ನು ನೀಡುವವನು ಆದಿಪುರುಷನಾದ ಭಗವಂತ ಎಂದು, ಅವನಿಂದಲೇ ಈ ಜಗತ್ತೆಲ್ಲ ರೂಪುಗೊಂಡಿದೆ ಎಂದು ತಿಳಿಯಬೇಕು. ಹಾಗೆ ತಿಳಿದು, ಅವನನ್ನೇ ಎಲ್ಲ ರೀತಿಯಲ್ಲೂ ನೆರೆನಂಬಬೇಕು.

*****

ಇಂತಹ ಬ್ರಹ್ಮಾನ್ವೇಷಣೆಯ ಕಾರ್ಯ ಎಲ್ಲರಿಗೂ ನಿಲುಕುವಂತಹುದಲ್ಲ. ಹಮ್ಮು ತೊರೆದವರು, ಮೋಹವಳಿದವರು, ವಿಷಯಸಂಗವನ್ನು ಮೆಟ್ಟಿನಿಂತವರು, ಅಧ್ಯಾತ್ಮದಲ್ಲಿ ಸದಾ ನೆಲೆನಿಂತವರು, ಕಾಮನೆಗಳನ್ನು ಪೂರ್ಣ ತೊರೆದವರು, ಸುಖದುಃಖವೆಂಬ ದ್ವಂದ್ವಗಳನ್ನು ನೀಗಿದವರೂ ಆದ ಜ್ಞಾನಿಗಳು ಮಾತ್ರ ಅಂತಹ ಅಳಿವಿರದ ನೆಲೆಯನ್ನು ತಲುಪುವರು.[೨]

*****

---

೧. ಅಸಂಗಶಸ್ತ್ರೇಣ – ಸಂಗರಾಹಿತ್ಯಸಹಿತೇನ ಜ್ಞಾನೇನ – 'ಜ್ಞಾನಾಸಿನೋಪಾಸನಾಯಾ ಶಿತೇನ' ಇತಿ ಹಿ ಭಾಗವತೇ । – ಗೀ.ಭಾ. (೧೫/೪)

೨. ನಿರ್ಮಾನಮೋಹಾ ಜಿತಸಂಗದೋಷಾ ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಾಃ ।
ದ್ವಂದ್ವೈರ್ವಿಮುಕ್ತಾಃ ಸುಖದುಃಖಸಂಜ್ಞೈರ್ಗಚ್ಛಂತ್ಯಮೂಢಾಃ ಪದಮವ್ಯಯಂ ತತ್ ॥
– ಗೀತಾ (೧೫/೫)

## ವೈಕುಂಠವರ್ಣನೆ

ಭಗವಂತನ ಲೋಕವಾದ ವೈಕುಂಠವು ವಿಶಿಷ್ಟವಾದುದು. ಅದನ್ನು ಸೂರ್ಯನು ಬೆಳಗನು; ಚಂದ್ರನೂ ಬೆಳಗನು. ಅಲ್ಲಿಗೆ ತೆರಳಿದವರು ಮತ್ತೆಂದೂ ಮರಳರು. ಅದಕ್ಕೆ ಸಾಟಿಯಾದ ಮತ್ತೊಂದು ಸ್ಥಳವೇ ಇಲ್ಲ; ಭಗವತ್ಸ್ವರೂಪವೂ ಸಹ ಇದರಂತೆಯೇ ಪರಮಾದ್ಭುತ.[೧]

ಮೇಲ್ನೋಟಕ್ಕೆ ಈ ಶ್ಲೋಕ ಅಲ್ಲಿ ಬೆಳಕಿಲ್ಲ ಎಂಬ ಭಾವನೆಗೆ ಎಡೆಮಾಡಿಕೊಡುವುದು. ಆದರೆ ಹಾಗಲ್ಲ. ಅಲ್ಲಿ ಸೂರ್ಯ, ಚಂದ್ರ ಹಾಗೂ ಅಗ್ನಿಗಳ ಬೆಳಕಿಲ್ಲ ಎಂದರ್ಥವೇ ಹೊರತು, ಬೆಳಕೇ ಇಲ್ಲ ಎಂದಲ್ಲ. ಅಲ್ಲಿಯ ಬೆಳಕು ಸ್ವಾಭಾವಿಕವಾದ ಬೆಳಕು. ಅದಕ್ಕೆ ಬೇರಾವ ಬೆಳಕಿನ ಆವಶ್ಯಕತೆಯೂ ಇಲ್ಲ. ಅದು ಸಾವಿರಾರು ಸೂರ್ಯರ ಬೆಳಕಿಗಿಂತ ಮಿಗಿಲಾದ ಬೆಳಕಿನ ಲೋಕ. ಸೂರ್ಯನನ್ನು ದೀಪದಿಂದ ಬೆಳಗಲು ಸಾಧ್ಯವೆ? ಅದರಂತೆ ಆ ಪ್ರಕಾಶಮಾನವಾದ ವೈಕುಂಠಲೋಕವನ್ನು ಬೆಳಗಲು ಈ ಸೂರ್ಯ-ಚಂದ್ರಾದಿಗಳಿಂದ ಸಾಧ್ಯವೇ ಎಂದು ಭಾವ. ಹಗಲಿನಲ್ಲಿ ದೀಪವಿಲ್ಲ ಎಂದರೆ ಬೆಳಕಿಲ್ಲ ಎಂದು ಹೇಗೆ ಅರ್ಥವಾಗದೋ, ಹಾಗೆ. ಈ ಮಧ್ಯೆ ಅಲ್ಲಿ ಮುಕ್ತರಾದ ಅನಂತ ಸಂಖ್ಯೆಯ ಸೂರ್ಯ, ಚಂದ್ರ, ಅಗ್ನಿಗಳು ಇರುವರು ಎಂಬುದನ್ನು ಮರೆಯಬಾರದು.

*****

## ಜೀವ ಭಗವಂತನ ಭಿನ್ನಾಂಶ

ಭಗವಂತನು ಜೀವರನ್ನು ತನ್ನದೇ ಅಂಶ ಎಂದು ಈ ಸಮಯದಲ್ಲಿ ಕರೆದಿರುವನು[೨]. ಮೇಲ್ನೋಟಕ್ಕೆ ಇದು ಜೀವರೆಲ್ಲ ಭಗವಂತನ ಅಂಶರಾದ್ದರಿಂದ ಅವರೂ ಭಗವಂತನೇ ಎಂಬ ಐಕ್ಯಭ್ರಮೆಗೆ ಕಾರಣವಾಗುವಂತಿದೆ. ವಸ್ತುಸ್ಥಿತಿ ಹಾಗಲ್ಲ. ಅಂಶ ಎಂಬುದಕ್ಕೆ ಎರಡು ಬಗೆಯ ಅರ್ಥ ಉಂಟು. ಒಂದು ಸ್ವರೂಪಾಂಶ; ಮತ್ತೊಂದು ವಿಭಿನ್ನಾಂಶ. ಉದಾಹರಣೆಗೆ ಒಂದೇ ಹಸುವಿನ ಹಾಲು ಮತ್ತು ಅದರ ಅಂಶಗಳು ಸ್ವರೂಪಾಂಶ; ಬೇರೆ ಹಸುವಿನ ಹಾಲಿನೊಂದಿಗೆ ಹೋಲಿಸಿದಾಗ ಅದು ವಿಭಿನ್ನಾಂಶ. ಒಂದು ನೂರು ರೂಪಾಯಿಯ ಒಂದು ತುಂಡು ಅದರ ಸ್ವರೂಪಾಂಶ; ಆದರೆ ಅದರ ಪಕ್ಕದಲ್ಲಿರುವ ರೂಪಾಯಿಗಳು ಅದರ ವಿಭಿನ್ನಾಂಶ. ಅದರಂತೆ ಮತ್ಸ್ಯಕೂರ್ಮಾದಿ ರೂಪಗಳು ಭಗವಂತನ ಸ್ವರೂಪಾಂಶ; ಬ್ರಹ್ಮಾದಿಜೀವರು ಅವನ ವಿಭಿನ್ನಾಂಶ. ಇಲ್ಲಿ ಹೇಳಲ್ಪಟ್ಟಿರುವ

---

೧. ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ।
ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ॥ - ಗೀತಾ (೧೫/೬)

೨. ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ।
ಮನಃಷಷ್ಠಾನೀಂದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ॥ - ಗೀತಾ (೧೫/೭)

ಅಂಶ ವಿಭಿನ್ನಾಂಶವೇ ಹೊರತು ಸ್ವರೂಪಾಂಶವಲ್ಲ.[೧] ಎಂದರೆ ಜೀವೇಶ್ವರರ ಮಧ್ಯೆ ಇರುವುದು ಭೇದವೇ ಹೊರತು ಅಭೇದವಲ್ಲ.

ಇಲ್ಲಿಯ ಅಂಶ ಎಂಬುದಕ್ಕೆ ಮತ್ತೊಂದು ಬಗೆಯ ಅರ್ಥವೂ ಉಂಟು. ಅಂಶ ಎಂದರೆ ಚಿಕ್ಕ ಭಾಗ ಎಂದರ್ಥ. ಸಮುದ್ರದ ಮುಂದೆ ಕೆರೆ ಒಂದು ಅಂಶ. ಎಂದರೆ ಸಮುದ್ರದ ಒಂದು ತುಣುಕಿನಂತೆ ಮಾತ್ರ ಈ ಕೆರೆ ಇದೆ ಎಂದರ್ಥ. ಅದರಂತೆ ಅಣುಸ್ವರೂಪದ, ಅಲ್ಪಶಕ್ತಿಯ, ಅಲ್ಪತಿಳುವಳಿಕೆಯ ಜೀವನು ವ್ಯಾಪ್ತಸ್ವರೂಪದ, ಸರ್ವಶಕ್ತನಾದ, ಸರ್ವಜ್ಞನಾದ ಭಗವಂತನ ಮುಂದೆ ಒಂದು ಅಂಶ ಮಾತ್ರ ಎಂದರೆ ತುಂಬಾ ಕಿರಿಯ ಎಂದರ್ಥ. ಸೂರ್ಯನ ಮುಂದೆ ಒಂದು ದೀಪ ಇದ್ದಂತೆ, ಅತ್ಯಲ್ಪ ಎಂದರ್ಥ. ಈ ಅರ್ಥದಲ್ಲೂ ಜೀವೇಶ್ವರರ ಭೇದವೇ ಗೀತೆಯ ಆಂತರ್ಯವಾಗುವುದು. ಗೀತೆಯ ಪೂರ್ವಾಪರ ಬಲ್ಲವರಿಗೆ ಇದು ಸುವೇದ್ಯವಾದ ವಿಚಾರ.

*****

ಜೀವಿಯು ಯಾವ ಶರೀರ ಪಡೆದಾಗಲೂ, ಅದನ್ನು ತೊರೆದಾಗಲೂ ಭಗವಂತನು ಅವನನ್ನು ಅವನ ಇಂದ್ರಿಯಗಳ ಸಮೇತವಾಗಿ ಕರೆದೊಯ್ಯುವನು; ಗಾಳಿಯು ಪರಿಮಳವನ್ನು ಒಯ್ಯುವಂತೆ. ಜೀವನ ಕಿವಿ, ಕಣ್ಣು ಮೊದಲಾದ ಬಾಹ್ಯೇಂದ್ರಿಯ-ಗಳಲ್ಲೂ, ಮನಸ್ಸಿನಲ್ಲೂ ನೆಲೆಸಿ, ವಿಷಯಗಳನ್ನು ಸವಿಯುವವನು ಪ್ರಧಾನವಾಗಿ ಅವನೇ.[೨]

*****

## ಅವಿವೇಕಿಗಳು ದೇವರನ್ನು ಕಾಣರು

ದೇಹದಿಂದ ಹೊರನಡೆಯುವ, ದೇಹದಲ್ಲಿ ನೆಲೆಸಿರುವ, ಸಾರಭೂತವಾದ ವಸ್ತುಗಳನ್ನು ಸವಿಯುವ ಈ ಭಗವಂತನನ್ನು ಮೂರ್ಖರು ಎಂತೂ ತಿಳಿಯಲಾರರು; ಜ್ಞಾನದೃಷ್ಟಿಯುಳ್ಳವರು ಕಾಣಬಲ್ಲರು. ಪ್ರಯತ್ನಶೀಲರಾದ ಯೋಗಿಗಳು ತಮ್ಮೊಳಗಿರುವ ಇವನನ್ನು ಕಾಣಬಲ್ಲರು. ಬುದ್ಧಿ ಸರಿ ಇರದ ಅವಿವೇಕಿಗಳು ಎಷ್ಟು ಪ್ರಯತ್ನಿಸಿದರೂ ಇವನನ್ನು ಕಾಣಲಾರರು. ದುರ್ಯೋಧನ ವಿಶ್ವರೂಪ ತೋರಿದಾಗಲೂ ಕೃಷ್ಣನನ್ನು ಅರಿಯಲಾಗಲಿಲ್ಲ ಎಂಬ ಪ್ರಸಂಗ ಇದಕ್ಕೆ ಅತ್ಯುತ್ತಮನಿದರ್ಶನ.

*****

---

೧. ಸ್ವರೂಪಾಂಶೋ ವಿಭಿನ್ನಾಂಶ ಇತಿ ದ್ವೇಧಾऽಂಶ ಇಷ್ಯತೇ ।
ಅನಂತಾಸನವೈಕುಂಠಪದ್ಮನಾಭಾಃ ಸ್ವಯಂ ಹರಿಃ ॥
ಜೀವಾ ಇಮೇ ವಿಭಿನ್ನಾಂಶಾ ಧರ್ಮಾಧರ್ಮಾದಿಸಂಯುತಾಃ ॥ ಭಾಗವತ ತಾತ್ಪರ್ಯ (೨/೬/೧೯)

೨. ಶರೀರಂ ಯದವಾಪ್ನೋತಿ ಯಚ್ಚಾಪ್ಯುತ್ಕ್ರಾಮತೀಶ್ವರಃ ।
ಗೃಹೀತ್ವೈತಾನಿ ಸಂಯಾತಿ ವಾಯುರ್ಗಂಧಾನಿವಾಶಯಾತ್ ॥
ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ ।
ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ॥ – ಗೀತಾ (೧೫/೮,೯)

ಭಗವಂತನನ್ನು ಎಲ್ಲರೂ ಏಕೆ ಕಾಣಲಾರರು ಎಂಬುದಕ್ಕೆ ಉತ್ತರ ಇಲ್ಲಿದೆ. ದೇಹದ ಒಳಗಿದ್ದೇ ಎಲ್ಲ ಕಾರ್ಯ ಮಾಡುವವನು ಭಗವಂತ. ನಮ್ಮ ದೇಹದೊಳಗಿನ ನಮ್ಮ ಅವಯವಗಳೇ ನಮಗೆ ಕಾಣದಿರುವಾಗ, ಅವುಗಳೊಳಗೆ ನಿಂತು ಕಾರ್ಯ ಮಾಡುವ ಭಗವಂತನೆಂತು ಕಂಡಾನು? ನಮ್ಮ ದೇಹದೊಳಗಿನ ಅವಯವಗಳನ್ನು ಕಾಣಲು ಎಕ್ಸ್‌ರೇ ಮೊದಲಾದ ಉಪಕರಣಗಳಿಂದ ಮಾತ್ರ ಸಾಧ್ಯವಾಗುವಂತೆ, ನಮ್ಮ ದೇಹದೊಳಗೆ ನೆಲೆಸಿರುವ ಭಗವಂತನನ್ನು ಕಾಣಲು ಜ್ಞಾನದೃಷ್ಟಿಯಿಂದ ಮಾತ್ರ ಸಾಧ್ಯ. ಅದಿಲ್ಲದವರಿಗೆ ಅವನೆಂದೂ ಗೋಚರಿಸಲಾರ. ಜ್ಞಾನಿಗಳಿಗೆ ಜ್ಞಾನದೃಷ್ಟಿ ಇರುವುದರಿಂದ ಅವರು ಒಳಗೆ ನೆಲೆಸಿರುವ ಭಗವಂತನನ್ನು ಕಾಣಬಲ್ಲರು.[೧] ಅದನ್ನು ಹೊಂದಿರದ ಅಜ್ಞಾನಿಗಳು ಎಂದೂ ಅವನನ್ನು ಕಾಣಲಾರರು. ಕನ್ನಡಿಯ ಪ್ರಯೋಜನವನ್ನು ಪಡೆಯಲು ಕಣ್ಣಿದ್ದವನಿಗೆ ಮಾತ್ರ ಸಾಧ್ಯ, ಕುರುಡನಿಗಲ್ಲ. ಅದರಂತೆ ಶಾಸ್ತ್ರಗಳ ಅರಿವನ್ನು ಪಡೆಯಲು ಭಗವಂತನನ್ನು ಅರಿಯುವ ಒಳನೋಟವಿದ್ದವನಿಗೆ ಮಾತ್ರವೇ ಸಾಧ್ಯ. ಕುರುಡನಿಗೆ ಭಗವಂತನ ಜ್ಞಾನವಿರಲಿ ಬೆಳಕಿನ ಕಲ್ಪನೆಯೂ ನಿಲುಕದು. ಅದರಂತೆ ಅರ್ಹತೆ ಇಲ್ಲದವರಿಗೆ ಜ್ಞಾನದ ಪರಿಕಲ್ಪನೆಯೇ ಸರ್ವಥಾ ಒದಗದು.

*****

## ಸೂರ್ಯಚಂದ್ರರನ್ನು ಬೆಳಗುವ ಭಗವಂತ

ಸೂರ್ಯನಲ್ಲಿದ್ದು ಚಂದ್ರನಲ್ಲಿದ್ದು ಅಗ್ನಿಯಲ್ಲಿದ್ದು ಸಕಲಜಗತ್ತನ್ನು ಬೆಳಗುವ ತೇಜಸ್ಸು ಸಹ ಭಗವಂತನದೇ.[೨] ಇದು ಈ ಅಧ್ಯಾಯದ ಅಮೂಲ್ಯವಿಚಾರ. ಚಂದ್ರ ಸ್ವಪ್ರಕಾಶನಲ್ಲವೆಂಬುದು ವಿಜ್ಞಾನ ಬಲ್ಲುದು; ಆದರೆ ಸೂರ್ಯಚಂದ್ರರು ಹಾಗೂ ಅಗ್ನಿ ಸ್ವಪ್ರಕಾಶರಲ್ಲರೆಂಬುದನ್ನು ತತ್ತ್ವಜ್ಞಾನ ಸಾರುತ್ತಿದೆ. ಬಲ್ಬ್‌ನಿಂದ ಬೆಳಕು ಬರುವುದು ನಿಜವಾದರೂ, ಅದಕ್ಕೆ ಕಾರಣ ಅದರೊಳಗೆ ಪ್ರವಹಿಸುವ ವಿದ್ಯುತ್. ಸೂರ್ಯ ಮೊದಲಾದವರು ಬಲ್ಬ್ ಇದ್ದಂತೆ. ಅವರೊಳಗೆ ನೆಲೆಸಿರುವ ಭಗವಂತನ ತೇಜಸ್ಸು ಅವರನ್ನು ಬೆಳಗುತ್ತದೆ. ತಪ್ಪಿದಲ್ಲಿ ಅವರೂ ತೇಜೋಹೀನರಾಗುವುದು ನಿಶ್ಚಯ.

*****

---

೧. ಉತ್ಕ್ರಾಮಂತಂ ಸ್ಥಿತಂ ವಾಽಪಿ ಭುಂಜಾನಂ ವಾ ಗುಣಾನ್ವಿತಮ್ ।
ವಿಮೂಢಾ ನಾನುಪಶ್ಯಂತಿ ಪಶ್ಯಂತಿ ಜ್ಞಾನಚಕ್ಷುಷಃ ॥
ಯತಂತೋ ಯೋಗಿನಶ್ಚೈನಂ ಪಶ್ಯಂತ್ಯಾತ್ಮನ್ಯವಸ್ಥಿತಮ್ ।
ಯತಂತೋಽಪ್ಯಕೃತಾತ್ಮಾನೋ ನೈನಂ ಪಶ್ಯಂತ್ಯಚೇತಸಃ ॥ – ಗೀತಾ (೧೫/೧೦,೧೧)

೨. ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್ ।
ಯಚ್ಚಂದ್ರಮಸಿ ಯಚ್ಚಾಗ್ನೌ ತತ್ ತೇಜೋ ವಿದ್ಧಿ ಮಾಮಕಮ್ ॥ – ಗೀತಾ (೧೫/೧೨)

ಇಲ್ಲಿ ಮತ್ತೊಂದು ಅಪೂರ್ವಪ್ರಮೇಯವೂ ಅಡಗಿದೆ. ಅನೇಕರು ಗಾಯತ್ರೀ-ಮಂತ್ರವನ್ನು ಸೂರ್ಯಮಂತ್ರವೆಂದೇ ತಿಳಿದಿರುವರು. ಆದರೆ ಇಲ್ಲಿಯ ನಿರೂಪಣೆ ಅದು ಸೂರ್ಯನೊಳಗಿನ ವಿಷ್ಣುವಿನ ಮಂತ್ರ ಎಂದು ತಿಳಿಯಲು ಸಹಕಾರಿಯಾಗುತ್ತದೆ. "ಆದಿತ್ಯಾನಾಮಹಂ ವಿಷ್ಣುಃ" ಎಂಬ ವಿಭೂತಿಯೋಗದ ಮಾತೂ ಇದಕ್ಕೆ ಪೂರಕ. ಶ್ರೀಮಧ್ವಾಚಾರ್ಯರು ಉಲ್ಲೇಖಿಸಿರುವ —

**ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ**
**ನಾರಾಯಣಃ ಸರಸಿಜಾಸನಸನ್ನಿವಿಷ್ಟಃ।**
**ಕೇಯೂರವಾನ್ ಮಕರಕುಂಡಲವಾನ್**
**ಕಿರೀಟೀ ಹಾರೀ ಹಿರಣ್ಮಯವಪುರ್ಧೃತಶಂಖಚಕ್ರಃ॥**

ಎಂಬ ನರಸಿಂಹಪುರಾಣದ ಶ್ಲೋಕವೂ ಇದಕ್ಕೆ ಸಾಧಕ. ಸೂರ್ಯವಂಶದಲ್ಲಿ ಅವತರಿಸಿದ ರಾಮ, ಸೂರ್ಯವಂಶವನ್ನೇ ಉದ್ಧರಿಸಿದ್ದು ರಾಮಾಯಣದ ಸಾರ. ಚಂದ್ರವಂಶದಲ್ಲಿ ಅವತರಿಸಿದ ಶ್ರೀಕೃಷ್ಣ ಚಂದ್ರವಂಶವನ್ನು ಉದ್ಧರಿಸಿದ್ದು ಭಾಗವತದ ಸಾರ. ಸೂರ್ಯಚಂದ್ರರಿಂದಾಗದ ಕೆಲಸವನ್ನು ಶ್ರೀರಾಮ ಹಾಗೂ ಶ್ರೀಕೃಷ್ಣರು ಮಾಡಿರುವುದು ಸಕಲಶಾಸ್ತ್ರಗಳ ಸಾರ. ಇದಕ್ಕೆ ಪೂರಕವಾಗಿ ಸೂರ್ಯನೊಳಗೆ ನಾರಾಯಣರೂಪದಿಂದಲೂ, ಚಂದ್ರನೊಳಗೆ ಧನ್ವಂತರಿರೂಪದಿಂದಲೂ, ಅಗ್ನಿಯೊಳಗೆ ಶ್ರೀಪರಶುರಾಮರೂಪದಿಂದಲೂ ಶ್ರೀಹರಿಯು ನೆಲೆಸಿರುವುದನ್ನು ಶಾಸ್ತ್ರಗಳು ಸಾರಿವೆ.

*****

## ಭೂಧರನೂ ಭಗವಂತನೇ

ಭೂಮಿಯೊಳಗೆ ಹೊಕ್ಕು ತನ್ನ ಸ್ವಂತಶಕ್ತಿಯಿಂದಲೇ ಭಗವಂತನು ಜೀವಿಗಳನ್ನು ಧರಿಸಿರುವನು. ಅಮೃತರಸಸ್ವರೂಪನಾಗಿ ಚಂದ್ರನಲ್ಲಿದ್ದು ಅವನೇ ಸಕಲಸಸ್ಯಗಳನ್ನು ಬೆಳೆಸುವನು.[೧] ಈ ವಿವರವೂ ಭಗವಂತನ ಪಾರಮ್ಯಕ್ಕೆ ಸಾಧಕವಾದುದು. ಭೂಮಿಯು ಅಂತರಾಳದಲ್ಲಿ ಹಾಗೆ ನಿಲ್ಲಲು ಸಾಧ್ಯವಾಗಿರುವುದು, ಅದರೊಳಗೆ ಜೀವಿಗಳು ಬದುಕಲು ಸಾಧ್ಯವಾಗಿರುವುದು ಭಗವಂತನ ದಯೆಯಿಂದ. ಸಸ್ಯಗಳು ಬೆಳೆಯಲು ಸಾಧ್ಯವಾಗಿರುವುದು ಚಂದ್ರನಲ್ಲಿ ನೆಲೆಸಿರುವ ಭಗವಂತನ ದಯೆಯಿಂದ. ಪ್ರತಿಯೊಂದು ವಸ್ತುವೂ ತನ್ನ ಕಾರ್ಯವನ್ನು ಮಾಡಲು ಸಾಧ್ಯವಾಗಿರುವುದು ಒಳಗೆ ನೆಲೆಸಿರುವ ಭಗವಂತನ ದಯೆಯಿಂದ ಎಂಬುದು ಇದರ ತಾತ್ಪರ್ಯ.

---

೧. ಗಾಮಾವಿಶ್ಯ ಚ ಭೂತಾನಿ ಧಾರಯಾಮ್ಯಹಮೋಜಸಾ।
ಪುಷ್ಣಾಮಿ ಚೌಷಧೀಃ ಸರ್ವಾಃ ಸೋಮೋ ಭೂತ್ವಾ ರಸಾತ್ಮಕಃ॥ – ಗೀತಾ (೧೫,೧೩)

ಮನೆಯಲ್ಲಿನ ವಿದ್ಯುದ್ದೀಪ, ಫ್ಯಾನ್, ಶೈತ್ಯಯಂತ್ರ, ಒಗೆಯುವ ಯಂತ್ರ, ವಿದ್ಯುತ್ತಿನ ಒಲೆ ಮೊದಲಾದ ಪ್ರತಿಯೊಂದು ಉಪಕರಣವೂ ವಿದ್ಯುಚ್ಛಕ್ತಿಯ ಸಾಮರ್ಥ್ಯದಿಂದ ತನ್ನ ಕಾರ್ಯವನ್ನು ನಡೆಸುವಂತೆ, ಜಗತ್ತಿನ ಪ್ರತಿಯೊಂದು ವಸ್ತುವೂ ಅದರೊಳಗೆ ನೆಲೆಸಿರುವ ಭಗವಂತನ ಅನುಗ್ರಹದಿಂದ ಸ್ವಕಾರ್ಯಪ್ರವೃತ್ತವಾಗಿದೆ ಎಂಬುದು ಒಟ್ಟು ಸಾರ.

*****

## ಅನ್ನ ಜೀರ್ಣಿಸುವುದು ಅವನಿಂದ

ಭಗವಂತನು ವೈಶ್ವಾನರರೂಪದಿಂದ ಸಕಲಪ್ರಾಣಿಗಳ ಶರೀರದೊಳಗಿದ್ದು ಪ್ರಾಣಾಪಾನರಿಂದೊಡಗೂಡಿ, ನಾಲ್ಕು ಬಗೆಯ ಆಹಾರವನ್ನು ಜೀರ್ಣ ಮಾಡುವನು ಎಂಬ ಮತ್ತೊಂದು ತತ್ತ್ವವೂ ಇಲ್ಲಿ ನಿರೂಪಿತವಾಗಿದೆ.[೧] ಈವರೆಗೂ ಸಹ ಹೊರಪ್ರಪಂಚದಲ್ಲಿ ತನ್ನ ವ್ಯಾಪ್ತಿ ಹಾಗೂ ಸಾಮರ್ಥ್ಯಗಳನ್ನು ನಿರೂಪಿಸಿದ ಭಗವಂತ, ಇಲ್ಲಿ ದೇಹದೊಳಗೆ ತಾನಿದ್ದು ಜೀವರನ್ನು ಅನುಗ್ರಹಿಸುವ ಪರಿಯನ್ನು ನಿರೂಪಿಸಿರುವನು. ಮನುಷ್ಯ ತಿನ್ನುವ ಆಹಾರ ಭಕ್ಷ್ಯ, ಭೋಜ್ಯ, ಲೇಹ್ಯ ಮತ್ತು ಪೇಯ ಎಂಬುದಾಗಿ ನಾಲ್ಕು ಬಗೆಯದು. ಇಂತಹ ನಾಲ್ಕು ವಿಧ ಆಹಾರ ಜೀರ್ಣವಾಗಲು ಪ್ರಾಣಾಪಾನಾದಿ ವಾಯುರೂಪಗಳು, ಅವುಗಳೊಳಗೆ ನೆಲೆಸಿರುವ ಭಗವಂತ ಮುಖ್ಯಕಾರಣ ಎಂಬುದು ಇಲ್ಲಿಯ ಪ್ರತಿಪಾದನೆ. ಹರಿಮಹಿಮೆಯೊಂದಿಗೆ ಮುಖ್ಯಪ್ರಾಣನ ಮಹಿಮೆಯೂ ನಿರೂಪಿತವಾಗಿರುವುದು ಇಲ್ಲಿಯ ಮತ್ತೊಂದು ವಿಶೇಷ. ಇಲ್ಲಿ ಜೀರ್ಣ ಮಾಡುವುದು ಭಗವಂತ ಎಂಬ ಮಾತಿನಿಂದ, ಹಾಗೆ ಜೀರ್ಣವಾದ ಆಹಾರ ದೇಹದ ಸಕಲಭಾಗಗಳಿಗೆ ತಲುಪಲು ಅಲ್ಲಿ ನೆಲೆಸಿರುವ ದೇವತೆಗಳಿಗೆ ತೃಪ್ತಿ ನೀಡಲು ಸಹ ಭಗವಂತನೇ ಕಾರಣ ಎಂಬ ಮತ್ತೊಂದು ತತ್ತ್ವವನ್ನೂ ತಿಳಿಯಬೇಕು.

*****

ಭಗವಂತನು ಎಲ್ಲರ ಹೃದಯದಲ್ಲೂ ನೆಲೆಸಿರುವವನು. ಅವನಿಂದಲೇ ಸ್ಮೃತಿ, ಜ್ಞಾನ, ಮರೆವುಗಳು. ಸಕಲವೇದಗಳಿಂದಲೂ ಪ್ರತಿಪಾದ್ಯನಾದವನು ಅವನೇ. ವೇದಾಂತ(ಬ್ರಹ್ಮ)- ಸೂತ್ರಗಳನ್ನು ಬರೆದವನು, ವೇದಗಳನ್ನು ಬಲ್ಲವನು ಅವನೇ.[೨]

*****

---

೧. ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ।
ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್ ॥ – ಗೀತಾ (೧೫/೧೪)

೨. ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟೋ ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ।
ವೇದೈಶ್ಚ ಸರ್ವೈರಹಮೇವ ವೇದ್ಯೋ ವೇದಾಂತಕೃದ್ವೇದವಿದೇವ ಚಾಹಮ್ ॥
– ಗೀತಾ (೧೫/೧೫)

ಉದರದಲ್ಲಿ ನೆಲೆಸಿದ ಭಗವಂತನ ವಿವರ ಹಿಂದಿನ ಶ್ಲೋಕದಲ್ಲಿ ಬಂದರೆ, ಇಲ್ಲಿ ಹೃದಯದಲ್ಲಿ ನೆಲೆಸಿದ ಅವನ ವಿವರ ಬಂದಿದೆ. ಅವನಿಂದಲೇ ಸ್ಮೃತಿ, ಜ್ಞಾನ, ಮರೆವು ಎಂಬ ಮಾತಿನಲ್ಲಿ ತಲೆಯಲ್ಲಿ ನೆಲೆಸಿದ ಅವನ ವಿವರವೂ ಬಂದಿದೆ.

*****

ಅವನು ಸಕಲವೇದಗಳಿಂದ ಪ್ರತಿಪಾದ್ಯನು ಎಂಬ ಮಾತಿನಿಂದ ವೇದಗಳ ಪ್ರಾಮಾಣ್ಯವೂ, ಅವನೇ ಸರ್ವೋತ್ತಮನೆಂಬುದಾಗಿ ಸಕಲವೇದಗಳಿಂದ ಪ್ರತಿಪಾದಿತನಾದವನು ಎಂಬುದೂ ನಿರೂಪಿತವಾಗಿದೆ. ಅವನು ಸಕಲವೇದಪ್ರತಿಪಾದ್ಯನೆಂಬುದು ಬ್ರಹ್ಮಸೂತ್ರಗಳ ಮಹಾಪ್ರಮೇಯ ಎಂಬುದೂ ಗಮನಾರ್ಹ. ಇಲ್ಲಿಯ 'ವೇದಾಂತ' ಎಂಬುದಕ್ಕೆ ಅನೇಕರು ಉಪನಿಷತ್ತು ಎಂದು ಅರ್ಥ ಮಾಡುವರು; ಆದರೆ ಇಲ್ಲಿ ವೇದಾಂತಕೃತ್ – ವೇದಾಂತ ಬರೆದವನು ಎಂಬುದಾಗಿ ಉಲ್ಲೇಖವಿದೆ. ಇದಕ್ಕೆ ಉಪನಿಷತ್ತು ಎಂದು ಅರ್ಥ ಮಾಡುವಂತಿಲ್ಲ, ಉಪನಿಷತ್ತು ವೇದಭಾಗವಾದ್ದರಿಂದ ಅದು ಅಪೌರುಷೇಯ. ಆದ್ದರಿಂದ ಇಲ್ಲಿಯ ವೇದಾಂತಕ್ಕೆ ವೇದಾಂತಸೂತ್ರ– ಬ್ರಹ್ಮಸೂತ್ರ ಎಂಬುದಾಗಿಯೇ ಅರ್ಥ ಎಂದು ಶ್ರೀಮಧ್ವಾಚಾರ್ಯರು ನಿರೂಪಿಸಿರುವರು. ಬ್ರಹ್ಮಸೂತ್ರ ಬರೆದವರು ವೇದವ್ಯಾಸರು. ಕೃಷ್ಣನು ತಾನು ಬ್ರಹ್ಮಸೂತ್ರ ಬರೆದವನು ಎಂದು ಹೇಳುವ ಮೂಲಕ ವೇದವ್ಯಾಸರು ತಾನೇ ಎಂಬುದಾಗಿ ತಿಳಿಸಿರುವನು ಎಂದೂ ತಿಳಿಯಬೇಕು. ''ಮುನೀನಾಮಪ್ಯಹಂ ವ್ಯಾಸಃ'' ಎಂದು ಈಗಾಗಲೇ ಹೇಳಿರುವುದು ಗಮನಾರ್ಹ. ವಿಷ್ಣುಸಹಸ್ರನಾಮದಲ್ಲೂ 'ವ್ಯಾಸನಾಮವು' ಬಂದಿದೆ.

*****

## ಗೀತೆಯ ಸಾರ

ಈ ಅಧ್ಯಾಯದ ಕೊನೆಯ ಭಾಗ ಪರಮಾತ್ಮನ ಕ್ಷರಾಕ್ಷರಪುರುಷೋತ್ತಮತ್ವದ ನಿರೂಪಣೆ. ಈ ಭಾಗವನ್ನು ಶ್ರೀಮಧ್ವಾಚಾರ್ಯರು ತಮ್ಮ ಸರ್ವಮೂಲಗ್ರಂಥಗಳಲ್ಲಿ ಬಹುಬಾರಿ ಉಲ್ಲೇಖ ಮಾಡಿರುವುದು ಇವುಗಳ ವಿಶೇಷಪ್ರಾಶಸ್ತ್ಯಕ್ಕೆ ದ್ಯೋತಕ. ಶಂಕರಾಚಾರ್ಯರು ಇದರ ಬಗ್ಗೆ **'ಸರ್ವೋ ಹಿ ಗೀತಾಶಾಸ್ತ್ರಾರ್ಥಃ ಅಸ್ಮಿನ್ನಧ್ಯಾಯೇ ಸಮಾಸೇನೋಕ್ತಃ । ನ ಕೇವಲಂ ಗೀತಾಶಾಸ್ತ್ರ ಏವ । ಕಿಂತು ಸರ್ವಶ್ಚ ವೇದಾರ್ಥ ಇಹ ಪರಿಸಮಾಪ್ತಃ ॥'** (ಈ ಅಧ್ಯಾಯದಲ್ಲಿ ಸಮಸ್ತಗೀತಾಶಾಸ್ತ್ರಾರ್ಥವಷ್ಟೇ ಅಲ್ಲ, ಸರ್ವವೇದಾರ್ಥವೂ ಉಕ್ತವಾಗಿದೆ) ಎಂದು ಬರೆದಿರುವರು. ರಾಮಾನುಜಾಚಾರ್ಯರು **'ಸರ್ವವೇದಾನಾಂ ಸಾರಭೂತಮರ್ಥಂ ಶೃಣು'** (ಇದು ಸರ್ವವೇದಗಳ ಸಾರಭೂತವಾದ ಅರ್ಥ) ಎಂದು ಅವತಾರಿಕೆ ನೀಡಿರುವರು.

*****

## ಕ್ಷರಾಕ್ಷರಪುರುಷರು

ಸಮಗ್ರ[೧] ವಿಚಾರ ಮಾಡಿನೋಡಿದಾಗ ಲೋಕದಲ್ಲಿ ಕ್ಷರ ಮತ್ತು ಅಕ್ಷರ ಎಂಬುದಾಗಿ ಎರಡು ಬಗೆಯ ಚೇತನರಿರುವರು. ಬ್ರಹ್ಮಾದಿಸರ್ವಜೀವರು ದೇಹನಾಶ-ವುಳ್ಳವರಾದ್ದರಿಂದ ಕ್ಷರಚೇತನರು. ಗಗನದಂತೆ ನಿರ್ವಿಕಾರಳಾದ ಶ್ರೀದೇವಿ (ಚೇತನಪ್ರಕೃತಿ)ಯು ಅಕ್ಷರಚೇತನಳೆನ್ನಿಸುವಳು. ಬ್ರಹ್ಮಾದಿಗಳ ಸ್ವರೂಪದೇಹ ನಿತ್ಯವಾದರೂ, ಸಂಸಾರಾವಸ್ಥೆಯಲ್ಲಿ ಅವರಿಗೆ ಪ್ರಾಕೃತದೇಹದ ಸಂಪರ್ಕ ಉಂಟು. ಪ್ರಾಕೃತದೇಹ ಅಳಿಯುವದೇಹ; ಅದಕ್ಕೆಂದೇ ಅವರು ಕ್ಷರಚೇತನರು. ಮಹಾಲಕ್ಷ್ಮಿಗೆ ಯಾವ ದೃಷ್ಟಿಯಲ್ಲೂ ಪ್ರಾಕೃತದೇಹದ ಸಂಪರ್ಕವೇ ಇಲ್ಲ. ಸೀತಾ, ರುಗ್ಮಿಣೀ ಮೊದಲಾದ ಅವರ ಅವತಾರಗಳೂ ಸಹ ಶುದ್ಧ ಅಪ್ರಾಕೃತ. ಅದಕ್ಕೆಂದೇ ಅವರ ದೇಹಕ್ಕೂ ಎಂದೂ ಅಳಿವಿಲ್ಲ. ಆದ್ದರಿಂದ ಅವರು ಅಕ್ಷರಚೇತನ.

*****

## ಭಗವಂತನು ಪುರುಷೋತ್ತಮ

ಈ ಕ್ಷರಾಕ್ಷರಪುರುಷರಿಗಿಂತ ಭಿನ್ನನಾದ ಉತ್ತಮಪುರುಷನೊಬ್ಬನಿರುವನು.[೨] ಪರಮಾತ್ಮನೆಂದರೆ ಅವನೇ. ಅವನು (ಭೂಃ, ಭುವಃ ಮತ್ತು ಸ್ವಃ ಎಂಬ) ಮೂರುಲೋಕಗಳೊಳಗಿದ್ದು ಅವುಗಳನ್ನು ಧರಿಸಿ, ಪೋಷಿಸುವವನು; ಅಳಿಯದವನು, ಅಚಿಂತ್ಯಶಕ್ತಿಸಂಪನ್ನನು. ಅವನು ಅಕ್ಷರಪುರುಷಳಿಗಿಂತ ಮಿಗಿಲಾದ್ದರಿಂದ ಅವನಿಗೂ ಅಳಿಯುವ ಪ್ರಾಕೃತದೇಹ ಎಂದೂ ಇಲ್ಲ. ಅವನ ಸಕಲಾವತಾರಗಳೂ ಮೂಲರೂಪ-ದಂತೆಯೇ ಅಪ್ರಾಕೃತ ಹಾಗೂ ಪರಿಪೂರ್ಣ. ಆದ್ದರಿಂದಲೇ ಅವನು ಕ್ಷರಕ್ಕಿಂತ ಮಿಗಿಲಾದ ಅಕ್ಷರಕ್ಕಿಂತಲೂ ಉತ್ತಮಪುರುಷ.

*****

ಅವನು ಕ್ಷರಪುರುಷರನ್ನು ಮೀರಿದವನು ಹಾಗೂ ಅಕ್ಷರಪುರುಷರಿಗಿಂತ ಮಿಗಿಲಾದವನು. ಅದಕ್ಕೆಂದೇ ಲೋಕದಲ್ಲೂ, ವೇದದಲ್ಲೂ 'ಪುರುಷೋತ್ತಮ'ನೆಂದು ಪ್ರಸಿದ್ಧನಾಗಿರುವನು. ಭಗವಂತನ ಪುರುಷೋತ್ತಮತ್ವ ಇಂತಹುದು. ಪುರುಷೋತ್ತಮ ಎಂದರೆ ಸಾಮಾನ್ಯಪುರುಷರಲ್ಲಿ ಉತ್ತಮ ಎಂದಲ್ಲ, ಸರ್ವಪುರುಷರಲ್ಲೂ ಅವನೇ

---

೧. ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ।
ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥
ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ।
ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥ – ಗೀತಾ (೧೫/೧೬,೧೭)

೨. ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ।
ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥ – ಗೀತಾ (೧೫,೧೮)

ಉತ್ತಮ; ಅದಕ್ಕೆಂದೇ ಅವನು ಸರ್ವೋತ್ತಮ. ಈ ಮಾತು ಸಕಲ ಅಪೌರುಷೇಯವೇದಗಳಲ್ಲೂ, ಪೌರುಷೇಯವಾದ ಮಹಾಭಾರತಾದಿಗ್ರಂಥಗಳಲ್ಲೂ ಸ್ಫುಟವಾಗಿರುವ ಮಹಾಪ್ರಮೇಯ. ಪುರುಷಸೂಕ್ತಪ್ರತಿಪಾದ್ಯನಾದ 'ಪುರುಷ' ಇವನೇ. ವಿಷ್ಣುಸಹಸ್ರನಾಮದ 'ಅವ್ಯಯಃ ಪುರುಷಃ', 'ಪ್ರಧಾನಪುರುಷೇಶ್ವರಃ', 'ಕೇಶವಃ ಪುರುಷೋತ್ತಮಃ', 'ವೈಕುಂಠಃ ಪುರುಷಃ ಪ್ರಾಣಃ' ಎಂಬಲ್ಲಿನ ಪುರುಷ, ಪ್ರಧಾನಪುರುಷೇಶ್ವರ, ಪುರುಷೋತ್ತಮನೂ ಸಹ ಇವನೇ.

ಯಾವನು ಭಗವಂತನನ್ನು ಹೀಗೆ ಸ್ಫುಟವಾಗಿ ಪುರುಷೋತ್ತಮನೆಂದು ತಿಳಿಯುವನೋ, ಅವನು ಎಲ್ಲವನ್ನೂ ಅರಿತವನು. ಅವನು ಎಲ್ಲ ಬಗೆಯಿಂದಲೂ ಭಗವಂತನನ್ನೇ ಆರಾಧಿಸುವನು. ಭಗವಂತನನ್ನು ಈ ತೆರನಾಗಿ ಪುರುಷೋತ್ತಮನು ಎಂದು ತಿಳಿಯುವುದು ಎಂದರೆ, ಸರ್ವೋತ್ತಮನು ಎಂದು ತಿಳಿಯುವುದು ಎಂದೇ ಅರ್ಥ. ಆದ್ದರಿಂದ ಅವನು ಸರ್ವವನ್ನೂ ತಿಳಿದವನಾಗುವನು. ಅಂತಹ ಪರಿಜ್ಞಾನವನ್ನು ಹೊಂದಿದವನು ಅವನನ್ನು ಸರ್ವವಿಧಭಕ್ತಿಯಿಂದಲೂ ಭಜಿಸತೊಡಗುವನು.[೧]

*****

ಭಾವ ಎಂದರೆ ಭಕ್ತಿ – 'ಭಾವೋ ಭಕ್ತಿಃ ಸಮುದ್ದಿಷ್ಟಃ'. [೨]ಸರ್ವಭಾವ ಎಂದರೆ ಸರ್ವವಿಧವಾದ ಭಕ್ತಿ , ನವವಿಧಭಕ್ತಿ.

**ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಮ್ ।**
**ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಮ್ ॥ (ಭಾಗವತ)**

ಸರ್ವೋತ್ತಮನು ಎಂದು ತಿಳಿದ ಮೇಲೆ ಸರ್ವವಿಧಭಕ್ತಿಯಿಂದಲೂ ಆರಾಧಿಸುವುದು ಸಹಜ. ಆದ್ದರಿಂದಲೇ ವಿಷ್ಣುವಿನಲ್ಲಿ ಪರಮಭಕ್ತಿ ಸಾಧ್ಯ. ಇತರರಲ್ಲಿ ಅಂತೆಯೇ ಭಕ್ತಿಯಲ್ಲಿ ತಾರತಮ್ಯವೂ ಅನಿವಾರ್ಯ.

*****

ತಾನು ಹೀಗೆ ತಿಳಿಸಿದ ತತ್ತ್ವವನ್ನು ತುಂಬಾ ರಹಸ್ಯವಾದ ಶಾಸ್ತ್ರ ಎಂದು ಭಗವಂತನು ತಿಳಿಸಿರುವನು. ಇದರ ಪರಿಜ್ಞಾನ ಅಪರೋಕ್ಷಜ್ಞಾನಕ್ಕೂ, ಮೋಕ್ಷಕ್ಕೂ ಸಾಧನ ಎಂದು ಕೊಂಡಾಡಿರುವನು.

*****

---

೧. ಯೋ ಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಮ್ ।
ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ ॥ – ಗೀತಾ (೧೫/೧೯)

೨. ಯಾದೃಶ್ಯೇವೋನ್ನತಿರ್ಯೋಗ್ಯಾ ತಸ್ಯಾಃ ಸರ್ವಾತ್ಮನಾಽಽಯತಿಃ ।
ಸರ್ವಭಾವಸ್ತು ವಿಜ್ಞೇಯೋ ............. – ಛಾಂದೋಗ್ಯಭಾಷ್ಯ (೨/೨)

ಇಲ್ಲಿ 'ಬುದ್ಧಿಮಾನ್' ಎಂದರೆ ಅಪರೋಕ್ಷಜ್ಞಾನಿ ಎಂದೂ, 'ಕೃತಕೃತ್ಯ' ಎಂದರೆ ಮುಕ್ತ ಎಂದೂ ಅರ್ಥ.[೧] ಬುದ್ಧಿಯ ಸಾರ್ಥಕ್ಯ ಅತ್ಯುತ್ತಮವಸ್ತುವನ್ನು ಗುರುತಿಸಿ ತಿಳಿಯುವುದು. ಭಗವಂತ ಸರ್ವೋತ್ತಮನಾದ್ದರಿಂದಲೇ, ಅವನನ್ನು ಸಾಕ್ಷಾತ್ಕರಿಸಿಕೊಂಡವನು 'ಬುದ್ಧಿಮಾನ್' (ಬುದ್ಧಿವಂತ). ಅಪರೋಕ್ಷಜ್ಞಾನಿಗೆ ಮುಕ್ತಿ ಖಚಿತವಾದ್ದರಿಂದ ಅವನು ಕೃತಕೃತ್ಯನೂ ಆಗುವನು. ಕೃತಕೃತ್ಯ ಎಂದರೆ ಮಾಡಬೇಕಾದ ಎಲ್ಲವನ್ನೂ ಮಾಡಿ ಪೂರೈಸಿದವನು ಎಂದರ್ಥ. ನಿಜವಾದ ಅರ್ಥದಲ್ಲಿ ಹೀಗಿರುವವನು ಮುಕ್ತನು ಮಾತ್ರ. ಆದ್ದರಿಂದ ಕೃತಕೃತ್ಯ ಎಂದರೆ ಮುಕ್ತ ಎಂದೇ ಅರ್ಥ. ಹೀಗೆ ಜ್ಞಾನಮೋಕ್ಷಗಳಿಗೆ ಸಾಧನವಾದ್ದರಿಂದಲೇ ಇದು ರಹಸ್ಯತತ್ತ್ವ ಎಂಬುದು ಉಚಿತ.

*****

೧. ಬುದ್ಧಿಮಾನ್ – ಅಪರೋಕ್ಷಜ್ಞಾನೀ। ಕೃತಕೃತ್ಯೋ ಮುಕ್ತಃ।

– ಶ್ರೀಜಯತೀರ್ಥರು (ಮಾಯಾವಾದಖಂಡನಟೀಕಾ)

# ಅಧ್ಯಾಯ - ೧೬

ದೈವೀಸಂಪತ್ತು ಹಾಗೂ ಆಸುರೀಸಂಪತ್ತುಗಳ [೧]ವಿವೇಚನೆ ಹದಿನಾರನೆಯ ಅಧ್ಯಾಯದ ಮುಖ್ಯವಿಷಯ. ದೈವೀಸಂಪತ್ತು ಸಾತ್ತ್ವಿಕ; ಆಸುರೀಸಂಪತ್ತು ತಾಮಸ. ಸಾಮಾನ್ಯವಾಗಿ ದೇವತೆಗಳು, ಅಸುರರು ಎಂಬುದನ್ನು ದೇಹದ ಲಕ್ಷಣದಿಂದ ಗುರುತಿಸುವುದು ವಾಡಿಕೆ. ಚಿತ್ರಗಳಲ್ಲೂ ದೇವತೆಗಳನ್ನು ಸುಂದರರನ್ನಾಗಿಯೂ, ಅಸುರರನ್ನು ವಿಕಾರಿಗಳನ್ನಾಗಿಯೂ ಚಿತ್ರಿಸುವುದು ಸಾಮಾನ್ಯ. ಅದು ಸ್ವಲ್ಪಮಟ್ಟಿಗೆ ವಾಸ್ತವವೂ ಹೌದು. ಆದರೆ ನಿಜಕ್ಕೂ ಯೋಗ್ಯತೆಯು ಪ್ರಧಾನವಾಗಿ ಅವಲಂಬಿಸಿರುವುದು ಸ್ವರೂಪವನ್ನೇ ಹೊರತು ದೇಹವನ್ನಲ್ಲ. ದೇಹಲಕ್ಷಣವು ಅನೇಕಕಾರಣಗಳಿಂದ ಬದಲಾಗುವ ಸಾಧ್ಯತೆ ಇರುವುದೇ ಇದಕ್ಕೆ ಕಾರಣ. ಪ್ರಹ್ಲಾದನಂತಹ ಸಾತ್ತ್ವಿಕ ದೈತ್ಯನಾಗಿ ಜನಿಸಿದ್ದುದು ಶಾಪವೊಂದರ ಫಲ. ದುರ್ಯೋಧನನಂತಹ ಮಹಾದೈತ್ಯ ಚಂದ್ರವಂಶದ ರಾಜವಂಶದಲ್ಲಿ ಜನಿಸಿದ್ದು ಇದಕ್ಕೆ ವ್ಯತಿರಿಕ್ತವಾದ ನಿದರ್ಶನ. ಆದರೆ ಆಂತರಿಕಲಕ್ಷಣ ಹೀಗಲ್ಲ. ಅದು ಸದಾ ಒಂದೇ ತೆರನಾಗಿ ಇರುವಂತಹುದು. ಅದಕ್ಕೆಂದೇ ಭಗವಂತ ಅಂತಹ ಸಹಜಲಕ್ಷಣಗಳನ್ನು ಇಲ್ಲಿ ನಿರೂಪಿಸಿರುವನು.

*****

## ದೈವೀಸಂಪತ್ತು

ಅಂಜದಿರುವುದು[೨](ಹಾಗೂ ಇತರರನ್ನು ಅಂಜಿಸದಿರುವುದು), ಮನಃಪ್ರಸಾದ, ಜ್ಞಾನಸಾಧನೆಯಲ್ಲಿ ಮಗ್ನನಾಗುವುದು, ದಾನ ಕೊಡುವುದು, ಇಂದ್ರಿಯಗಳನ್ನು ಗೆಲ್ಲುವುದು, ಯಜ್ಞಗಳನ್ನು ಆಚರಿಸುವುದು, ಶಾಸ್ತ್ರಾಧ್ಯಯನ ಮಾಡುವುದು, ತಪಸ್ಸು(ಕಠಿಣವ್ರತಗಳನ್ನು ಆಚರಿಸುವುದು), ನಡೆನುಡಿಗಳಲ್ಲಿ ನೇರವಾಗಿರುವುದು, ಮತ್ತೊಬ್ಬರನ್ನು ನೋಯಿಸದಿರುವುದು, ಸತ್ಯ ನುಡಿಯುವುದು, ಕೋಪಗೊಳ್ಳ-ದಿರುವುದು, ಪರರ ಹಿತಕ್ಕಾಗಿ ತನ್ನ ಹಿತವನ್ನು ತೊರೆಯುವುದು, ಭಗವಂತನನ್ನು ಚಿಂತಿಸುತ್ತಾ ನೆಮ್ಮದಿಯಿಂದಿರುವುದು, ಚಾಡಿ ಹೇಳದಿರುವುದು, ಪ್ರಾಣಿಗಳಲ್ಲಿ ದಯೆ

---

೧. ಪುಮರ್ಥಸಾಧನವಿರೋಧೀನ್ಯನೇನಾಧ್ಯಾಯೇನ ದರ್ಶಯತಿ। - ಗೀ. ಭಾ.
ದೇವಾಸುರಲಕ್ಷಣಮ್ । - ಗೀ. ತಾ.

೨. ಅಭಯಂ ಸತ್ತ್ವಸಂಶುದ್ಧಿರ್ಜ್ಞಾನಯೋಗವ್ಯವಸ್ಥಿತಿಃ।
ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಮ್ ॥
ಅಹಿಂಸಾ ಸತ್ಯಮಕ್ರೋಧಸ್ತ್ಯಾಗಃ ಶಾಂತಿರಪೈಶುನಮ್ ।
ದಯಾ ಭೂತೇಷ್ವಲೋಲುಪ್ತ್ವಂ ಮಾರ್ದವಂ ಹ್ರೀರಚಾಪಲಮ್ ॥
ತೇಜಃ ಕ್ಷಮಾ ಧೃತಿಃ ಶೌಚಮದ್ರೋಹೋ ನಾತಿಮಾನಿತಾ ।
ಭವಂತಿ ಸಂಪದಂ ದೈವೀಮಭಿಜಾತಸ್ಯ ಭಾರತ ॥ - ಗೀತಾ (೧೬/೧-೩)

ತೋರುವುದು, ವಿಷಯಲೋಲುಪನಾಗದಿರುವುದು, ಮೃದುವಾಗಿ ವರ್ತಿಸುವುದು, ಸಲ್ಲದ್ದನ್ನು ಮಾಡಲು ನಾಚುವುದು, ಹೊಯ್ದಾಡದಿರುವುದು, ಕೆಚ್ಚು ತೋರುವುದು, ಕೇಡೆಣಿಸದಿರುವುದು, ಆತಂಕಪಡದಿರುವುದು, ಮೈಮನಗಳಲ್ಲಿ ಶುದ್ಧನಾಗಿರುವುದು, ದ್ರೋಹ ಬಗೆಯದಿರುವುದು, ಗರ್ವಪಡದಿರುವುದು – ಇವೆಲ್ಲ ದೈವೀಸಂಪತ್ತನ್ನು ಮೈಗೂಡಿಸಿಕೊಂಡವನ ಲಕ್ಷಣಗಳು.

*****

ಸೋಗು, ದರ್ಪ, ಗುರುಹಿರಿಯರನ್ನು ಮೀರಿ ನಡೆಯುವುದು, ಸಿಡುಕು, ನಿಷ್ಠುರತೆ ಮತ್ತು ಅವಿವೇಕ – ಇವು ಆಸುರೀಸಂಪತ್ತಿನ ಲಕ್ಷಣಗಳು.[೧]

*****

ದೈವೀಸಂಪತ್ತು ಮೋಕ್ಷಕ್ಕೆ ಸಾಧನ. ಆಸುರೀಸಂಪತ್ತು ತಮಸ್ಸಿಗೆ ಸಾಧನ ಎಂದು ಶಾಸ್ತ್ರಗಳ ಅಭಿಮತ.[೨] ದೈವೀಸಂಪತ್ತಿನ ಸಿದ್ಧಿ ಮೋಕ್ಷ. ಆಸುರೀಸಂಪತ್ತಿನ ದುರಂತ ತಮಸ್ಸು. ಇಲ್ಲಿಯ ಸಂಪತ್ತು ಜನ ತಿಳಿದಿರುವ ಧನಕನಕಾದಿಸಂಪತ್ತಾಗಿರದೆ, ಸದ್ಗುಣಗಳ ಸಂಪತ್ತಾಗಿದೆ. ಇಂತಹ ಸದ್ಗುಣಗಳ ಸಂಪತ್ತು ಮೋಕ್ಷಪ್ರಾಪ್ತಿಗೆ ಸಾಧನವಾದರೆ, ದುರ್ಗುಣಗಳ ಮೇಳ ಅಧೋಗತಿಗೆ ಸಾಧನ. ಆದ್ದರಿಂದ ದೈವೀಸಂಪತ್ತನ್ನು ಮೈಗೂಡಿಸಿಕೊಳ್ಳಬೇಕು; ಆಸುರೀಸಂಪತ್ತನ್ನು ತ್ಯಜಿಸಬೇಕು ಎಂಬುದು ಇಲ್ಲಿಯ ಸಂದೇಶ.

*****

ಇಲ್ಲಿ ಮೋಕ್ಷವನ್ನು ವಿಮೋಕ್ಷ ಎಂದೂ, ತಮಸ್ಸನ್ನು ನಿಬಂಧ ಎಂದು ಕರೆದಿರುವುದು ಗಮನಾರ್ಹ. ಮೋಕ್ಷವು ಒಂದೇ ಬಗೆಯಾಗಿಲ್ಲದೆ, ಸಾಯುಜ್ಯ, ಸಾಮೀಪ್ಯ, ಸಾರೂಪ್ಯ ಮತ್ತು ಸಾಲೋಕ್ಯ ಎಂಬುದಾಗಿ ನಾಲ್ಕು ಬಗೆ. ಎಂದರೆ ಮುಕ್ತಿಯಲ್ಲೂ ತಾರತಮ್ಯವಿದೆ. ಅದನ್ನು ತಿಳಿಸಲೆಂದೇ ವಿಮೋಕ್ಷ ಎಂಬ ಪದದ ಬಳಕೆ. ತಮಸ್ಸೂ ಹಾಗೆಯೇ; ತಮಸ್ಸು ಮತ್ತು ಅಂಧಂತಮಸ್ಸು ಎಂದು ಎರಡು ಬಗೆ. ಅದಕ್ಕೆಂದೇ ಬರಿ ಬಂಧ ಎನ್ನದೆ ನಿಬಂಧ ಎಂಬ ಉಲ್ಲೇಖ. ದೇವತೆಗಳ ದೇವತಾತಾರತಮ್ಯದಂತೆ, ದೈತ್ಯತಾರತಮ್ಯವೂ ತತ್ತ್ವವಾದ್ದರಿಂದ ಮುಕ್ತಿಯ ಪ್ರಭೇದದಂತೆ, ತಮಸ್ಸಿನ ಪ್ರಭೇದವೂ ಇರುವುದು ತಾತ್ತ್ವಿಕ. ಇದನ್ನೆಲ್ಲ ಸೂಚಿಸಲೆಂದೇ ವಿಮುಕ್ತಿ ಮತ್ತು ನಿಬಂಧ ಎಂಬ ಪದಗಳು.

*****

---

೧. ದಂಭೋ ದರ್ಪೋಽಭಿಮಾನಶ್ಚ ಕ್ರೋಧಃ ಪಾರುಷ್ಯಮೇವ ಚ ।
ಅಜ್ಞಾನಂ ಚಾಭಿಜಾತಸ್ಯ ಪಾರ್ಥ ಸಂಪದಮಾಸುರೀಮ್ ॥ – ಗೀತಾ (೧೬/೪)

೨. ದೈವೀಸಂಪದ್ವಿಮೋಕ್ಷಾಯ ನಿಬಂಧಾಯಾಸುರೀ ಮತಾ ।
ಮಾ ಶುಚಃ ಸಂಪದಂ ದೈವೀಮಭಿಜಾತೋಽಸಿ ಪಾಂಡವ ॥ – ಗೀತಾ (೧೬/೫)

ಪ್ರಾಣಿಸ್ವಭಾವವು ಹೀಗೆ ಪ್ರಧಾನವಾಗಿ ದೈವ, ಆಸುರ ಎಂಬುದಾಗಿ ಎರಡು ವಿಧವಾಗಿದ್ದರೂ, ಇದರ ಮಧ್ಯೆ ರಾಜಸಸ್ವಭಾವದ ಪ್ರಾಣಿವರ್ಗವೂ ಉಂಟು. ಹದಿನಾಲ್ಕನೆಯ ಅಧ್ಯಾಯದಲ್ಲಿ ಈ ವಿವರ ಬಂದಿದೆ. ಹದಿನೇಳು ಹಾಗೂ ಹದಿನೆಂಟನೆಯ ಅಧ್ಯಾಯಗಳಲ್ಲಿ ಪುನಃ ಬರುವುದು. ರಾಜಸಸ್ವಭಾವ ದೈವ ಮತ್ತು ಆಸುರಸ್ವಭಾವಗಳ ಮಿಶ್ರಣವಾದ್ದರಿಂದ ಅದನ್ನು ಪ್ರತ್ಯೇಕವಾಗಿ ತಿಳಿಸಿಲ್ಲ ಎಂದು ಭಾವಿಸಬಹುದು.

*****

ಈ ಅಧ್ಯಾಯದ ಪ್ರಾರಂಭದಲ್ಲೂ ಇತರ ಅನೇಕ ಅಧ್ಯಾಯಗಳಲ್ಲೂ ದೈವೀಸಂಪತ್ತಿನ ವಿಸ್ತೃತವಿವೇಚನೆ ಇದೆ. ಎರಡನೆಯ ಅಧ್ಯಾಯದ ಸ್ಥಿತಪ್ರಜ್ಞನ ಲಕ್ಷಣ, ಹನ್ನೊಂದನೆಯ ಅಧ್ಯಾಯದ ಭಕ್ತನ ಲಕ್ಷಣ, ಹದಿಮೂರನೆಯ ಅಧ್ಯಾಯದ ಜ್ಞಾನಸಾಧನವಿವೇಚನೆ, ಹದಿನಾಲ್ಕನೆಯ ಅಧ್ಯಾಯದ ಗುಣಾತೀತನ ಲಕ್ಷಣ ಮೊದಲಾದವು ದೈವೀಸಂಪತ್ತಿನ ವಿವೇಚನೆಯೇ ಆಗಿದೆ. ಆದಕ್ಕೆಂದೇ ಈ ಅಧ್ಯಾಯದಲ್ಲಿ ಅದನ್ನು ಮೊಟಕು ಮಾಡಿ, ಆಸುರೀಸಂಪತ್ತಿನ ವಿವೇಚನೆಯನ್ನು ವಿಸ್ತರಿಸಲಾಗಿದೆ.

*****

## ಆಸುರೀಸಂಪತ್ತಿನ ವಿವರಗಳು

ಆಸುರೀಸಂಪತ್ತಿನ ವಿವೇಚನೆಯ ಸಾರ ಹೀಗಿದೆ:

ವಿಹಿತದಾರಿಯನ್ನು ಹಿಡಿಯುವುದನ್ನು ಅವಿಹಿತದಾರಿಯನ್ನು ತೊರೆಯುವುದನ್ನು ಕೆಟ್ಟಜನ ಅರಿಯರು. ಅವರಲ್ಲಿ ಮೈಮನಗಳ ಶುದ್ಧಿ ಇರದು; ಆಚಾರವೂ ಇರದು; ಸತ್ಯವಚನವೂ ಇರದು. ಅವರು ಜಗತ್ತನ್ನು ಅಸತ್ಯವೆನ್ನುವರು. ಅದು ಭಗವಂತನನ್ನು ಅವಲಂಬಿಸಿಲ್ಲ ಎನ್ನುವರು. ಇದನ್ನು ನಿಯಂತ್ರಿಸುವ ಈಶ್ವರನಿಲ್ಲ ಎನ್ನುವರು. ಒಂದರಿಂದ ಮತ್ತೊಂದು ಜನಿಸಿದೆ ಎಂಬ ಕ್ರಮವನ್ನು ಅವರು ಒಪ್ಪಲಾರರು. ಅವರ ದೃಷ್ಟಿಯಲ್ಲಿ ಇದಕ್ಕೆಲ್ಲಾ ಕಾಮಕ್ಕೆ ಕಾರಣವಾಗುವ ಅವಿದ್ಯೆಯೇ ಮೂಲ. ಇಂತಹ ನಿಲುವನ್ನು ಹೊಂದಿ ಕೆಟ್ಟಮನಸ್ಸಿನ ಆ ಅವಿವೇಕಿಗಳು ಭಯಂಕರವಾದ ಕಾರ್ಯಗಳನ್ನು ಎಸಗುತ್ತಾ ಜಗತ್ತಿನ ನಾಶಕ್ಕೆ ಕಾರಣರಾಗುವರು. ತೀರದ ಬಯಕೆಯನ್ನು ನೆಚ್ಚಿ ಸೋಗು, ಹಮ್ಮುಗಳಿಗೆ ಒಳಗಾಗಿ ಕೊಳಕುನೇಮದ ಅವರು ಅವಿವೇಕದಿಂದ ಕೆಟ್ಟಶಾಸ್ತ್ರಗಳನ್ನು ನೆಚ್ಚಿ ಕ್ಷುದ್ರಭೋಗಗಳಿಗೆಳಸುವರು. ಸಾವಿನೊಂದಿಗೆ ತೀರುವಂತಹ ಮಿತಿಯಿಲ್ಲದ ಗೋಳಿನಲ್ಲಿ ಮುಳುಗುವ ಇವರು ವಿಷಯಭೋಗವನ್ನೇ ಸರ್ವಸ್ವವೆಂದು ಭ್ರಮಿಸುವವರು ಹಾಗೂ ಜೀವನವೆಂದರೆ ಇಷ್ಟೆ ಎಂದು ತೀರ್ಮಾನಿಸಿದವರು. ಅವರು ನೂರಾರು ಆಸೆಗಳ ಬಲೆಗೆ

ಸಿಲುಕಿ ರಾಗದ್ವೇಷಗಳಿಗೆ ಬಲಿಯಾಗುವವರು. ಮೋಜು ಮಾಡಲೆಂದು ಅನ್ಯಾಯದಿಂದ ಹಣ ಕೂಡಿಸಲು[೧]ಬಯಸುವವರು. ''ಇದೀಗ ನನಗೆ ಲಭಿಸಿತು. ಈ ಬಯಕೆಯನ್ನು ಮತ್ತೆ ಸಾಧಿಸುವೆ. ಇದೀಗ ಉಂಟು. ನನಗೆ ಬೇರೆ ಧನ ಮತ್ತೆ ಬರುವುದು. ಈ ಹಗೆಯನ್ನು ಮುಗಿಸಿದೆ; ಉಳಿದವರನ್ನೂ ಮುಗಿಸಿಬಿಡುವೆ. ನಾನೇ ಈಶ್ವರ; ನಾನೇ ಭೋಗಿ; ನಾನು ಸರ್ವಸಿದ್ಧಿ ಪಡೆದವನು; ಶಕ್ತಿಶಾಲಿಯು; ಸುಖಪಡುವವನು; ನಾನೇ ಸಿರಿವಂತ ಹಾಗೂ ಕುಲವಂತ; ನನ್ನಂತಹರು ಯಾರಿರುವರು? ನಾನು ಯಜ್ಞ ಮಾಡುವೆ, ದಾನ ನೀಡುವೆ, ಮೋಜು ಮಾಡುವೆ' ಎಂಬ ಅವಿವೇಕಕ್ಕೆ ಒಳಗಾದವರು. ಅನೇಕತೆರನಾದ ಚಿಂತೆಗಳಿಂದ ಭ್ರಾಂತಿಗೊಳಗಾಗುವರು; (ಮಡದಿಮಕ್ಕಳ) ಮೋಹದ ಬಲೆಗೆ ಸಿಲುಕುವರು; ವಿಷಯಭೋಗಗಳಲ್ಲಿ ಮೈಮರೆತು ಕೊಳಕು ನರಕಕ್ಕೆ ಬೀಳುವರು. ತಮ್ಮ ಬಗ್ಗೆ ಕೊಚ್ಚಿಕೊಳ್ಳುವರು; ಮತ್ತೊಬ್ಬರಿಗೆ ಮಣಿಯರು. ಐಸಿರಿ, ಅಂತಸ್ತುಗಳ ಸೊಕ್ಕಿಗೆ ಒಳಗಾಗುವರು. ವಿಧಿವಿಧಾನಗಳನ್ನು ತೊರೆದು, ದೊಡ್ಡಸ್ತಿಕೆ ತೋರಲೆಂದು ಯಜ್ಞಗಳಿಗೂ ತೊಡಗುವರು. ಅಹಂಕಾರ, ಬಲ, ಸೊಕ್ಕು, ದುರಾಸೆ, ಸಿಟ್ಟುಗಳಿಗೆ ಒಳಗಾಗಿ, ತಮ್ಮ ಹಾಗೂ ಇತರರ ದೇಹದೊಳಗಿರುವ ನನ್ನನ್ನು ತೆಗಳುತ್ತಾ ಅಸೂಯೆ ಪಡುವರು.[೨]

---

೧. ಪ್ರವೃತ್ತಿಂ ಚ ನಿವೃತ್ತಿಂ ಚ ಜನಾ ನ ವಿದುರಾಸುರಾಃ।
ನ ಶೌಚಂ ನಾಪಿ ಚಾಚಾರೋ ನ ಸತ್ಯಂ ತೇಷು ವಿದ್ಯತೇ॥
ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್।
ಅಪರಸ್ಪರಸಂಭೂತಂ ಕಿಮನ್ಯತ್ ಕಾಮಹೈತುಕಮ್॥
ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ।
ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ॥
ಕಾಮಮಾಶ್ರಿತ್ಯ ದುಷ್ಪೂರಂ ದಂಭಮಾನಮದಾನ್ವಿತಾಃ।
ಮೋಹಾದ್ಗೃಹೀತ್ವಾಽಸದ್ಗ್ರಾಹಾನ್ ಪ್ರವರ್ತಂತೇಽಶುಚಿವ್ರತಾಃ॥ - ಗೀತಾ (೧೬/೭-೧೦)

೨. ಇದಮದ್ಯ ಮಯಾ ಲಬ್ಧಮಿಮಂ ಪ್ರಾಪ್ಸ್ಯೇ ಮನೋರಥಮ್।
ಇದಮಸ್ತೀದಮಪಿ ಮೇ ಭವಿಷ್ಯತಿ ಪುನರ್ಧನಮ್॥
ಅಸೌ ಮಯಾ ಹತಃ ಶತ್ರುರ್ಹನಿಷ್ಯೇ ಚಾಪರಾನಪಿ।
ಈಶ್ವರೋಽಹಮಹಂ ಭೋಗೀ ಸಿದ್ಧೋಽಹಂ ಬಲವಾನ್ ಸುಖೀ॥
ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋ ಮಯಾ।
ಯಕ್ಷ್ಯೇ ದಾಸ್ಯಾಮಿ ಮೋದಿಷ್ಯ ಇತ್ಯಜ್ಞಾನವಿಮೋಹಿತಾಃ॥
ಅನೇಕಚಿತ್ತವಿಭ್ರಾಂತಾ ಮೋಹಜಾಲಸಮಾವೃತಾಃ।
ಪ್ರಸಕ್ತಾಃ ಕಾಮಭೋಗೇಷು ಪತಂತಿ ನರಕೇಽಶುಚೌ॥
ಆತ್ಮಸಂಭಾವಿತಾಃ ಸ್ತಬ್ಧಾ ಧನಮಾನಮದಾನ್ವಿತಾಃ।
ಯಜಂತೇ ನಾಮಯಜ್ಞೈಸ್ತೇ ದಂಭೇನಾವಿಧಿಪೂರ್ವಕಮ್॥
ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಚ ಸಂಶ್ರಿತಾಃ।
ಮಾಮಾತ್ಮಪರದೇಹೇಷು ಪ್ರದ್ವಿಷಂತೋಽಭ್ಯಸೂಯಕಾಃ॥ - ಗೀತಾ (೧೬/೧೩-೧೮)

ಇಲ್ಲಿಯ ಆಸುರಸ್ವಭಾವದ ಲಕ್ಷಣಗಳು ರಾಮಾಯಣ, ಮಹಾಭಾರತಗಳಲ್ಲಿ ಬಂದಿರುವ ದೈತ್ಯದಾನವರಲ್ಲಿ ಸ್ಫುಟವಾಗಿ ಗೋಚರಿಸುತ್ತವೆ. ರಾಮಾಯಣದ ರಾವಣ, ಕುಂಭಕರ್ಣರು, ಅವರ ಅನುಯಾಯಿಗಳು, ಮಹಾಭಾರತದ ದುರ್ಯೋಧನಾದಿ ಕೌರವರು ಹಾಗೂ ಅವರ ಅನುಯಾಯಿಗಳು ಆಸುರೀಸ್ವಭಾವಕ್ಕೆ ಅತ್ಯುತ್ತಮನಿದರ್ಶನ. ಅವರೆಲ್ಲ ದುರಂತ ಕಂಡದ್ದು ಇತಿಹಾಸ.

ರಾಮಾಯಣದ ರಾವಣ, ಮಹಾಭಾರತದ ದುರ್ಯೋಧನರಲ್ಲಿ ಆಸುರೀಸಂಪತ್ತಿನ ಲಕ್ಷಣಗಳು ಪೂರ್ಣ ಪ್ರಮಾಣದಲ್ಲಿ ಗೋಚರಿಸುವವು. ಭಗವಂತನಾದ ಶ್ರೀರಾಮನನ್ನು ವಿರೋಧಿಸಿ ಅವರನ ಪತ್ನಿಯಾದ ಸೀತೆಯನ್ನು ಬಯಸಿದ ಅವಿವೇಕಿ ರಾವಣ. ಭಗವಂತನನ್ನು ಮರೆತು ಕೇವಲ ಧನಕ್ಕಾಗಿ ಬದುಕುವ ಜನ ಇವನಂತಹವರು. ಅದರ ಫಲವಾಗಿ ಸರ್ವಸ್ವವನ್ನೂ ಕಳೆದುಕೊಂಡ ದುರಂತ ಅವನದಾಯಿತು. ಅವನಿಗೆ ಅವನ ತಂದೆ ತಾಯಿಗಳನ್ನೊಳಗೊಂಡಂತೆ ಸಕಲರೂ ಹಿತವನ್ನು ಬೋಧಿಸಲು ಯತ್ನಿಸಿದರು. ಹನುಂತನ ಉಪದೇಶವಂತೂ ಸರ್ವವಿದಿತ. ಹನುಮಂತನ ಉಪದೇಶವನ್ನು ಅರಿಯಲಾಗದ, ಅನುಸರಿಸಲಾಗದ ಅವನು ಮುಖ್ಯಪ್ರಾಣನ ಸಂದೇಶವನ್ನು ಅರಿಯದೇ ಬದುಕುವ ಜನರ ಸಂಕೇತದಂತಿರುವನು.

ಮಹಾಭಾರತದ ದುರ್ಯೋಧನ ಭೀಮನನ್ನು ವಿರೋಧಿಸಿ ಅವನ ಪತ್ನಿಯಾದ ದ್ರೌಪದಿಯನ್ನು ಬಯಸಿದವನು. ಮುಖ್ಯಪ್ರಾಣನನ್ನು ವಿರೋಧಿಸಿ ಭಾವಿ ಸರಸ್ವತಿಯನ್ನು ಬಯಸಿದವನು. ರಾವಣನಿಂದ ನಡೆದಿದ್ದು ಲಕ್ಷ್ಮೀ ದ್ರೋಹವಾದರೆ ದುರ್ಯೋಧನನಿಂದ ನಡೆದದ್ದು ಸರಸ್ವತಿ ದ್ರೋಹವಾಯಿತು. ಇವನು ಅಂತಹವನೇ. ತಂದೆ ತಾಯಿಗಳು, ಗುರುಹಿರಿಯರು ಮೊದಲಾಗಿ ಯಾರ ಮಾತಿಗೂ ಕಿವಿಗೊಡದ ಜೀವನ ಇವನದು: ವೃದ್ಧಾನಾಂ ಶಾಸನಾತಿಗಃ. ಗುರುಹಿರಿಯರ ಮಾತನ್ನು ಮೀರಿ ನಡೆಯುವುದು ಆಸುರೀ ಪ್ರವೃತ್ತಿಯ ಪ್ರಧಾನ ಲಕ್ಷಣ. ಸ್ವತಃ ಭಗವಂತನಾದ ಶ್ರೀಕೃಷ್ಣನ ಮಾತಿಗೂ ಕಿವಿಗೊಡದ ದುರಂತ ಇವನದು.

ಶ್ರೀರಾಮನ ರಾಯಭಾರಿಯಾದ ಹನುಂತನ ಮಾತಿಗೆ ಕಿವಿಗೊಡದ ರಾವಣ ಸರ್ವ ಬಗೆಯ ಅನರ್ಥವನ್ನು ಕಂಡ. ಭೀಮಾದ ಪಾಂಡವರ ರಾಯಭಾರಿಯಾದ ಶ್ರೀಕೃಷ್ಣನ ಉಪದೇಶ ವಾಣಿಗೆ ಕಿವಿಗೊಡದ ದುರ್ಯೋಧನ ಸರ್ವನಾಸ ಹೊಂದಿದ. ಹರಿವಾಯುಗಳ ಮಾತಿಗೆ ಬೆಲೆಕೊಡದ ಜನರ ದುರಂತಕ್ಕೆ ಇವರಿಬ್ಬರೂ ನಿದರ್ಶನ.

*****

ರಾಮಾಯಣದ ಹನುಮಂತ, ಭರತಶತ್ರುಘ್ನಾದಿಗಳು, ಸುಗ್ರೀವ, ವಿಭೀಷಣ, ಶಬರಿ, ಗುಹ ಮೊದಲಾದ ರಾಮಭಕ್ತರು ಹಾಗೂ ಮಹಾಭಾರತದ ಭೀಮಾದಿ-

ಪಾಂಡವರು, ದ್ರೌಪದೀ, ಕುಂತಿ, ಯಾದವರು ಮೊದಲಾದ ಕೃಷ್ಣಭಕ್ತರು, ಕೌರವಪಕ್ಷದಲ್ಲಿದ್ದೂ ಕೃಷ್ಣಭಕ್ತರಾಗಿದ್ದ ಭೀಷ್ಮ ದ್ರೋಣ, ಕರ್ಣ, ಅಶ್ವತ್ಥಾಮ, ಕೃಪ, ಕೃತವರ್ಮ, ಶಲ್ಯ, ಬಾಹ್ಲೀಕ, ಭಗದತ್ತ, ಭೂರಿಶ್ರವಸ್ ಮೊದಲಾದವರು ಸಹ ದೈವಸ್ವಭಾವದವರು. ಶ್ರೀರಾಮ, ಶ್ರೀಕೃಷ್ಣರಂತೂ ಸಾಕ್ಷಾತ್ ಭಗವದವತಾರರೇ. ಸೀತಾರುಗ್ಮಿಣಿಸತ್ಯಭಾಮೆಯರು ಸಾಕ್ಷಾತ್ ಮಹಾಲಕ್ಷ್ಮಿಯ ಅವತಾರ.

*****

## ಅಸುರರಿಗೊದಗುವ ದುರ್ಗತಿ

ಕ್ರೂರಿಗಳೂ, ಕೇಡಿಗರೂ, ಮನುಷ್ಯಾಧಮರೂ ಆದ ಆಸುರಸ್ವಭಾವದವರನ್ನು ಭಗವಂತನು ಆರಂಭದಲ್ಲಿ ಹೀನಯೋನಿಗಳಲ್ಲಿ ಹಾಕುವನು; ಕೊನೆಗೆ ಅಧೋಗತಿಗೆ ತಳ್ಳುವನು.[೧] ಇದು ವೈಯಕ್ತಿಕದ್ವೇಷದಿಂದಲ್ಲ; ಅವರ ಅಗಾಧದೋಷಗಳಿಗೆ ಶಿಕ್ಷೆಯಾಗಿ ಮಾತ್ರ.

ಇಲ್ಲಿ ಪ್ರಸ್ತಾಪಿತವಾಗಿರುವ ಅಧೋಗತಿ ಈಶಾವಾಸ್ಯಾದಿ ಉಪನಿಷತ್ತುಗಳಲ್ಲೂ, ಭಾಗವತಾದಿಗಳಲ್ಲಿ ಉಲ್ಲೇಖಿಸಲ್ಪಟ್ಟಿರುವ ತಮಸ್ಸು ಅಂಧಂತಮಸ್ಸುಗಳೇ ಆಗಿವೆ. ಅವು ನಿತ್ಯನರಕವೆಂಬುದು ಶಾಸ್ತ್ರಗಳ ಪ್ರತಿಪಾದನೆ.

## ನಿತ್ಯನರಕದ ನಿವೇದನೆ

ನಿತ್ಯನರಕದ ಪರಿಕಲ್ಪನೆ ಮೇಲ್ನೋಟಕ್ಕೆ ಒಂದು ವರ್ಗದ ಜನಕ್ಕೆ ಉದ್ಧಾರವನ್ನು ನಿರಾಕರಿಸುವ ಅಸಮಾನತೆಯಂತೆ ಕಾಣುತ್ತದೆ. ಆದರೆ ಅದು ಸರಿಯಲ್ಲ. ನಿತ್ಯನರಕವೆಂಬುದು ಸಾಮಾನ್ಯ ಅಪರಾಧ ಎಸಗುವ ಜೀವಿಗಳಿಗಾಗಲಿ, ಆಕಸ್ಮಿಕವಾಗಿ ಮಹಾಪರಾಧಕ್ಕೆ ಕೈಹಾಕುವ ಜನಕ್ಕಾಗಲಿ ವಿಧಿಸುವ ಶಿಕ್ಷೆಯಲ್ಲ. ಸದಾ ಕೇಡಿನಲ್ಲೇ ತಮ್ಮ ಸಮಸ್ತಜೀವನವನ್ನು ಕಳೆಯುವ ಮಹಾಪಾತಕಿಗಳಿಗೆ ಮಾತ್ರ ಮೀಸಲಾದ ವಿಶಿಷ್ಟಶಿಕ್ಷೆ. ಲೋಕದ ದೃಷ್ಟಿಯಲ್ಲೂ ಇದರಲ್ಲಿ ಅನ್ಯಾಯವೇನಿಲ್ಲ. ಮಹಾಪಾತಕಿಗೆ ಕಡಿಮೆ ಶಿಕ್ಷೆ ಕೊಟ್ಟಾಗ ಜನ ಪ್ರತಿಭಟಿಸುವರೇ ಹೊರತು, ಕಡಿಮೆ ಶಿಕ್ಷೆ ಕೊಟ್ಟಾಗ ಅಲ್ಲ. ಆಧುನಿಕನ್ಯಾಯಾಲಯಗಳು ವಿಧಿಸುವ ಮರಣದಂಡನೆ, ಜೀವಾವಧಿಶಿಕ್ಷೆಗಳು ಈ ನಿತ್ಯನರಕದ ಪರಿಕಲ್ಪನೆಗಿಂತ ಭಿನ್ನವೇನಲ್ಲ. ಪುನರ್ಜನ್ಮ ಮೊದಲಾದ ಪರಿಕಲ್ಪನೆಗಳನ್ನು ಹೊಂದಿರದ ಇವು ವಿಧಿಸುವ ಶಿಕ್ಷೆ ಆ ಜೀವಿಗೆ ಶಾಶ್ವತಶಿಕ್ಷೆಯೇ ಅಲ್ಲವೆ! ಜೀವಾವಧಿ ಶಿಕ್ಷೆಯಲ್ಲಿ ಒಂದೊಮ್ಮೆ ಕೈದಿ ಹೊರಬರುವ ಅವಕಾಶವಿದ್ದರೂ, ಮರಣದಂಡನೆಯಲ್ಲಿ ಅದಕ್ಕೆ ಸರ್ವಥಾ ಅವಕಾಶವಿರದು. ಕಳೆದ ಜೀವವನ್ನು ಮರಳಿಕೊಡುವ ಶಕ್ತಿ ಈ

೧. ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ।
ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ॥ – ಗೀತಾ (೧೬/೧೯)

ನ್ಯಾಯಾಲಯಕ್ಕೆ ಸರ್ವಥಾ ಇಲ್ಲವಷ್ಟೆ ಅಂದ ಮೇಲೆ ಇವು ಆ ಜೀವಿಯ ಪಾಲಿಗೆ ಕೊಡುವ ಶಿಕ್ಷೆ ಶಾಶ್ವತಶಿಕ್ಷೆಯಲ್ಲದೆ ಮತ್ತೇನು?

ಇನ್ನು ಕೆಲವು ಪಾಪಗಳಿಗೆ ಇಂತಿಷ್ಟು ಶಿಕ್ಷೆ ಎಂದು ಲೆಕ್ಕ ಹಾಕುವ ನ್ಯಾಯಾಲಯ, ಒಬ್ಬ ಅಪರಾಧಿ ನೂರಾರು, ಸಾವಿರಾರು ಕೊಲೆಗಳನ್ನು, ದರೋಡೆಹಿಂಸೆಗಳನ್ನು ಮಾಡಿದಾಗ, ಅವನಿಗೆ ನೀಡಬೇಕಾದ ಶಿಕ್ಷೆಯ ಪ್ರಮಾಣವನ್ನು ಸಾವಿರಾರು ವರ್ಷಗಳ ವರೆಗೆ ವಿಸ್ತರಿಸುತ್ತದೆ. ಭಗವದ್ಗೀತೆಯ ವಿವರಣೆಯಂತೆ ಒಬ್ಬ ಜೀವಿಗೆ ಅನೇಕ ಪುನರ್ಜನ್ಮಗಳುಂಟು. ಒಬ್ಬ ಪರಮಪಾಪಿಯು ಅನಾದಿಕಾಲದಿಂದ ಪ್ರತಿಜನ್ಮದಲ್ಲೂ ಸಾವಿರಾರು ವರ್ಷಗಳ ಶಿಕ್ಷೆಗಾಗುವಷ್ಟು ಅಪರಾಧಗಳನ್ನೆಸಗಿದಾಗ, ಒಂದು ಕಾಲದಲ್ಲಿ ಅದು ನಿತ್ಯನರಕಶಿಕ್ಷೆಯಾಗದೆ ವಿಧಿಯೇ ಇಲ್ಲ. ವಾಲ್ಮೀಕಿರಾಮಾಯಣದಲ್ಲಿ ಕ್ರೌಂಚ-ಮಿಥುನದಲ್ಲಿ ಗಂಡನ್ನು ಹೊಡೆದುರುಳಿಸಿದ ಕ್ರೂರವ್ಯಾಧನಿಗೆ ವಾಲ್ಮೀಕಿ ನೀಡಿದ ಶಾಪರೂಪದ ಶಿಕ್ಷೆಯೂ ಈ ಬಗೆಯದೇ ಅಲ್ಲವೆ! ಎಂದರೆ ನಿತ್ಯನರಕ ಪರಮಪಾಪಿಗಳಿಗೆ ವಿಹಿತವಾಗುವುದರಲ್ಲಿ ಅಪಚಾರವಾಗಲಿ, ಅನ್ಯಾಯವಾಗಲಿ, ಎಷ್ಟು ಮಾತ್ರಕ್ಕೂ ಇರದು.

ಇಲ್ಲಿ ಮತ್ತೊಂದು ಪ್ರಶ್ನೆ. ಪರಮಪಾಪಿಗೆ ಉದ್ಧಾರಕ್ಕೆ ಅವಕಾಶವೇ ಇಲ್ಲವೇ? ಈ ಪ್ರಶ್ನೆಗೆ ಹೀಗೆ ಸ್ಪಷ್ಟೀಕರಣ ಕೇಳಬೇಕಾಗುತ್ತದೆ: ಅಂತಹ ಪಾಪಿ ತನ್ನ ದುಷ್ಕೃತ್ಯಕ್ಕೆ ಪಶ್ಚಾತ್ತಾಪ ಪಟ್ಟು ಉದ್ಧಾರವಾಗಲು ಬಯಸುವನೊ? ಅಥವಾ ಇಲ್ಲವೋ? ಅವನು ಬಯಸುವನೆಂದಾದರೆ, ಅವನ ಉದ್ಧಾರಕ್ಕೆ ಖಂಡಿತ ಅವಕಾಶವಿದೆ. ಈ ಮಾತು ಗೀತೆಯಲ್ಲಿ ಈಗಾಗಲೇ ಬಂದಿದೆ ('ಅಪಿ ಚೇತ್ ಸುದುರಾಚಾರೋ......'). ಇನ್ನು ಪಶ್ಚಾತ್ತಾಪ ಪಡದೆ, ತನ್ನ ದುಷ್ಕೃತ್ಯಗಳನ್ನೇ ಸಮರ್ಥಿಸಿಕೊಳ್ಳುವ ಪರಮಪಾಪಿಗೆ ಮಾತ್ರ ಅವಕಾಶ ಸರ್ವಥಾ ಇಲ್ಲವೇ ಇಲ್ಲ ಎನ್ನುವುದೇ ಉತ್ತರ. ಇಲ್ಲಿ ಭಗವಂತ ಹೇಳುತ್ತಿರುವುದು ಅದನ್ನೇ. ಜನ್ಮಜನ್ಮಗಳಲ್ಲೂ ಕೇಡಿನ ಸ್ವಭಾವದ ಅವನಿಗೆ ಅಧೋಗತಿ ನಿಶ್ಚಿತ. ಸದ್ಗತಿ ಅವನಿಗೇ ಬೇಕಿಲ್ಲದಾಗ, ಅವನಿಗೆ ಅದನ್ನು ಕೊಡುವುದಾದರೂ ಏತಕ್ಕೆ?

ಇನ್ನು ಭಗವಂತ ಇಲ್ಲಿ ತಿಳಿಸುತ್ತಿರುವುದು ಜೀವಿಯ ಸಹಜಲಕ್ಷಣಗಳನ್ನು, ಎಂದರೆ ಎಂದೂ ಬದಲಾಗದ ಲಕ್ಷಣಗಳನ್ನು. ಅವನು ಬದಲಾದನೆಂಬ ಪ್ರಶ್ನೆಗೆ ಅವಕಾಶವೇ ಇರುವುದಿಲ್ಲ. ಸ್ವರೂಪ ಬದಲಾಗುವುದು ಎಂದರೆ ಅರ್ಥವೂ ಇಲ್ಲ. ಹಾಲು ಕಪ್ಪಾದರೆ, ಬೇವು ಸಿಹಿಯಾದರೆ ಎಂದು ಕೇಳುವಂತೆಯೇ ಇದು. ಸ್ವರೂಪದ ಪರಿಕಲ್ಪನೆಯ ಸ್ಪಷ್ಟ ಅರಿವು ಇದ್ದವರಿಗೆ ಈ ಬಗ್ಗೆ ಯಾವ ಗೊಂದಲವೂ ಇರದು.

ಇನ್ನು ಕೊನೆಯ ಪ್ರಶ್ನೆ. ಭಗವಂತನಿಗೆ ಅಂತಹ 'ಕೇಡಿಗನ ಸ್ವಭಾವವನ್ನು ಬದಲಿಸಲು ಸಾಧ್ಯವಿದೆಯೊ? ಇಲ್ಲವೊ?'; ಇದು ಭಗವಂತನ ಸಾಮರ್ಥ್ಯದ ಬಗೆಗಿನ ಪ್ರಶ್ನೆಯಾದರೆ,

'ಉಂಟು' ಎಂಬುದೇ ಖಚಿತ ಉತ್ತರ. ಆದರೆ ಅವನು ಹಾಗೆ ಮಾಡುವನೋ ಎಂದು ಕೇಳಿದರೆ, ಸ್ವರೂಪವನ್ನು ಸಂರಕ್ಷಿಸುವ ಸಂಕಲ್ಪದ ಅವನು ಹಾಗೆ ಮಾಡಲಾರ ಎಂಬುದೇ ಸಿದ್ಧಾಂತ. ಇಲ್ಲಿ ಶ್ರೀಕೃಷ್ಣನು ಸ್ಪಷ್ಟಪಡಿಸಿರುವುದು ಅದನ್ನೇ.

*****

## ನರಕ – ಮೋಕ್ಷಗಳ ಹಾದಿಗಳು

ಭಗವಂತ ಮುಂದುವರೆದು ತಿಳಿಸುತ್ತಾನೆ. ನರಕದ ಹಾದಿಗಳು ಮೂರು : ಕಾಮ, ಕ್ರೋಧ ಹಾಗೂ ಲೋಭ.[೧] ಕಾಮವೆಂದರೆ ದುರಾಸೆ; ಕ್ರೋಧ ಅದು ಈಡೇರದಿದ್ದಾಗ ಹುಟ್ಟುವ ಸಿಟ್ಟು; ಲೋಭ, ಆ ದುರಾಸೆಯನ್ನು ಎಂದೂ ಬಿಡಲಾರೆ ಎಂಬ ಛಲ. ಈ ಮೂರರೊಂದಿಗೆ ಮೋಹ, ಮದ ಮತ್ತು ಮತ್ಸರ ಎಂಬ ಇತರ ಮೂರು ದೋಷಗಳನ್ನು ಸೇರಿಸಿಕೊಳ್ಳಬೇಕು. ಈ ಆರನ್ನೂ ಒಟ್ಟಾಗಿ ಅರಿಷಡ್ವರ್ಗ (ಸಾಧನೆಗೆ ಅಡ್ಡಿಯಾಗುವ ಆರು ಮಹಾಶತ್ರುಗಳು) ಎನ್ನುವರು. ನರಕದಿಂದ ಪಾರಾಗಬಯಸುವವನು ಈ ಆರು ದೋಷಗಳನ್ನು ತೊರೆಯಲೇಬೇಕು.

ಭಾಗವತದ ಅತ್ರಿಮುನಿಗಳ ಕಥೆ ಇದರ ವ್ಯಾಖ್ಯೆಯಂತಿದೆ. ಅತ್ರಿಮುನಿಗಳು ಅನಸೂಯೆಯೊಂದಿಗೆ ಮಾಡಿದ ತೀವ್ರತಪಸ್ಸಿಗೆ ಬ್ರಹ್ಮ ವಿಷ್ಣು ಮಹೇಶ್ವರರು ಪ್ರತ್ಯಕ್ಷರಾಗುವರು. ಅವರ ಬಯಕೆಯಂತೆ ಸಂತತಿಯನ್ನು ಕರುಣಿಸುವರು. ವಿಷ್ಣುವು ದತ್ತಾತ್ರೇಯನಾಗಿಯೂ, ಶಿವನು ದುರ್ವಾಸಮುನಿಯಾಗಿಯೂ ಅವತರಿಸುವರು. ಬ್ರಹ್ಮನಿಗೆ ಅವತಾರವಿಲ್ಲದ್ದರಿಂದ ಚಂದ್ರನು ಅವತರಿಸಿದನು. ಅವನಲ್ಲಿ ಬ್ರಹ್ಮನ ಸನ್ನಿಧಾನ. ಹೀಗೆ ತ್ರಿಮೂರ್ತಿಗಳನ್ನು ಪುತ್ರತ್ವೇನ ಪಡೆದ ಅತ್ರಿ, ಅನಸೂಯೆಯರ ಬಾಳು ಪರಮಸಾರ್ಥಕವಾಯಿತು. ಇಲ್ಲಿ ಅತ್ರಿ ಎಂದರೆ **'ನ ವಿದ್ಯಂತೇ ತ್ರೀಣಿ ಯಸ್ಯ ಸಃ'** – ಮೂರಿಲ್ಲದವನು ಎಂದರ್ಥ. ಅವು ಇಲ್ಲಿ ಬಂದಿರುವ ಕಾಮ, ಕ್ರೋಧ ಹಾಗೂ ಲೋಭ ಎಂಬ ದೋಷಗಳು. ಅವಿಲ್ಲದಾಗ ಜೀವ ಅತ್ರಿ ಎನ್ನಿಸುವನು. ಅನಸೂಯಾ ಅತ್ರಿಯ ಪತ್ನಿ. ಜೀವ ಪುರುಷನಾದರೆ, ಬುದ್ಧಿ ಅವನ ಪತ್ನಿ ಎಂದಿದೆ ಮಹಾಭಾರತ. ಅನಸೂಯೆ ಅತ್ರಿಯ ಪತ್ನಿಯೆಂದರೆ ಜೀವನ ಬುದ್ಧಿಯೆಂದರ್ಥ. ಅವಳು ಅನಸೂಯೆ; ಅನಸೂಯಾ ಎಂದರೆ **'ನ ವಿದ್ಯತೇ ಅಸೂಯಾ ಯಸ್ಯಾಃ ಸಾ'** – ಅಸೂಯೆ ತೊರೆದವಳು ಎಂದರ್ಥ. ಅಸೂಯೆ ಬುದ್ಧಿಯ ದೋಷ ಎಂಬುದು ಪ್ರಸಿದ್ಧ. ಹೊಟ್ಟೆಕಿಚ್ಚಿನ ಬುದ್ಧಿ ಎಂದೇ ಲೋಕೋಕ್ತಿಯೂ ಇದೆ. ಜೀವನು ಕಾಮಾದಿ ಮೂರು ದೋಷಗಳನ್ನು ತೊರೆದು, ಅವನ ಬುದ್ಧಿಗೆ ಅಸೂಯೆ ಇಲ್ಲವಾದಲ್ಲಿ ಸಾರ್ಥಕವಾದ ತ್ರಿವಿಧಸಂತತಿಯ ಪ್ರಾಪ್ತಿ ಎಂದು ಇದರ

---

೧. ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ।
ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ ತ್ರಯಂ ತ್ಯಜೇತ್ ॥ – ಗೀತಾ (೧೬/೨೧)

ಭಾವ. ಬ್ರಹ್ಮ ವಿಷ್ಣು ಮಹೇಶ್ವರರು ಅವರಿಗೆ ಪುತ್ರರಾಗಿ ಜನಿಸಿದ್ದರ ಅರ್ಥವೂ ಇದೇ. ಬ್ರಹ್ಮ ಹಿಂದಿನ ಕಲ್ಪದ ಹನುಮಂತ(ವಾಯು); ಆತ ಭಕ್ತಿಯ ಸಂಕೇತ. ವಿಷ್ಣು ಪರಬ್ರಹ್ಮ ಭಗವದ್ಗೀತೆ ಉಪದೇಶಿಸಿದ ಕೃಷ್ಣ ಅವನೇ, ಅವನು ಜ್ಞಾನದ ಸಂಕೇತ. ಶಿವ ವೈರಾಗ್ಯದ ಅಧಿದೇವತೆ. ಹೀಗೆ ಈ ಮೂವರು ಜ್ಞಾನ, ಭಕ್ತಿ, ವೈರಾಗ್ಯಗಳ ಸಂಕೇತ. ಇದರಿಂದಲೇ ಸಕಲರಿಗೂ ಸದ್ಗತಿ. ಕಾಮಕ್ರೋಧಲೋಭ ಎಂಬ ತ್ರಿವಿಧದೋಷವನ್ನು ತೊರೆದವರಿಗೆ ಜ್ಞಾನಭಕ್ತಿವೈರಾಗ್ಯಗಳೆಂಬ ತ್ರಿವಿಧ ಸಂಪತ್ತಿನ ಪ್ರಾಪ್ತಿ ಎಂಬುದು ಮಥಿತಾರ್ಥ.

*****

ಗೀತೆ ಕಾಮಾದಿದೋಷಗಳ ತ್ಯಾಗದ ಫಲವನ್ನಾಗಿ ಹೇಳಿರುವ ಶ್ರೇಯಸ್ಸು ಎಂದರೆ ಇದೇ. ಇದರಿಂದ ದೊರೆಯುವುದು ಪರಮಗತಿಯಾದ ಮೋಕ್ಷವೇ ಆಗಿದೆ.

## ಶಾಸ್ತ್ರಪರಿಜ್ಞಾನ ಅನಿವಾರ್ಯ

ಶಾಸ್ತ್ರವಿಧಿಯನ್ನು ಮೀರಿ ಮನಬಂದಂತೆ ಬದುಕುವವನಿಗೆ ಎಂದೂ ಸಿದ್ಧಿಯು ಲಭಿಸದು. ಅವನಿಗೆ ಸುಖವೂ ದೊರೆಯದು; ಪರಗತಿಯೂ ಸಿಕ್ಕದು. ಈ ಮಾತಿನಲ್ಲಿ ಶಾಸ್ತ್ರವಿಧಿಯ ಅನುಸರಣೆಯ ಹಿರಿಮೆ ಪ್ರತಿಪಾದಿತವಾಗಿದೆ. ಅನೇಕರು ಶಾಸ್ತ್ರವಿಧಿಯನ್ನು ತಮಗೆ ಸಲ್ಲದ್ದನ್ನು ವಿಧಿಸುವ ವೈರಿ ಎಂದೇ ಭಾವಿಸುವುದುಂಟು. ಭಗವಂತ ಆ ತಪ್ಪು ಕಲ್ಪನೆಯನ್ನು ಇಲ್ಲಿ ನಿವಾರಿಸುತ್ತಿರುವನು. ಶಾಸ್ತ್ರವಿಧಿಯ ಪಾಲನೆ ಸಿದ್ಧಿಸಂಪಾದನೆಗೆ ರಾಜಮಾರ್ಗ; ಪರಗತಿಗೆ ಭವ್ಯಸೋಪಾನ. ಲೋಕದಲ್ಲಿನ ನೀತಿನಿಯಮಗಳು ಹೇಗೋ, ಹಾಗೆ; ಸಂಚಾರನಿಯಮಗಳಂತೆ ಸಹ. ಸಂಚಾರನಿಯಮದ ಪಾಲನೆ ಸುಖಪ್ರಯಾಣಕ್ಕೂ ಗುರಿ ತಲುಪುವುದಕ್ಕೂ ನೆರವಾಗುವಂತೆ ಶಾಸ್ತ್ರನಿಯಮಗಳು ಯಶಸ್ಸಿನ ಸೋಪಾನ. ಸಂಚಾರನಿಯಮಗಳ ಉಲ್ಲಂಘನೆ ಅಪಘಾತದ ಮೂಲಕ ಪ್ರಾಣಹಾನಿ, ಅಂಗ-ವೈಕಲ್ಯಾದಿಗಳಿಗೆ ಹಾದಿ. ಶಾಸ್ತ್ರವಿಧಿಯ ಉಲ್ಲಂಘನೆಯ ಅಪಾಯವೂ ಇಂತಹುದೇ. ಒಟ್ಟಾಗಿ ಶಾಸ್ತ್ರನಿಯಮಗಳ ಉದ್ದೇಶ ಸುಖಸಂತೋಷಗಳಿಗೆ ದಾರಿ ತೋರುತ್ತಾ, ದುಃಖ, ಆತಂಕಗಳನ್ನು ನಿವಾರಿಸುವುದೇ ಆಗಿದೆ.

*****

ಆದ್ದರಿಂದ ಪ್ರತಿಯೊಬ್ಬರಿಗೂ ಕಾರ್ಯಾಕಾರ್ಯಗಳ ವ್ಯವಸ್ಥೆಗೆ ಶಾಸ್ತ್ರವೇ ಆಧಾರ. ಶಾಸ್ತ್ರದ ವಿಧಿವಿಧಾನಗಳನ್ನು ತಿಳಿದುಕೊಂಡು, ಕರ್ತವ್ಯ ಆಚರಿಸುವುದೇ ಪ್ರತಿಯೊಬ್ಬರಿಗೂ ವಿಹಿತ.

*****

ಕರ್ತವ್ಯಜಿಜ್ಞಾಸೆ ಸುಖೀಜೀವನದ ಪರಿಕಲ್ಪನೆಯುಳ್ಳ ಪ್ರತಿಯೊಬ್ಬರಿಗೂ ಅನಿವಾರ್ಯ. ಲೌಕಿಕಯಶಸ್ಸಿನ ಕಾರ್ಯಾಕಾರ್ಯಗಳ ವಿವರಗಳನ್ನು

ಲೋಕನೀತಿಯಿಂದ ಸಾಮಾಜಿಕ ನೀತಿನಿಯಮಗಳಿಂದ ತಿಳಿಯಬಹುದು. ಆದರೆ ಲೌಕಿಕವನ್ನು ಮೀರಿದ ಮತ್ತೊಂದು ಲೋಕವುಂಟು. ಪಾರಲೌಕಿಕವೆಂದರೆ ಅದೇ. ಸಾವಿನವರೆಗಿನ ಲೌಕಿಕವೆನ್ನಿಸಿದರೆ, ಅನಂತರದ ಜೀವನ ಪಾರಲೌಕಿಕ. ಲೌಕಿಕಬದುಕಿನ ಸುಖಸಂತೋಷಗಳಿಗೆ ಮನೆ, ಅನ್ನ, ವಸ್ತ್ರಗಳ ಪರಿಕಲ್ಪನೆ ಸಾಕು; ಆದರೆ ಇವು ಯಾವುವೂ ಪಾರಲೌಕಿಕಜೀವನಕ್ಕೆ ಸಾಕೆನ್ನಿಸವು. ಅದನ್ನು ತಿಳಿಯುವ ಆಕಾಂಕ್ಷೆ ನಮ್ಮದಾದರೂ, ತಿಳಿಸುವ ಶಕ್ತಿ ಬೇರಾವ ಲೌಕಿಕಸಾಧನಕ್ಕೂ ಇಲ್ಲ. ಲೌಕಿಕಜ್ಞಾನವು ವಿಜ್ಞಾನವೂ ಸೇರಿದಂತೆ ಭೌತಿಕಜಗತ್ತಿಗೆ ಸೀಮಿತವಾದುದು. ಅದರಾಚೆ ಅದೇನೂ ಹೇಳದು; ಹಾಗೆ ಹೇಳಲು ಅವಕ್ಕೆ ತಿಳುವಳಿಕೆಯೂ ಸಾಲದು.

ಹಾಗಿದ್ದರೆ ಅದರ ಪರಿಜ್ಞಾನಕ್ಕೆ ಸಾಧನ ಯಾವುದು? ಇದು ಪ್ರಶ್ನೆ. ಅದಕ್ಕೆ ಗೀತೆ ನೀಡಿರುವ ಉತ್ತರ ಇದು : ಶಾಸ್ತ್ರವೇ ಆ ತಿಳುವಳಿಕೆಗೆ ಸಾಧನ. ಶಾಸ್ತ್ರವೆನ್ನುವುದೂ ಅದಕ್ಕೇ – 'ಶಿಷ್ಯತೇ ತತ್ತ್ವಂ ಅನೇನ'. ಶಾಸ್ತ್ರವೆಂಬುದು ಯಾವುದೇ ಮತೀಯಗ್ರಂಥಕ್ಕೆ ಅನ್ವಯಿಸುವ ಮಾತಲ್ಲ. ಕಾರಣ ಮತೀಯಗ್ರಂಥದ ಲೇಖಕ ನಮ್ಮಂತೆ ಸೀಮಿತ ಜ್ಞಾನ, ಅನುಭವಗಳ ವ್ಯಕ್ತಿ. ಎಂದರೆ ನಮಗೆ ತಿಳಿಯದ್ದನ್ನು ಅವನು ತಿಳಿಸುವ ಸಂಭವ ಇರದು. ಅಲ್ಲಿ ಮೋಸ, ವಂಚನೆಗಳಿಗೆ ಅವಕಾಶವಿರಬಹುದು ಸಹ. ಯಾವುದೇ ವ್ಯಕ್ತಿ ಬರೆದ ಮಾತಿಗೂ ಈ ಮಾತು ಅನ್ವಯಿಸುವಂತಹುದು. ಅಪೌರುಷೇಯ ವೇದಗಳು ಈ ಅರ್ಥದಲ್ಲಿ ನಿಜವಾದ ಶಾಸ್ತ್ರ. ಅಪೌರುಷೇಯವೆಂದರೆ ನಿತ್ಯಶಾಸ್ತ್ರ ಎಂದರ್ಥ. ಆದ್ದರಿಂದಲೇ ಅವುಗಳಲ್ಲಿ ಸುಳ್ಳು, ವಂಚನೆಗೆ ಅವಕಾಶವಿರದು. ಅದರಂತೆ ಅವುಗಳು ಒಪ್ಪುವ ಮಹಾಭಾರತ, ಪುರಾಣಾದಿಗಳು ಸಹ ಶಾಸ್ತ್ರವೇ. ಅವುಗಳಲ್ಲಿ ಹೇಳಿದ್ದನ್ನು ನಡೆಸುವುದೇ ಖಚಿತ ಪರಲೋಕಸುಖದ ಸಾಧನ. ಅದನ್ನು ಅರಿತು ಅದರಂತೆ ನಡೆಯುವುದೇ ಸಕಲಸಾಧಕರ ಕರ್ತವ್ಯ.

ಆಧುನಿಕ ಜೀವನ ಶೈಲಿಯಲ್ಲಿ ನಾಸ್ತಿಕ್ಯಕ್ಕೆ ಅಗ್ರಸ್ಥಾನ ಲಭಿಸಿದೆ. ಸೋಗಿನ ಸಾಧು,ಸಂತರನ್ನು ಶ್ರದ್ಧೆಯಿಂದ ಓಲೈಸುವ ಇಂದಿನ ಜನ ವೇದೋಪನಿಷತ್ತುಗಳು ಸಾರುವ ಭಗವಂತನನ್ನು , ಭಗವದ್ಭಕ್ತರನ್ನು ಅಣಕ ಮಾಡುವ ಪ್ರವೃತ್ತಿಯನ್ನು ಬೆಳೆಸಿಕೊಂಡಿರುವರು. ಕಾರಣವಿಲ್ಲದೇ ಕಂಡವರ ಮಾತನ್ನು ನಂಬುವ ಇಂತಹವರು ಶಂಕೆಗೆ ಅವಕಾಶವೇ ಇರದ ರಾಮಾಯಣ ಮಹಾಭಾರತಗಳ ಬಗ್ಗೆ ಕುಹುಕದ ಮಾತುಗಳನ್ನಾಡುವುದು ಎಂತಹ ಅವಿವೇಕ ! ಇಂದಿನ ಹಿರಿಯರೂ ಸಹ ಅಂತಹವರೆ. ಅನ್ನ, ಬಟ್ಟೆ ಕೊಡವುದಷ್ಟೆ ತಮ್ಮ ಕರ್ತವ್ಯವೆಂಬಂತೆ ಭಾವಿಸಿ ಚಿಂತನೆಯ ಪ್ರಪಂಚನದಿಂದ ಮಕ್ಕಳನ್ನು ದೂರವೇ ಇರಿಸುವ ಪ್ರವೃತ್ತಿ ಇವರದ್ದು. ಜೀವನದ ಉಸಿರಾದ ಅಧ್ಯಾತ್ಮದ ಬಗ್ಗೆ ಸ್ವಲ್ಪವೂ ಎಚ್ಚರವನ್ನು ವಹಿಸಿದ ಇವರ ರೀತಿ ಭಗವನ್ವಿಮುಖವಾದ ಜೀವನಕ್ಕೆ ಎಡೆ ಮಾಡಿಕೊಡುವುದು. ಮೌಲ್ಯಗಳ ಪರಿಜ್ಞಾನದಿಂದ ವಂಚಿತವಾಗುವ ಸಮಾಜ ಅಸತ್ಯ,

ಅಧರ್ಮಗಳತ್ತ ವಾಲಿ ನಿಜವಾದ ಸುಖ ಸಂತೋಷಗಳಿಂದ ಶಾಶ್ವತವಾಗಿ ವಂಚಿತವಾಗುವಂತಾಗಿದೆ. ಋಣಂ ಕೃತ್ವಾ ಘೃತಂ ಪಿಬೇತ್, ಸಾಲ ಮಾಡಿ ತುಪ್ಪ ತಿನ್ನು ಎನ್ನುವ ಸಂದೇಶ ಚಾರ್ವಾಕನಾದರೆ ಭ್ರಷ್ಟಾಚಾರ ಮಾಡಿ ಸಂಪತ್ತನ್ನು ಗಳಿಸುವುದು ಇಂದಿನ ಸಮಾಜದ ಮೂಲಮಂತ್ರದಂತಾಗಿದೆ. ಭಗವದ್ಗೀತೆ ಈ ಅಧ್ಯಾಯದ ಚಿಂತನೆ ಹೊಸ ಪ್ರಪಂಚದ ದರ್ಶನಕ್ಕೆ ದಾರಿ ದೀಪದಂತಿದೆ.

*****

# ಅಧ್ಯಾಯ - ೧೭

## ಶಾಸ್ತ್ರದ ವಿಧಿವಿಧಾನಗಳನ್ನು ಅರಿಯದವರ ಗತಿ ಏನು?

ಶಾಸ್ತ್ರಗಳ ವಿಧಿವಿಧಾನಗಳನ್ನು ಮೀರಿ ನಡೆಯುವವರ ಗತಿಯ ಚಿಂತನೆಯನ್ನು ಹದಿನಾರನೆಯ ಅಧ್ಯಾಯದಲ್ಲಿ ವಿವರಿಸಲಾಯಿತು. ಕೆಲವರು ಶಾಸ್ತ್ರದ ವಿಧಿವಿಧಾನಗಳನ್ನು ತಿಳಿದಿರುವುದೇ ಇಲ್ಲ, ಕಾರಣಾಂತರದಿಂದ ಅವರಿಗೆ ತಿಳಿಯುವ ಸಂಭವವೂ ಇರುವುದಿಲ್ಲ. ಆದರೂ, ಅವರು ಯಾವುದೋ ನಂಬಿಕೆಯ ಹಿನ್ನೆಲೆಯಲ್ಲಿ ತಮ್ಮ ಬದುಕನ್ನು ಸಾಗಿಸುತ್ತಿರುವರು. ಅಂತಹವರ ಗತಿ ಯಾವುದು? ಸಾತ್ತ್ವಿಕವೊ, ರಾಜಸವೊ, ತಾಮಸವೊ? ಎಂಬುದು ಇಲ್ಲಿ ಅರ್ಜುನನ ಪ್ರಶ್ನೆ.[೧] ಲೋಕದಲ್ಲಿ ಹೆಚ್ಚು ಜನ ಇಂಥವರೇ ಕಾಣಸಿಗುವುದು ಇಂತಹ ಪ್ರಶ್ನೆಗೆ ಮೂಲ.

*****

ಅನೇಕರು ಇಲ್ಲಿಯ 'ಶಾಸ್ತ್ರವಿಧಿಮುತ್ಸೃಜ್ಯ' ಎಂಬ ಮಾತಿಗೆ 'ಶಾಸ್ತ್ರದ ವಿಧಿಯನ್ನು ಮೀರಿ ನಡೆಯುವವರ ಗತಿ ಯಾವುದು?' ಎಂಬುದಾಗಿಯೇ ವ್ಯಾಖ್ಯಾನಿಸಿರುವುದುಂಟು. ಶ್ರೀಮಧ್ವಾಚಾರ್ಯರು ಆ ವ್ಯಾಖ್ಯಾನವನ್ನು ಅಂಗೀಕರಿಸುವುದಿಲ್ಲ. ಆ ಪ್ರಶ್ನೆಗೆ ಹಿಂದಿನ ಅಧ್ಯಾಯದ ಕೊನೆಯಲ್ಲಿ, ಹಾಗೆ ಶಾಸ್ತ್ರ ಮೀರಿ ನಡೆಯುವವನು 'ಸಿದ್ಧಿ, ಸುಖ, ಪರಗತಿಗಳನ್ನು ಕಾಣಲಾರ' ಎಂದು ಉತ್ತರಿಸಿಯಾಗಿದೆ. ಎಂದ ಮೇಲೆ ಆ ಪ್ರಶ್ನೆಗೆ ಇಲ್ಲಿ ಅವಕಾಶವೇ ಇರದು. ಆದ್ದರಿಂದ ಇಲ್ಲಿ 'ಉತ್ಸೃಜ್ಯ' ಎಂಬುದಕ್ಕೆ 'ಉಲ್ಲಂಘಿಸಿ' ಎಂದು ಅರ್ಥಮಾಡದೆ, 'ತಿಳಿಯದೆ' ಎಂದೇ ಅರ್ಥ ಮಾಡಬೇಕು ಎಂಬುದು ಅವರ ಆಶಯ. ಹದಿನೇಳನೆಯ ಅಧ್ಯಾಯದ [೨]ವಿವರಗಳೆಲ್ಲ ಅವರ ಆಶಯಕ್ಕೆ ಅನುಗುಣವಾಗಿಯೇ ನಿರೂಪಿತವಾಗಿವೆ ಎಂಬುದು ಗಮನಾರ್ಹ.

## ಜೀವಸ್ವಭಾವದ ತ್ರೈವಿಧ್ಯ

ಈ ಪ್ರಶ್ನೆಗೆ ಭಗವಂತನು ನೀಡಿದ ಉತ್ತರ ಇದು. ಪ್ರಾಣಿಗಳ ಶ್ರದ್ಧೆ ಅವುಗಳ ಸ್ವಭಾವಜನ್ಯವಾದದ್ದು. ಸಾತ್ತ್ವಿಕ, ರಾಜಸ, ತಾಮಸ ಎಂಬುದಾಗಿ ಅದರಲ್ಲಿ ಮೂರು ಬಗೆ. [೩]ಸಕಲಜೀವಿಗಳ ಶ್ರದ್ಧೆಯೂ ಅವರವರ ಸ್ವರೂಪಕ್ಕೆ ಅನುಗುಣವಾಗಿಯೇ

---

೧. ಯೇ ಶಾಸ್ತ್ರವಿಧಿಮುತ್ಸೃಜ್ಯ ಯಜಂತೇ ಶ್ರದ್ಧಯಾಽನ್ವಿತಾಃ।
ತೇಷಾಂ ನಿಷ್ಠಾ ತು ಕಾ ಕೃಷ್ಣ ಸತ್ತ್ವಮಾಹೋ ರಜಸ್ತಮಃ॥ – ಗೀತಾ (೧೭/೧)

೨. ಗುಣಭೇದಾನ್ ಪ್ರಪಂಚಯತ್ಯನೇನಾಧ್ಯಾಯೇನ। – ಗೀ. ಭಾ.
ಸದಸತ್ಕರ್ಮವಿವೇಕಃ। – ಗೀ. ತಾ.

೩. ತ್ರಿವಿಧಾ ಭವತಿ ಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ।
ಸಾತ್ತ್ವಿಕೀ ರಾಜಸೀ ಚೈವ ತಾಮಸೀ ಚೇತಿ ತಾಂ ಶೃಣು॥ – ಗೀತಾ (೧೭/೨)

ಇರುವುದು. ಪ್ರತಿಯೊಬ್ಬ ಜೀವಿಯೂ ಒಂದಲ್ಲ ಒಂದು ವಿಧವಾದ ಶ್ರದ್ಧೆ ಹೊಂದಿರುವವನೇ. ಅವನ ಸ್ವಭಾವ ಅವನ ಶ್ರದ್ಧೆಗೆ ಅನುಗುಣವಾಗಿಯೇ ಇರುವಂತಹುದು.[೧]

*****

ಶ್ರದ್ಧೆ ಎಂದರೆ ನಂಬಿಕೆ ಎಂದರ್ಥ. ಪ್ರತಿಯೊಬ್ಬ ಜೀವಿಗೂ ಒಂದಲ್ಲ ಒಂದು ವಿಧವಾದ ನಂಬಿಕೆ ಇದ್ದೇ ಇರುವುದು ಯಾವ ನಂಬಿಕೆಯೂ ಇರದ ಜೀವ ಇರುವುದು ಸಾಧ್ಯವೇ ಇಲ್ಲ. 'ಯಾವುದನ್ನೂ ನಂಬಲಾರೆ' ಎಂಬುದೂ ಒಂದು ನಂಬಿಕೆಯೇ ಅಲ್ಲವೆ? ಅಂತಹ ನಂಬಿಕೆಗೆ ಮೂಲವಾಗಿರುವುದು ಮುಖ್ಯವಾಗಿ ಆಯಾ ಜೀವಿಗಳ ಸ್ವಭಾವವೇ ಎಂಬುದು ಇಲ್ಲಿಯ ಪ್ರತಿಪಾದನೆ.

*****

## ತ್ರಿವಿಧಜೀವರ ಲಕ್ಷಣಗಳು

ಸಾತ್ತ್ವಿಕಜೀವಿಗಳು[೨] ದೇವತೆಗಳನ್ನು, ರಾಜಸಜೀವಿಗಳು ಯಕ್ಷರಾಕ್ಷಸರನ್ನು, ತಾಮಸಜೀವರು ಭೂತಪ್ರೇತಗಳನ್ನು ಆರಾಧಿಸುವರು. ಇದೊಂದು ಮಹತ್ತ್ವ-ಪೂರ್ಣವಾದ ವಿವರ. ಯಾವುದೇ ವಿಧವಾದ ಶಾಸ್ತ್ರ ಅಥವಾ ಶಾಸ್ತ್ರಜ್ಞರ ಸಂಪರ್ಕವಿಲ್ಲದ ವ್ಯಕ್ತಿಯೂ ಸಹ ತನ್ನದೇ ಆದ ಒಂದು ಆರಾಧನಾಕ್ರಮವನ್ನು ರೂಢಿಸಿಕೊಂಡಿರುತ್ತಾನೆ. ಅದಕ್ಕೆ ಮೂಲ ಅವನ ಸ್ವರೂಪವೇ. ಸಾತ್ತ್ವಿಕಚೇತನ ಯಾರ ಪ್ರೇರಣೆಯೂ ಇಲ್ಲದೆ, ಸಹಜವಾಗಿಯೇ ದೇವತೆಗಳ ಆರಾಧನೆಯಲ್ಲಿ ತೊಡಗಿರುತ್ತದೆ. ರಾಜಸಜೀವನ ಮನಸ್ಸು ಯಕ್ಷರಾಕ್ಷಸರ ಕಡೆಗೆ ವಾಲಿದರೆ, ತಾಮಸಚೇತನನ ಒಲವು ಭೂತಪ್ರೇತಗಳ ಆರಾಧನೆಗೆ ತೊಡಗುತ್ತದೆ. ತಾಮಸರ ತಪಸ್ಸೂ ಸಹ ಭಯಂಕರವಾದುದು. ದಂಭ, ಅಹಂಕಾರಗಳೇ ಅವರಲ್ಲಿ ತುಂಬಿರುವವು. ಆಸೆ, ಆಕಾಂಕ್ಷೆಗಳ ಒತ್ತಡ ಅವರ ತಪಸ್ಸಿಗೆ ಹಿನ್ನೆಲೆಯಾಗಿರುವುದು. ಅವರು ತಮಗೆ ಅರಿವಿಲ್ಲದಂತೆಯೇ ದೇಹದೊಳಗಿನ ಭಗವಂತನಿಗೂ, ದೇವತಾಸಮುದಾಯಕ್ಕೂ ಅಪಚಾರವೆಸಗುವರು.

ಮೇಲ್ನೋಟಕ್ಕೆ ಶಾಸ್ತ್ರ ಓದಿದಂತೆ ಕಾಣುವ ಅನೇಕರು ಕ್ಷುದ್ರ ದೇವತೆಗಳ ಆರಾಧನೆಯ ಬಗ್ಗೆ ಒಲವನ್ನು ಹೊಂದಿರುವುದು ಉಂಟು. ಅಸತ್ಯ, ಅಧರ್ಮಗಳ ಬಗ್ಗೆ ಅವರದು ಅಚಲವಾದ ಒಲವು. ಸದಾ ಕೇಡಿನ ಬಗ್ಗೆಯೇ ಚಿಂತನೆ. ಬಾಯಲ್ಲಿ ಭಗವಂತನಾದರು ಕೃತಿಯಲ್ಲಿ ಮಾತ್ರ ಭಗವದ್ದ್ರೋಹವೇ ! ಇದರಿಂದ ಅವರ ಓದಿಗು, ಅವರ ನಂಬಿಕೆಗೂ

---

೧. ಸತ್ತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ।
ಶ್ರದ್ಧಾಮಯೋಽಯಂ ಪುರುಷೋ ಯೋ ಯಚ್ಛ್ರದ್ಧಃ ಸ ಏವ ಸಃ॥ – ಗೀತಾ (೧೭/೩)

೨. ಯಜಂತೇ ಸಾತ್ತ್ವಿಕಾ ದೇವಾನ್ ಯಕ್ಷರಕ್ಷಾಂಸಿ ರಾಜಸಾಃ।
ಪ್ರೇತಾನ್ ಭೂತಗಣಾಂಶ್ಚಾನ್ಯೇ ಯಜಂತೇ ತಾಮಸಾ ಜನಾಃ॥ – ಗೀತಾ (೧೭/೪)

ಹೊಂದಾಣಿಕೆ ಎಲ್ಲ ಎಂದಾಗುವುದು. ಎಲ್ಲ ಕಾಲಕ್ಕೂ ಸಹ ಪ್ರಾಬಲ್ಯ ಸಾಧಿಸುವುದು ಸ್ವಭಾವವೇ ಆಗಿದೆ. ಅದರಿಂದಾಗಿ ಅವರಿಗೆ ಶಾಸ್ತ್ರದ ಓದು ಸಹ ನಂಬಿಕೆಯನ್ನು ಬದಲಾಯಿಸಲು ಅಸಮರ್ಥವಾಗಿರುತ್ತದೆ. ಮತ್ತೆ ಕೆಲವರು ಶಾಸ್ತ್ರದ ಗಂಧವೂ ಇಲ್ಲದೆ ಭಗವಂತನ ಆರಾಧನೆಯತ್ತ ಒಲವನ್ನು ಹೊಂದಿರುವರು. ಮೋಸ, ವಂಚನೆಗಳನ್ನು ಅವರು ಕನಸಿನಲ್ಲೂ ಚಿಂತಿಸರು. ಪರರ ಹಿತವನ್ನು ಸದಾ ಚಿಂತಿಸುವರು. ಇಂತಹವರ ಸ್ವರೂಪ ಸಹಜವಾಗಿಯೇ ಸಾತ್ವಿಕವೆನ್ನಿಸುವಂತಹುದು.

ಈ ಬಗೆಯ ಅನುಭವ ಎಲ್ಲರಿಗೂ ಒಂದಲ್ಲ ಒಂದು ರೀತಿಯಲ್ಲಿ ಆಗಿರುವಂತಹುದೇ. ಶಾಸ್ತ್ರದ ಪರಿಜ್ಞಾನವಿರಲಿ ಅಕ್ಷರ ಪರಿಜ್ಞಾನವೂ ಇರದ ನಿರಕ್ಷರ ಕುಕ್ಷಿಗಳಲ್ಲೂ ಸಹ ಸತ್ಯ, ಧರ್ಮದ ಬಗ್ಗೆ ಅಚಲವಾದ ಶ್ರದ್ಧೆ ಇರುವುದು ಅಪರೂಪವೇನಲ್ಲ. ಅದರಂತೆ ಹಿಂದೆ ಹೇಳಿದಂತೆ ತಿಳಿದೂ ಸಹ ಅಪಚಾರ ಮಾಡುವ ಸಾಕ್ಷರರದೂ ಸಹ. ಇಂತಹ ಅನುಭವವನ್ನು ವಿಶ್ಲೇಷಿಸುವ ಅಪೂರ್ವ ಚಿಂತನೆ ಈ ಪ್ರಸಂಗದಲ್ಲಿದೆ.

*****

ಜೀವಿಗಳ ಆಹಾರ, ಯಜ್ಞ, ತಪಸ್ಸು ಹಾಗೂ ದಾನಗಳೂ ಸಹ ಈ ತೆರನಾಗಿ ಸಾತ್ತ್ವಿಕಾದಿಪ್ರಭೇದಗಳನ್ನು ಒಳಗೊಂಡಿರುತ್ತವೆ.

## ಮೂರು ವಿಧ ಆಹಾರ

ಆಯುಷ್ಯ, ಸಜ್ಜನಿಕೆ, ಬಲ, ಆರೋಗ್ಯ, ಸುಖ ಮತ್ತು ಪ್ರೀತಿಗಳನ್ನು ಹೆಚ್ಚಿಸುವಂತಹ, ರಸಯುಕ್ತವಾದ, ಸ್ನಿಗ್ಧವಾದ, ತಿಂದ ಬಹುಕಾಲದವರೆಗೂ ಹಿತವೆನ್ನಿಸುವ, ಮತ್ತೊಮ್ಮೆ ಸವಿಯಬೇಕೆನ್ನಿಸುವ ಆಹಾರಗಳು ಸಾತ್ತ್ವಿಕರಿಗೆ ಪ್ರಿಯ.[೧]

ದುಃಖ, ಶೋಕ, ರೋಗಗಳನ್ನುಂಟುಮಾಡುವಂತಹ, ಅತಿಖಾರ, ಅತಿಹುಳಿ, ಅತಿಉಪ್ಪು, ಅತಿಬಿಸಿ, ಅತಿಬಿರುಸು, ತುಂಬಾ ನೀರಸ ಹಾಗೂ ಸಂಕಟಕರವಾದ ತಿನಿಸುಗಳು ರಾಜಸರಿಗೆ ಪ್ರಿಯ.[೨]

ಬೇಯಿಸಿ ಒಂದು ಯಾಮ ಕಳೆದ, ಒಣಗಿದ, ಹಳಸಿದ, ತಂಗಳಾದ, ಮತ್ತೊಬ್ಬರು ತಿಂದು ಉಳಿಸಿದ ಮತ್ತು ಅಪವಿತ್ರವಾದ ಆಹಾರ ತಾಮಸರಿಗೆ ಪ್ರಿಯ.[೩]

*****

---

೧. ಆಯುಃಸತ್ತ್ವಬಲಾರೋಗ್ಯಸುಖಪ್ರೀತಿವಿವರ್ಧನಾಃ।
ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾ ಆಹಾರಾಃ ಸಾತ್ತ್ವಿಕಪ್ರಿಯಾಃ॥ - ಗೀತಾ (೧೭/೮)

೨. ಕಟ್ವಾಮ್ಲಲವಣಾತ್ಯುಷ್ಣತೀಕ್ಷ್ಣರೂಕ್ಷವಿದಾಹಿನಃ।
ಆಹಾರಾ ರಾಜಸಸ್ಯೇಷ್ಟಾ ದುಃಖಶೋಕಾಮಯಪ್ರದಾಃ॥ - ಗೀತಾ (೧೭/೯)

೩. ಯಾತಯಾಮಂ ಗತರಸಂ ಪೂತಿ ಪರ್ಯುಷಿತಂ ಚ ಯತ್।
ಉಚ್ಛಿಷ್ಟಮಪಿ ಚಾಮೇಧ್ಯಂ ಭೋಜನಂ ತಾಮಸಪ್ರಿಯಮ್॥ - ಗೀತಾ (೧೭/೧೦)

ಇಲ್ಲಿ ಆಹಾರಗಳನ್ನು ಹೆಸರಿಸದೆ, ಅವುಗಳ ಲಕ್ಷಣಗಳನ್ನು ಮಾತ್ರ ವಿವರಿಸಿರುವುದು ಗಮನಾರ್ಹ. ಆದ್ದರಿಂದಲೇ ಭಗವದ್ಗೀತೆ ಸಾರ್ವಕಾಲಿಕಗ್ರಂಥವೆನ್ನಿಸುವುದು. ಹೆಸರು ಮೊದಲಾದ ವಿವರಗಳನ್ನು ಪುರಾಣಗಳಿಂದಲೂ, ಸ್ಮೃತಿ ಹಾಗೂ ನಿಬಂಧಗ್ರಂಥ-ಗಳಿಂದಲೂ ಪಡೆದುಕೊಳ್ಳಬಹುದು. ಆಧುನಿಕವಿಜ್ಞಾನದ ಪರಿಕಲ್ಪನೆಯಾದ ಜೀವ-ಸತ್ತ್ವಗಳ ವಿವರಗಳನ್ನು ಬಲ್ಲವರಿಗೆ ಆಹಾರದ ಬಗೆಗಿನ ಈ ಮಾತು ಸುಲಭವಾಗಿ ತಿಳಿಯುವಂತಹುದು. ಆರನೇಯ ಅಧ್ಯಾಯದಲ್ಲಿ ಬಂದಿರುವ ಯುಕ್ತಾಹಾರವಿಹಾರಸ್ಯ ಎಂಬ ಪದದ ವಿವರಣೆಯಂತೆ ಈ ಭಾಗವಿರುವುದು ಗಮನಾರ್ಹ.

*****

ಆಹಾರ ದೇಹಪುಷ್ಟಿಯ ಸಾಧನ ಎಂಬುದು ಸಾಮಾನ್ಯಕಲ್ಪನೆ. ಆದರೆ ಆಹಾರ ಮನಸ್ಸಿನ ಮೇಲೆ ಬೀರುವ ಪರಿಣಾಮದ ಬಗ್ಗೆ ಆಧುನಿಕವಿಜ್ಞಾನ ಅಷ್ಟಾಗಿ ಗಮನಹರಿಸಿಲ್ಲ. ಉಪನಿಷತ್ತು ಹೇಳುತ್ತದೆ – ತಿಂದ ಆಹಾರ ಮೂರು ಬಗೆಯಾಗಿ ಮಾರ್ಪಡುವುದು. ಅದರ ಸ್ಥೂಲಭಾಗ ಮಲಮೂತ್ರವಾಗಿ ವಿಸರ್ಜಿತವಾಗುವುದು. ಅದರ ಮಧ್ಯಭಾಗ ದೇಹಕ್ಕೆ ತಲುಪಿ ಪುಷ್ಟಿಗೆ ಕಾರಣವಾಗುವುದು. ಅದರ ಸೂಕ್ಷ್ಮಭಾಗ ಮನಸ್ಸಿಗೆ ಮುಟ್ಟಿ ತನ್ನ ಪ್ರಭಾವವನ್ನು ತೋರುವುದು. ಆದ್ದರಿಂದ ನಾವು ತಿನ್ನುವ ಆಹಾರ ದೇಹಕ್ಕೆ ಹಿತವಾಗುವುದಷ್ಟನ್ನೇ ಗಮನಿಸದೆ, ಮನಸ್ಸಿಗೆ ಹಿತವಾಗುವುದರ ಬಗ್ಗೆ ಚಿಂತಿಸಬೇಕು. ಮದ್ಯಪಾನ ಮಾಡಿದವನು ಕೆಲವೇ ಕ್ಷಣಗಳಿಗೆ ಬಡಬಡಿಸುವುದನ್ನೂ, ಪ್ರಜ್ಞೆ ಕಳೆದುಕೊಳ್ಳುವುದನ್ನೂ ನಾವು ಕಾಣುತ್ತೇವೆ. ಅವನ ಉದರ ಸೇರಿದ ಆಹಾರ ಅವನ ತಲೆಯ ಮೇಲೆ ಬೀರುವ ಪ್ರಭಾವದ ಪರಿಣಾಮ ಅದು. ಇದು ಆಹಾರವು ವಿಚಾರದ ಮೇಲೆ ಬೀರುವ ಪರಿಣಾಮಕ್ಕೆ ಸ್ಪಷ್ಟನಿದರ್ಶನ.

ತಿನ್ನುವ ಪ್ರತಿಯೊಂದು ಆಹಾರವೂ ಹೀಗೆ ಮನಸ್ಸಿನ ಮೇಲೆ ಪರಿಣಾಮ ಬೀರುವುದು ನಿಶ್ಚಿತ. ಅದರ ತೀವ್ರತೆಯಲ್ಲಿ ಮಾತ್ರ ಭಿನ್ನತೆ ಇರುವುದು. ಆದ್ದರಿಂದ ದೇಹದ ಹಿತಕ್ಕಿಂತ ಮಿಗಿಲಾಗಿ ಮನಸ್ಸಿನ ಹಿತವನ್ನು ಸಾಧಿಸುವ ಆಹಾರವು ಸಾತ್ತ್ವಿಕವಾದದ್ದು. ಅದರಿಂದ ಆಯುಷ್ಯ, ಆರೋಗ್ಯ, ಸುಖಸಂತೋಷಾದಿ ಸಮಸ್ತವೂ ಲಭಿಸುವವು. ರಾಜಸ ಆಹಾರ ಮನಸ್ಸನ್ನು ಉದ್ವೇಗಕ್ಕೆ ಈಡುಮಾಡುವುದು. ದೇಹವನ್ನು ರೋಗರುಜಿನಗಳಿಗೂ ಗುರಿಮಾಡುವುದು. ತಾಮಸ ಆಹಾರ ನಿದ್ರೆಗೂ, ಎಚ್ಚರಹೀನತೆಗೂ, ದುರ್ವಿಚಾರಕ್ಕೂ ಕಾರಣವಾಗುವುದು. ರೋಗರುಜಿನಗಳ ಫಲ ಅನಾರೋಗ್ಯ, ಅನಾಯುಷ್ಯಗಳೆಂದು ಪ್ರತ್ಯೇಕ ಹೇಳಬೇಕಿಲ್ಲ.

ಆಹಾರದ ಸತ್ವದಂತೆ ಅದರ ಪ್ರಮಾಣ ಮೊದಲಾದವುಗಳು ಸಹ ತ್ರಿವಿಧ ಎಂದು ತಿಳಿಯಬೇಕು. ಮಿತವಾದ ಆಹಾರ ಸೇವನೆ ಸಾತ್ವಿಕ, ಅತಿಯಾದದ್ದು ತಾಮಸ, ಅದರಂತೆ

ದೇಹ ಪೋಷಣೆಗಾಗಿ ಆಹಾರವನ್ನು ಸ್ವೀಕರಿಸುವ ಪರಿಕಲ್ಪನೆ ಸಾತ್ವಿಕ. ರುಚಿಗಾಗಿ ನಿಷಿದ್ಧ ಪದಾರ್ಥವನ್ನು ತಿನ್ನುವ ರೀತಿ ತಾಮಸ. ಆರೋಗ್ಯ ಮೊದಲಾದವುಗಳ ಬಗ್ಗೆ ಎಚ್ಚರಿಕೆ ಇಲ್ಲದೇ ಸಿಕ್ಕಲ್ಲಿ ಸಿಕ್ಕದ್ದನ್ನು ಸಿಕ್ಕಂತೆ ತಿನ್ನುವ ರೀತಿ ಮಾತ್ರ ಪಶುಗಳದೇ ಸರಿ.

*****

ಆಹಾರಪದಾರ್ಥಗಳಂತೆ ಆಹಾರ ಬೇಯಿಸುವಕ್ರಮವು ಸಹ ಪರಿಶುದ್ಧವಾಗಿರಬೇಕು. ಸೇವಿಸುವ ಸ್ಥಳ ನಿರ್ಮಲವಾಗಿರಬೇಕು. ಸೇವಿಸುವ ವೇಳೆಯೂ ವಿಹಿತವಾಗಿರಬೇಕು. ಸೇವಿಸುವ ಪ್ರಮಾಣವೂ ಶಾಸ್ತ್ರದ ವಿಧಿಗೆ ಅನುಗುಣವಾಗಿರಬೇಕು. ಪಾಕಮಾಡುವ ವ್ಯಕ್ತಿ ಶುದ್ಧನಾಗಿರಬೇಕು. ಎಲ್ಲಕ್ಕಿಂತ ಮಿಗಿಲಾಗಿ ಆಹಾರ ತಯಾರಿಸುವ ಪದಾರ್ಥಗಳು ಸಹ ವಿಹಿತವಾಗಿದ್ದು, ಅವುಗಳ ಸಂಪಾದನೆಯೂ ನ್ಯಾಯಮಾರ್ಗದಿಂದಲೇ ಆಗಿರಬೇಕು. ಹಾಗೆ ಸಿದ್ಧವಾದ ಆಹಾರ ಭಗವಂತನಿಗೆ ಸಮರ್ಪಿತವಾಗಬೇಕು. ಅನಂತರ ಅದನ್ನು ಇತರ ದೇವತೆಗಳಿಗೂ. ಋಷಿಮುನಿಗಳಿಗೂ ಅರ್ಪಿಸಿ, ವೈಶ್ವದೇವವನ್ನು ಮಾಡಿ, ಅತಿಥಿ ಅಭ್ಯಾಗತರಿಗೆ ನೀಡಿ, ಭಗವಂತನನ್ನು ಸ್ಮರಿಸುತ್ತಾ ಉಣ್ಣಬೇಕು. ನಿಷಿದ್ಧಪದಾರ್ಥಗಳನ್ನು ವರ್ಜಿಸಬೇಕು. ಏಕಾದಶೀ, ಕೃಷ್ಣಾಷ್ಟಮೀ ಮೊದಲಾದ ದಿನಗಳಲ್ಲಿ ಯಾವ ಆಹಾರವೂ, ಅದೇಕೇ ನೀರೂ ಸಹ ಸಾತ್ತ್ವಿಕವೆನ್ನಿಸದು. ಪೂರ್ಣ ನಿರಾಹಾರವೇ ಅಂದಿನ ವಿಧಿ. ಹೀಗಿದ್ದಲ್ಲಿ ಅದು ಪೂರ್ಣಪ್ರಮಾಣದಲ್ಲಿ ಸಾತ್ತ್ವಿಕವೆನ್ನಿಸುವುದು. ಇದರಲ್ಲಿ ಆಗುವ ಯಾವುದೇ ವ್ಯತ್ಯಾಸವೂ ಅದರ ಸಾತ್ತ್ವಿಕತೆಗೆ ಭಂಗ ಉಂಟುಮಾಡದೆ ಬಿಡದು. ಲೋಪ ಹೆಚ್ಚಿದಂತೆ ರಾಜಸವಾಗುವ ಆಹಾರ, ಮುಂದೆ ತಾಮಸವೂ ಎನ್ನಿಸಿ, ಇಹಪರಗಳ ಅನರ್ಥಕ್ಕೆ ಕಾರಣವಾಗುವುದು.

ಅಹಾರ ನೀಡುವ ವ್ಯಕ್ತಿಯಲ್ಲಿ ಗುಣದೋಷಗಳು ಸಹ ಆಹಾರ ಸ್ವೀಕರಿಸುವ ಮನಸ್ಸಿನಲ್ಲಿ ಪ್ರಭಾವವನ್ನು ಬೀರುವುದು ಉಂಟು. ದುರ್ಯೋಧನ ಅಶ್ವತ್ಥಾಮರಿಗೆ ನೀಡಿದ ಹಾಲಿ ಇದಕ್ಕೆ ನಿದರ್ಶನ. ಅವನು ನೀಡಿದ್ದು ಶುದ್ಧವಾದ ಹಾಲನ್ನೇ ಆದರೂ, ಅವನ ಮನಸ್ಸು ಮಾತ್ರ ಹಾಲಹಲವೇ ಆಗಿತ್ತು. ಅದರಿಂದಾಗಿ ಅವನಂತೆ ಅವರೂ ಸಹ ಪಾಂಡವರ ವಿಪಕ್ಷವನ್ನು ಸೇರುವಂತಾಗಿ ಒಂದು ಹಂತದಲ್ಲಿ ದುರಂತವನ್ನು ಕಾಣುವಂತಾದದ್ದು ಇತಿಹಾಸ. ಭೀಷ್ಮ ದ್ರೋಣರು ಸಹ ದುರ್ಯೋಧನನ ಅನ್ನದ ಹಂಗಿಗಾಗಿ ದುಷ್ಟ ಪಕ್ಷವನ್ನು ಸೇರಿ ದುರಂತ ಕಂಡದ್ದು ಪ್ರಸಿದ್ಧವೇ ಆಗಿದೆ. ಕಳ್ಳ ನೀಡುವ ಆಹಾರ ಕಳ್ಳತನದ ಪ್ರವೃತ್ತಿಯನ್ನು, ಸುಳ್ಳ ನೀಡುವ ಆಹಾರ ಸುಳ್ಳುತನದ ಪ್ರವೃತ್ತಿಯನ್ನು ಹುಟ್ಟಿಸುವುದು ಎಂದು ಇದರಿಂದ ತಿಳಿಯುವುದು. ಇದರಿಂದಾಗಿ ಸತ್ಪಾತ್ರರಲ್ಲಿ ದಾನ ಎಂಬಂತೆ ಸತ್ಪಾತ್ರರಿಂದ ದಾನ ಎಂಬ ಮತ್ತೊಂದು ಪರಿಕಲ್ಪನೆಯು ಅರ್ಥವಾಗುವುದು.

*****

## ಮೂರು ವಿಧ ಯಜ್ಞಗಳು

ಮನುಷ್ಯನ ಉನ್ನತಿಗೆ ವಿಹಿತವಾದ ಸಾಧನದಲ್ಲಿ ಯಜ್ಞವು ಪ್ರಮುಖವಾದುದು. ಅಗ್ನಿಯಲ್ಲಿ ಮಾಡುವ ಹೋಮ, ಹವನಾದಿಗಳ ಹಿನ್ನೆಲೆಯಲ್ಲಿ ಯಜ್ಞದ ಪರಿಕಲ್ಪನೆ ರೂಢಿಯಲ್ಲಿದೆ. ಆದರೆ, ಒಳಿತಿಗಾಗಿ ದೇವತೆಗಳಿಗಾಗಿ ನೀಡುವ ತ್ಯಾಗ ಕಾರ್ಯವನ್ನೇ ಗೀತೆಯು ಯಜ್ಞವೆಂಬುದಾಗಿ ಕರೆದಿದೆ. ಗೀತೆ ನೀಡಿರುವ ಯಜ್ಞದ ಪರಿಕಲ್ಪನೆ ತುಂಬಾ ವಿಶಾಲವಾದುದು.

ಫಲದ ಹಂಬಲವಿಲ್ಲದ,[೧] ಶಾಸ್ತ್ರವಿಧಿಗೆ ಅನುಗುಣವಾದ ಕರ್ತವ್ಯಭಾವದಿಂದ ಮಾಡಲ್ಪಡುವ ಯಜ್ಞ ಸಾತ್ತ್ವಿಕ. ಫಲವನ್ನು ಉದ್ದೇಶಿಸಿ, ಹಿರಿತನದ ಪ್ರದರ್ಶನಕ್ಕೆಂದು ಮಾಡುವ ಯಜ್ಞವು ರಾಜಸ. ಶಾಸ್ತ್ರವಿಧಿಯನ್ನು ಮೀರಿದ, ಅನ್ನದಾನವಿರದ, ಮಂತ್ರೋಚ್ಚಾರಣೆ ಇರದ, ದಕ್ಷಿಣೆ ಇಲ್ಲದ, ಶ್ರದ್ಧೆ ಇರದ ಯಜ್ಞವು ತಾಮಸಯಜ್ಞ.

*****

ಯಜ್ಞದ ಆಚರಣೆಗೆ ವಿಹಿತಮಂತ್ರಗಳ ಉಚ್ಚಾರಣೆ, ಯೋಗ್ಯದಕ್ಷಿಣೆಯ ವಿತರಣೆ, ಯಥಾಶಕ್ತಿ ಅನ್ನದಾನ ತುಂಬಾ ಮುಖ್ಯ. ಲೌಕಿಕಫಲಗಳ ಅಪೇಕ್ಷೆಯೂ ಸಲ್ಲದು. ಶಾಸ್ತ್ರದ ವಿಧಿವಿಧಾನಗಳ ಪರಿಪಾಲನೆ ತೀರ ಆವಶ್ಯಕ. ಶ್ರದ್ಧೆಯಂತೂ ಇದರ ಜೀವಾಳ. ಇವುಗಳಲ್ಲಿ ಯಾವುದು ತಪ್ಪಿದರೂ ಅದು ಪರಿಶುದ್ಧವಾದ ಯಜ್ಞವೆನ್ನಿಸದು. ಶಾಸ್ತ್ರಬಾಹಿರವಾದ ಕಾರ್ಯಗಳಂತೆ ಯಜ್ಞವೆನ್ನಿಸುವುದೇ ಇಲ್ಲ. ಯಜ್ಞಗಳು ಸಹ ಕ್ಷುದ್ರದೇವತೆಗಳನ್ನು ಉದ್ದೇಶಿಸಿದಾಗ ನಿರರ್ಥಕವಾಗುವುದು ತಪ್ಪಿದ್ದಲ್ಲ. ಫಲದ ಹಂಬಲ ಯಜ್ಞದ ಹಿರಿಮೆಯನ್ನು ಕುಂದಿಸುವುದು. ಅನುಸಂಧಾನ ತಪ್ಪುವುದಂತೂ ಮಾರಕವೇ.

*****

ಪಾಂಡವರು ಮಾಡಿದ ಅಶ್ವಮೇಧ, ರಾಜಸೂಯಗಳು ಸಾತ್ತ್ವಿಕಯಜ್ಞದ ಅತ್ಯುತ್ತಮನಿದರ್ಶನವಾದರೆ, ದುರ್ಯೋಧನ ಮಾಡಿದ ಪುಂಡರೀಕಯಾಗ ತಾಮಸಯಜ್ಞಕ್ಕೆ ದೃಷ್ಟಾಂತ. ಪಾಂಡವರ ಯಜ್ಞದಲ್ಲಿ ಶ್ರೀಕೃಷ್ಣನಿಗೆ ಅಗ್ರಪೂಜೆ ಸಂದರೆ, ದುರ್ಯೋಧನನ ಯಜ್ಞದಲ್ಲಿ ಯಜ್ಞದೇವತೆಯಾದ ಪುಂಡರೀಕಾಕ್ಷನಾದ ಶ್ರೀಕೃಷ್ಣನಿಗೆ ಆಹ್ವಾನವೇ ಇರಲಿಲ್ಲ. ಅದರ ಫಲವಾಗಿ ರಾಜಸೂಯಯಾಗದಂತೆ ಪರಮಶ್ರೇಷ್ಠವಾಗಿದ್ದ

---

೧. ಅಫಲಾಕಾಂಕ್ಷಿಭಿರ್ಯಜ್ಞೋ ವಿಧಿದೃಷ್ಟೋ ಯ ಇಜ್ಯತೇ ।
ಯಷ್ಟವ್ಯಮೇವೇತಿ ಮನಃ ಸಮಾಧಾಯ ಸ ಸಾತ್ತ್ವಿಕಃ ॥
ಅಭಿಸಂಧಾಯ ತು ಫಲಂ ದಂಭಾರ್ಥಮಪಿ ಚೈವ ಯತ್ ।
ಇಜ್ಯತೇ ಭರತಶ್ರೇಷ್ಠ ತಂ ಯಜ್ಞಂ ವಿದ್ಧಿ ರಾಜಸಮ್ ॥
ವಿಧಿಹೀನಮಸೃಷ್ಟಾನ್ನಂ ಮಂತ್ರಹೀನಮದಕ್ಷಿಣಮ್ ।
ಶ್ರದ್ಧಾವಿರಹಿತಂ ಯಜ್ಞಂ ತಾಮಸಂ ಪರಿಚಕ್ಷತೇ ॥ – ಗೀತಾ (೧೭/೧೧-೧೩)

ದೇಹ ಪೋಷಣೆಗಾಗಿ ಆಹಾರವನ್ನು ಸ್ವೀಕರಿಸುವ ಪರಿಕಲ್ಪನೆ ಸಾತ್ವಿಕ. ರುಚಿಗಾಗಿ ನಿಷಿದ್ಧ ಪದಾರ್ಥವನ್ನು ತಿನ್ನುವ ರೀತಿ ತಾಮಸ. ಆರೋಗ್ಯ ಮೊದಲಾದವುಗಳ ಬಗ್ಗೆ ಎಚ್ಚರಿಕೆ ಇಲ್ಲದೇ ಸಿಕ್ಕಲ್ಲಿ, ಸಿಕ್ಕದ್ದನ್ನು, ಸಿಕ್ಕಂತೆ ತಿನ್ನುವ ರೀತಿ ಮಾತ್ರ ಪಶುಗಳದೇ ಸರಿ.

*****

ಆಹಾರಪದಾರ್ಥಗಳಂತೆ ಆಹಾರ ಬೇಯಿಸುವ ಕ್ರಮವು ಸಹ ಪರಿಶುದ್ಧವಾಗಿರಬೇಕು. ಸೇವಿಸುವ ಸ್ಥಳ ನಿರ್ಮಲವಾಗಿರಬೇಕು. ಸೇವಿಸುವ ವೇಳೆಯೂ ವಿಹಿತವಾಗಿರಬೇಕು. ಸೇವಿಸುವ ಪ್ರಮಾಣವೂ ಶಾಸ್ತ್ರದ ವಿಧಿಗೆ ಅನುಗುಣವಾಗಿರಬೇಕು. ಪಾಕಮಾಡುವ ವ್ಯಕ್ತಿ ಶುದ್ಧನಾಗಿರಬೇಕು. ಎಲ್ಲಕ್ಕಿಂತ ಮಿಗಿಲಾಗಿ ಆಹಾರ ತಯಾರಿಸುವ ಪದಾರ್ಥಗಳು ಸಹ ವಿಹಿತವಾಗಿದ್ದು, ಅವುಗಳ ಸಂಪಾದನೆಯೂ ನ್ಯಾಯಮಾರ್ಗದಿಂದಲೇ ಆಗಿರಬೇಕು. ಹಾಗೆ ಸಿದ್ಧವಾದ ಆಹಾರ ಭಗವಂತನಿಗೆ ಸಮರ್ಪಿತವಾಗಬೇಕು. ಅನಂತರ ಅದನ್ನು ಇತರ ದೇವತೆಗಳಿಗೂ. ಋಷಿಮುನಿಗಳಿಗೂ ಅರ್ಪಿಸಿ, ವೈಶ್ವದೇವವನ್ನು ಮಾಡಿ, ಅತಿಥಿ ಅಭ್ಯಾಗತರಿಗೆ ನೀಡಿ, ಭಗವಂತನನ್ನು ಸ್ಮರಿಸುತ್ತಾ ಉಣ್ಣಬೇಕು. ನಿಷಿದ್ಧಪದಾರ್ಥಗಳನ್ನು ವರ್ಜಿಸಬೇಕು. ಏಕಾದಶೀ, ಕೃಷ್ಣಾಷ್ಟಮೀ ಮೊದಲಾದ ದಿನಗಳಲ್ಲಿ ಯಾವ ಆಹಾರವೂ, ಅದೇಕೇ ನೀರೂ ಸಹ ಸಾತ್ತ್ವಿಕವೆನ್ನಿಸದು. ಪೂರ್ಣ ನಿರಾಹಾರವೇ ಅಂದಿನ ವಿಧಿ. ಹೀಗಿದ್ದಲ್ಲಿ ಅದು ಪೂರ್ಣಪ್ರಮಾಣದಲ್ಲಿ ಸಾತ್ತ್ವಿಕವೆನ್ನಿಸುವುದು. ಇದರಲ್ಲಿ ಆಗುವ ಯಾವುದೇ ವ್ಯತ್ಯಾಸವೂ ಅದರ ಸಾತ್ತ್ವಿಕತೆಗೆ ಭಂಗ ಉಂಟುಮಾಡದೆ ಬಿಡದು. ಲೋಪ ಹೆಚ್ಚಿದಂತೆ ರಾಜಸವಾಗುವ ಆಹಾರ, ಮುಂದೆ ತಾಮಸವೂ ಎನ್ನಿಸಿ, ಇಹಪರಗಳ ಅನರ್ಥಕ್ಕೆ ಕಾರಣವಾಗುವುದು.

ಆಹಾರ ನೀಡುವ ವ್ಯಕ್ತಿಯಲ್ಲಿ ಗುಣದೋಷಗಳು ಸಹ ಆಹಾರ ಸ್ವೀಕರಿಸುವ ಮನಸ್ಸಿನಲ್ಲಿ ಪ್ರಭಾವವನ್ನು ಬೀರುವುದು ಉಂಟು. ದುರ್ಯೋಧನ ಅಶ್ವತ್ಥಾಮರಿಗೆ ನೀಡಿದ ಹಾಲಿ ಇದಕ್ಕೆ ನಿದರ್ಶನ. ಅವನು ನೀಡಿದ್ದು ಶುದ್ಧವಾದ ಹಾಲನ್ನೇ ಆದರೂ, ಅವನ ಮನಸ್ಸು ಮಾತ್ರ ಹಾಲಹಲವೇ ಆಗಿತ್ತು. ಆದರಿಂದಾಗಿ ಅವನಂತೆ ಅವರೂ ಸಹ ಪಾಂಡವರ ವಿಪಕ್ಷವನ್ನು ಸೇರುವಂತಾಗಿ ಒಂದು ಹಂತದಲ್ಲಿ ದುರಂತವನ್ನು ಕಾಣುವಂತಾದದ್ದು ಇತಿಹಾಸ. ಭೀಷ್ಮ ದ್ರೋಣರು ಸಹ ದುರ್ಯೋಧನನ ಅನ್ನದ ಹಂಗಿಗಾಗಿ ದುಷ್ಟ ಪಕ್ಷವನ್ನು ಸೇರಿ ದುರಂತ ಕಂಡದ್ದು ಪ್ರಸಿದ್ಧವೇ ಆಗಿದೆ. ಕಳ್ಳ ನೀಡುವ ಆಹಾರ ಕಳ್ಳತನದ ಪ್ರವೃತ್ತಿಯನ್ನು, ಸುಳ್ಳ ನೀಡುವ ಆಹಾರ ಸುಳ್ಳುತನದ ಪ್ರವೃತ್ತಿಯನ್ನು ಹುಟ್ಟಿಸುವುದು ಎಂದು ಇದರಿಂದ ತಿಳಿಯುವುದು. ಇದರಿಂದಾಗಿ ಸತ್ಪಾತ್ರರಲ್ಲಿ ದಾನ ಎಂಬಂತೆ ಸತ್ಪಾತ್ರರಿಂದ ದಾನ ಎಂಬ ಮತ್ತೊಂದು ಪರಿಕಲ್ಪನೆಯು ಅರ್ಥವಾಗುವುದು.

*****

## ಮೂರು ವಿಧ ಯಜ್ಞಗಳು

ಮನುಷ್ಯನ ಉನ್ನತಿಗೆ ವಿಹಿತವಾದ ಸಾಧನದಲ್ಲಿ ಯಜ್ಞವು ಪ್ರಮುಖವಾದುದು. ಅಗ್ನಿಯಲ್ಲಿ ಮಾಡುವ ಹೋಮ, ಹವನಾದಿಗಳ ಹಿನ್ನೆಲೆಯಲ್ಲಿ ಯಜ್ಞದ ಪರಿಕಲ್ಪನೆ ರೂಢಿಯಲ್ಲಿದೆ. ಆದರೆ, ಒಳಿತಿಗಾಗಿ ದೇವತೆಗಳಿಗಾಗಿ ನೀಡುವ ತ್ಯಾಗ ಕಾರ್ಯವನ್ನೇ ಗೀತೆಯು ಯಜ್ಞವೆಂಬುದಾಗಿ ಕರೆದಿದೆ. ಗೀತೆ ನೀಡಿರುವ ಯಜ್ಞದ ಪರಿಕಲ್ಪನೆ ತುಂಬಾ ವಿಶಾಲವಾದುದು.

ಫಲದ ಹಂಬಲವಿಲ್ಲದ,[೧] ಶಾಸ್ತ್ರವಿಧಿಗೆ ಅನುಗುಣವಾದ ಕರ್ತವ್ಯಭಾವದಿಂದ ಮಾಡಲ್ಪಡುವ ಯಜ್ಞ ಸಾತ್ತ್ವಿಕ. ಫಲವನ್ನು ಉದ್ದೇಶಿಸಿ, ಹಿರಿತನದ ಪ್ರದರ್ಶನಕ್ಕೆಂದು ಮಾಡುವ ಯಜ್ಞವು ರಾಜಸ. ಶಾಸ್ತ್ರವಿಧಿಯನ್ನು ಮೀರಿದ, ಅನ್ನದಾನವಿರದ, ಮಂತ್ರೋಚ್ಚಾರಣೆ ಇರದ, ದಕ್ಷಿಣೆ ಇಲ್ಲದ, ಶ್ರದ್ಧೆ ಇರದ ಯಜ್ಞವು ತಾಮಸಯಜ್ಞ.

*****

ಯಜ್ಞದ ಆಚರಣೆಗೆ ವಿಹಿತಮಂತ್ರಗಳ ಉಚ್ಚಾರಣೆ, ಯೋಗ್ಯದಕ್ಷಿಣೆಯ ವಿತರಣೆ, ಯಥಾಶಕ್ತಿ ಅನ್ನದಾನ ತುಂಬಾ ಮುಖ್ಯ. ಲೌಕಿಕಫಲಗಳ ಅಪೇಕ್ಷೆಯೂ ಸಲ್ಲದು. ಶಾಸ್ತ್ರದ ವಿಧಿವಿಧಾನಗಳ ಪರಿಪಾಲನೆ ತೀರ ಆವಶ್ಯಕ. ಶ್ರದ್ಧೆಯಂತೂ ಇದರ ಜೀವಾಳ. ಇವುಗಳಲ್ಲಿ ಯಾವುದು ತಪ್ಪಿದರೂ ಅದು ಪರಿಶುದ್ಧವಾದ ಯಜ್ಞವೆನ್ನಿಸದು. ಶಾಸ್ತ್ರಬಾಹಿರವಾದ ಕಾರ್ಯಗಳಂತೆ ಯಜ್ಞವೆನ್ನಿಸುವುದೇ ಇಲ್ಲ. ಯಜ್ಞಗಳು ಸಹ ಕ್ಷುದ್ರದೇವತೆಗಳನ್ನು ಉದ್ದೇಶಿಸಿದಾಗ ನಿರರ್ಥಕವಾಗುವುದು ತಪ್ಪಿದ್ದಲ್ಲ. ಫಲದ ಹಂಬಲ ಯಜ್ಞದ ಹಿರಿಮೆಯನ್ನು ಕುಂದಿಸುವುದು. ಅನುಸಂಧಾನ ತಪ್ಪುವುದಂತೂ ಮಾರಕವೇ.

*****

ಪಾಂಡವರು ಮಾಡಿದ ಅಶ್ವಮೇಧ, ರಾಜಸೂಯಗಳು ಸಾತ್ತ್ವಿಕಯಜ್ಞದ ಅತ್ಯುತ್ತಮನಿದರ್ಶನವಾದರೆ, ದುರ್ಯೋಧನ ಮಾಡಿದ ಪುಂಡರೀಕಯಾಗ ತಾಮಸಯಜ್ಞಕ್ಕೆ ದೃಷ್ಟಾಂತ. ಪಾಂಡವರ ಯಜ್ಞದಲ್ಲಿ ಶ್ರೀಕೃಷ್ಣನಿಗೆ ಅಗ್ರಪೂಜೆ ಸಂದರೆ, ದುರ್ಯೋಧನನ ಯಜ್ಞದಲ್ಲಿ ಯಜ್ಞದೇವತೆಯಾದ ಪುಂಡರೀಕಾಕ್ಷನಾದ ಶ್ರೀಕೃಷ್ಣನಿಗೆ ಆಹ್ವಾನವೇ ಇರಲಿಲ್ಲ. ಅದರ ಫಲವಾಗಿ ರಾಜಸೂಯಯಾಗದಂತೆ ಪರಮಶ್ರೇಷ್ಠವಾಗಿದ್ದ

---

೧. ಅಫಲಾಕಾಂಕ್ಷಿಭಿರ್ಯಜ್ಞೋ ವಿಧಿದೃಷ್ಟೋ ಯ ಇಜ್ಯತೇ ।
ಯಷ್ಟವ್ಯಮೇವೇತಿ ಮನಃ ಸಮಾಧಾಯ ಸ ಸಾತ್ತ್ವಿಕಃ ॥
ಅಭಿಸಂಧಾಯ ತು ಫಲಂ ದಂಭಾರ್ಥಮಪಿ ಚೈವ ಯತ್ ।
ಇಜ್ಯತೇ ಭರತಶ್ರೇಷ್ಠ ತಂ ಯಜ್ಞಂ ವಿದ್ಧಿ ರಾಜಸಮ್ ॥
ವಿಧಿಹೀನಮಸೃಷ್ಟಾನ್ನಂ ಮಂತ್ರಹೀನಮದಕ್ಷಿಣಮ್ ।
ಶ್ರದ್ಧಾವಿರಹಿತಂ ಯಜ್ಞಂ ತಾಮಸಂ ಪರಿಚಕ್ಷತೇ ॥ – ಗೀತಾ (೧೭/೧೧-೧೩)

ಪುಂಡರೀಕಯಾಗ ಅವನ ವಂಶದ ಮಾರಣಹೋಮಕ್ಕೆ ಕಾರಣವಾಯಿತು. ಪಾಂಡವರ ಯಾಗಗಳ ಉದ್ದೇಶ ಹರಿಪ್ರೀತಿಯಂತೆ, ಲೋಕಕಲ್ಯಾಣವೂ ಆಗಿತ್ತು; ದುರ್ಯೋಧನನ ಉದ್ದೇಶ ಕೃಷ್ಣದ್ವೇಷ, ಪಾಂಡವರ ನಾಶ ಹಾಗೂ ಸ್ವಾರ್ಥಸಾಧನೆಯಾಗಿತ್ತು ! ಈ ಕಾರಣಕ್ಕೂ ಅದು ತಾಮಸವಾಗುವುದು ಅನಿವಾರ್ಯವಾಯಿತು.

*****

## ಮೂರು ಬಗೆಯ ತಪಸ್ಸು

ದೇಹದಿಂದ ಮಾಡುವ ತಪಸ್ಸು, ವಾಙ್ಮಯತಪಸ್ಸು ಹಾಗೂ ಮಾನಸತಪಸ್ಸು ಎಂಬುದಾಗಿ ತಪಸ್ಸು ಮೂರುವಿಧ.

ದೇವತೆಗಳನ್ನು, ದ್ವಿಜರನ್ನು, ಗುರುಗಳನ್ನು ಮತ್ತು ಜ್ಞಾನಿಗಳನ್ನು ಪೂಜಿಸುವುದು, ಮೈಮನಗಳ ಶುದ್ಧಿ, ನೇರ ನಡೆನುಡಿಗಳು, ಬ್ರಹ್ಮಚರ್ಯೆ ಮತ್ತು ಮತ್ತೊಬ್ಬರನ್ನು ನೋಯಿಸದಿರುವುದು – ಶರೀರದಿಂದ ಮಾಡುವ ತಪಸ್ಸು ಎನ್ನಿಸುವುದು.[೧]

ಆತಂಕಕ್ಕೆ ಎಡೆಕೊಡದ, ಸಜ್ಜನರಿಗೆ ಮೆಚ್ಚುಗೆಯಾಗುವ, ಸದಾ ಹಿತವೆನ್ನಿಸುವ ಮಾತು, ನಿತ್ಯದ ಅಧ್ಯಯನ – ಇವು ವಾಙ್ಮಯತಪಸ್ಸು ಎನ್ನಿಸುವುವು.[೨]

ಮನಸ್ಸಿನ ಪ್ರಸನ್ನತೆ, ಸೌಮ್ಯತ್ವ, ಮನನಶೀಲತ್ವ, ಮನಸ್ಸನ್ನು ಭಗವಂತನಲ್ಲಿ ವಿಶೇಷವಾಗಿ ತೊಡಗಿಸುವುದು, ನಿರ್ಮಲಮನೋಭಾವ – ಇವೆಲ್ಲ ಮಾನಸತಪಸ್ಸು ಎನ್ನಿಸುವುದು.[೩]

*****

## ಸಾತ್ತ್ವಿಕಾದಿತಪಸ್ಸುಗಳು

ಶ್ರದ್ಧೆಯಿಂದ ಮಾಡುವ ಈ ಮೂರು ವಿಧ ತಪಸ್ಸೂ ಸಹ ಸಾತ್ತ್ವಿಕ, ರಾಜಸ ಹಾಗೂ ತಾಮಸ ಎಂಬುದಾಗಿ ಮೂರುವಿಧ.[೪]

---

೧. ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಮ್ ।
ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ ॥ – ಗೀತಾ (೧೭/೧೪)

೨. ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ।
ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥ – ಗೀತಾ (೧೭/೧೫)

೩. ಮನಃಪ್ರಸಾದಃ ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ ।
ಭಾವಸಂಶುದ್ಧಿರಿತ್ಯೇತತ್ ತಪೋ ಮಾನಸಮುಚ್ಯತೇ ॥ – ಗೀತಾ (೧೭/೧೬)

೪. ಆಹಾರಸ್ತ್ವಪಿ ಸರ್ವಸ್ಯ ತ್ರಿವಿಧೋ ಭವತಿ ಪ್ರಿಯಃ ।
ಯಜ್ಞಸ್ತಪಸ್ತಥಾ ದಾನಂ ತೇಷಾಂ ಭೇದಮಿಮಂ ಶೃಣು ॥ – ಗೀತಾ (೧೭/೭)

ಫಲದ ಹಂಬಲವಿಲ್ಲದ ಕೃಷ್ಣಾರ್ಪಣಬುದ್ಧಿಯಿಂದ ಕೂಡಿದ ತಪಸ್ಸು ಸಾತ್ತ್ವಿಕ-ವೆನ್ನಿಸುವುದು.[೧]

ಸತ್ಕಾರ, ಹೊಗಳಿಕೆ ಮತ್ತು ಪೂಜೆಗೋಸ್ಕರವಾಗಿ ಹಿರಿತನದ ಸೋಗಿನಿಂದ ಮಾಡಲ್ಪಡುವ, ಚಂಚಲವಾದ, ಸ್ಥಿರವಲ್ಲದ ತಪಸ್ಸು ರಾಜಸ ಎನ್ನಿಸುವುದು.[೨]

ಮೂಢನಂಬಿಕೆಯಿಂದ ದೇಹದಂಡನೆ ಮಾಡುತ್ತಾ, ಇತರರ ಕೇಡಿಗೋಸ್ಕರ ಮಾಡುವ ತಪಸ್ಸು ತಾಮಸ ಎನ್ನಿಸುವುದು.[೩]

*****

ಚಿಂತನೆ, ಉಪವಾಸ, ಕೃಚ್ಛ್ರಚಾಂದ್ರಾಯಣ ವ್ರತಗಳ ಆಚರಣೆ, ಬ್ರಹ್ಮಚರ್ಯಪಾಲನೆ ಮೊದಲಾಗಿ ತಪಸ್ಸು ಅನೇಕತೆರನಾದುದು. ಫಲಾಪೇಕ್ಷೆ ಇಲ್ಲದೆ ಕೃಷ್ಣಾರ್ಪಣಬುದ್ಧಿಯಿಂದ ಮಾಡಿದಾಗ ಇವೆಲ್ಲ ಸಾತ್ತ್ವಿಕ. ಸತ್ಕಾರ, ಪ್ರಶಂಸೆ ಮತ್ತು ಪ್ರತಿಷ್ಠೆಗಾಗಿ ನಡೆದಾಗ ರಾಜಸ. ಮೂಢನಂಬಿಕೆಯಿಂದ ವ್ಯರ್ಥ ದೇಹದಂಡಿಸಿ ಇತರರ ಕೇಡಿಗೋಸ್ಕರ ಮಾಡಿದಾಗ ಅದು ತಾಮಸ.

ಪುರಾಣಗಳಲ್ಲಿ ಬರುವ ಋಷಿಮುನಿಗಳ ತಪಸ್ಸುಗಳೆಲ್ಲ ಸಾಮಾನ್ಯವಾಗಿ ಸಾತ್ತ್ವಿಕದ ಗುಂಪಿಗೆ ಸೇರುತ್ತದೆ. ಆಧುನಿಕ ಜನತೆ ಪುತ್ರಪೌತ್ರಾದಿಫಲಗಳನ್ನು ಬಯಸಿ ಮಾಡುವ ತಪಸ್ಸು ಸಾಮಾನ್ಯವಾಗಿ ರಾಜಸ. ರಾವಣ, ಕುಂಭಕರ್ಣ, ಹಿರಣ್ಯಕಶಿಪು, ಹಿರಣ್ಯಾಕ್ಷ ಮೊದಲಾದ ರಾಕ್ಷಸರು ಬ್ರಹ್ಮಾದಿದೇವತೆಗಳನ್ನು ಕುರಿತು, ಲೋಕನಾಶಕ್ಕೋಸ್ಕರ ಅವಧ್ಯತ್ವ, ಅಮರತ್ವಾದಿಗಳನ್ನು ಬಯಸಿ ಮಾಡುವ ತಪಸ್ಸುಗಳು ತಾಮಸ.

ರಾಮಾಯಣದಲ್ಲಿ ಬರುವ ಶಂಬೂಕನ ಪ್ರಸಂಗ ಇಂತಹುದು. ಜನ, ಇದನ್ನು ಶೂದ್ರ ಮಾಡಿದ ತಪಸ್ಸಿಗೆ ರಾಮ ನೀಡಿದ ಶಿಕ್ಷೆ ಎಂದು ತಪ್ಪಾಗಿ ತಿಳಿದಿರುವುದುಂಟು. ವಾಸ್ತವವಾಗಿ ಶ್ರೀ ರಾಮ ಅವನನ್ನು ವಧಿಸಿದ್ದು ತಪಸ್ಸು ಮಾಡಿದ್ದಕ್ಕಾಗಿ ಅಲ್ಲ, ತಾಮಸ ತಪಸ್ಸು ಮಾಡಿದ್ದಕ್ಕಾಗಿ ಎಂಬುದು ರಾಮಾಯಣದ ನಿರೂಪಣೆ. ಅವನು ಪಾರ್ವತಿ ದೇವಿಯಿಂದ ವರ ಪಡೆದು ದೀರ್ಘಾಯುಷ್ಯವನ್ನು ಪಡೆದಿದ್ದ ಒಬ್ಬ ಅಸುರ. ಅವನ ತಪಸ್ಸಿನ ಉದ್ದೇಶ ಪಾರ್ವತಿ ಪತಿಯಾಗುವ ಅತ್ಯಂತ ಹೇಯ ರೀತಿಯದಾಗಿತ್ತು: [೪].

---

೧. ಶ್ರದ್ಧಯಾ ಪರಯಾ ತಪ್ತಂ ತಪಸ್ತತ್ ತ್ರಿವಿಧಂ ನರೈಃ।
ಅಫಲಾಕಾಂಕ್ಷಿಭಿರ್ಯುಕ್ತೈಃ ಸಾತ್ತ್ವಿಕಂ ಪರಿಚಕ್ಷತೇ॥ – ಗೀತಾ (೧೭/೧೭)

೨. ಸತ್ಕಾರಮಾನಪೂಜಾರ್ಥಂ ತಪೋ ದಂಭೇನ ಚೈವ ಯತ್।
ಕ್ರಿಯತೇ ತದಿಹ ಪ್ರೋಕ್ತಂ ರಾಜಸಂ ಚಲಮಧ್ರುವಮ್॥ – ಗೀತಾ (೧೭/೧೮)

೩. ಮೂಢಗ್ರಾಹೇಣಾತ್ಮನೋ ಯತ್ ಪೀಡಯಾ ಕ್ರಿಯತೇ ತಪಃ।
ಪರಸ್ಯೋತ್ಸಾದನಾರ್ಥಂ ವಾ ತತ್ ತಾಮಸಮುದಾಹೃತಮ್॥ – ಗೀತಾ (೧೭/೧೯)

೪.

ಎಂದರೆ ವರ ನೀಡಿದ ದೇವತೆಯ ಪತಿಯಾಗುವಂತಹ ನೀಚ ಕಾಮನೆ ಅವನದಾಗಿತ್ತು[೧]. ಅದಕ್ಕೆಂದೆ ಶ್ರೀರಾಮ ಅವನನ್ನು ಸಂಹರಿಸಿದ. ಗುಹ, ಶಬರಿ ಮೊದಲಾದವರು ಸಹ ಆ ಕಾಲದ ಪರಿಕಲ್ಪನೆಯಂತೆ ಶೂದ್ರರೇ ಆಗಿದ್ದರೂ ಶ್ರೀರಾಮ ಅವರನ್ನು ಸ್ವತಃ ಸ್ವೀಕರಿಸಿ ಉದ್ಧರಿಸಿದ. ಅದಕ್ಕೆ ಅವರ ತಪಸ್ಸು ಕೇವಲ ಲೋಕ ಹಿತದ ಸದುದ್ದೇಶದ ಸಾತ್ವಿಕ ತಪಸ್ಸಾಗಿದ್ದುದೆ ಕಾರಣ. ಹೀಗೆ ಒಂದು ಕಾರ್ಯದ ಉದ್ದೇಶದ ಹಿನ್ನೆಲೆಯಲ್ಲಿ ತಪಸ್ಸಿನ ಸ್ವರೂಪ ಬದಲಾಗುವ ಅನೇಕ ನಿದರ್ಶನಗಳನ್ನು ಇತಿಹಾಸ, ಪುರಾಣಗಳು ದಾಖಲಿಸಿವೆ.

*****

## ಮೂರು ಬಗೆಯ ದಾನ

ದಾನವೂ ಸಹ ಮೂರು ಬಗೆ. ಪ್ರತ್ಯುಪಕಾರವನ್ನು ಬಯಸದೆ, ಕರ್ತವ್ಯದೃಷ್ಟಿಯಿಂದ ತಕ್ಕ ದೇಶ, ಕಾಲಗಳಲ್ಲಿ ಅರ್ಹವ್ಯಕ್ತಿಗೆ ಕೊಡುವ ದಾನ ಸಾತ್ವಿಕ[೨]. ಪ್ರತ್ಯುಪಕಾರಕ್ಕೆಂದೋ, ಪ್ರತಿಫಲವನ್ನು ಬಯಸಿಯೋ ('ಕೊಡಬೇಕಲ್ಲ' ಎಂದು) ನೊಂದುಕೊಂಡು ಕೊಡುವ ದಾನ ರಾಜಸ.[೩] ಉಚಿತವಲ್ಲದ ದೇಶಕಾಲಗಳಲ್ಲಿ ಅನರ್ಹರಿಗೆ ಆದರವಿಲ್ಲದೆ ಹೀಗಳೆಯುತ್ತಾ ನೀಡುವ ದಾನ ತಾಮಸ.[೪]

ದಾನ ಅಪೂರ್ವಜ್ಞಾನಸಾಧನಗಳಲ್ಲೊಂದು. ದಾನ ನೀಡುವ ವಸ್ತುವಿನಂತೆ ಅದರ ಹಿಂದಿನ ಮನೋಭಾವವೂ ಅದರ ಸಾರ್ಥಕ್ಯದಲ್ಲಿ ಪ್ರಮುಖಪಾತ್ರ ವಹಿಸುತ್ತದೆ. ಪ್ರತಿಫಲದ ಅಪೇಕ್ಷೆ, ಅನಾದರ, ಪಾತ್ರಾಪಾತ್ರವಿವೇಚನೆ ಇಲ್ಲದಿರುವುದು, ನಿಷಿದ್ಧ ದೇಶಕಾಲಗಳು ದಾನದ ಹಿರಿಮೆಯನ್ನು ತಗ್ಗಿಸುತ್ತವೆ. ಈ ದೋಷಗಳಿಲ್ಲದ ದಾನ ಸಾತ್ವಿಕ. ಅನುಸಂಧಾನ ಸರಿ ಇದ್ದಾಗ ಜಲದಾನ, ಅನ್ನದಾನದಂತಹ ಸಾಮಾನ್ಯದಾನಗಳು

---

೧. ದೇವತ್ವಂ ಕಾಮಯೇ ರಾಮ ಸಶರೀರೋ ಮಹಾಯಶಃ ।
ನ ಮಿಥ್ಯಾಽಹಂ ವದೇ ರಾಮ ದೇವಲೋಕಜಗೀಷಯಾ ॥ -ವಾಲ್ಮೀಕಿರಾಮಾಯಣ(೭/೭೬/೨,೩)
ಜಂಘನಾಮಾಽಸುರಃ ಪೂರ್ವಂ ಗಿರಿಜಾವರದಾನತಃ ।
ಬಭೂವ ಶೂದ್ರಃ ಕಲ್ಪಾಯುಃ ಸ ಲೋಕಕ್ಷಯಕಾಮ್ಯಯಾ ॥
ತಪಶ್ಚಚಾರ ದುರ್ಬುದ್ಧಿರಿಚ್ಛನ್ ಮಾಹೇಶ್ವರಂ ಪದಮ್ ।
ಅನನ್ಯವಧ್ಯಂ ತಂ ತಸ್ಮಾಜ್ಜಘಾನ ಪುರುಷೋತ್ತಮಃ ॥ – ಮ. ಭಾ. ತಾ. ನಿ.(೯/೨೦,೨೧)

೨. ದಾತವ್ಯಮಿತಿ ಯದ್ದಾನಂ ದೀಯತೇಽನುಪಕಾರಿಣೇ ।
ದೇಶೇ ಕಾಲೇ ಚ ಪಾತ್ರೇ ಚ ತದ್ದಾನಂ ಸಾತ್ತ್ವಿಕಂ ಸ್ಮೃತಮ್ ॥ – ಗೀತಾ (೧೭/೨೦)

೩. ಯತ್ ತು ಪ್ರತ್ಯುಪಕಾರಾರ್ಥಂ ಫಲಮುದ್ದಿಶ್ಯ ವಾ ಪುನಃ ।
ದೀಯತೇ ಚ ಪರಿಕ್ಲಿಷ್ಟಂ ತದ್ದಾನಂ ರಾಜಸಂ ಸ್ಮೃತಮ್ ॥ – ಗೀತಾ (೧೭/೨೧)

೪. ಅದೇಶಕಾಲೇ ಯದ್ದಾನಮಪಾತ್ರೇಭ್ಯಶ್ಚ ದೀಯತೇ ।
ಅಸತ್ಕೃತಮವಜ್ಞಾತಂ ತತ್ ತಾಮಸಮುದಾಹೃತಮ್ ॥ – ಗೀತಾ (೧೭/೨೨)

ಅನುಪಮಫಲಕ್ಕೆ ಸಾಧನ. ಬಲಿಚಕ್ರವರ್ತಿಯು ವಾಮನ ರೂಪಿಯಾದ ಭಗವಂತನಿಗೆ ನೀಡಿದ ದಾನ ಅತ್ಯುತ್ತಮ ಸಾತ್ವಿಕ ದಾನ. ಬಲಿದಾನ ಎಂಬ ಪದವು ಪ್ರಸಿದ್ಧಿ ಪಡೆದಿರುವುದು ಈ ಕಾರಣದಿಂದಾಗಿಯೇ. ಸುಧಾಮನು ಶ್ರೀಕೃಷ್ಣನಿಗೆ ಪ್ರದಾನ ಮಾಡಿದ ಒಂದು ಹಿಡಿ ಅವಲಕ್ಕಿ ಮತ್ತೊಂದು ರೀತಿಯ ಅತ್ಯಂತ ಅಪೂರ್ವವೆನ್ನಿಸುವ ಸಾತ್ವಿಕ ದಾನ.

ಅನುಸಂಧಾನ ತಪ್ಪಿದಾಗ ರಾಜ್ಯಕೋಶಗಳಂತಹ ಮಹಾದಾನಗಳಿಗೂ ಸಹ ಕೇಡಿನಲ್ಲೇ ಪರ್ಯವಸಾನ. ದುರ್ಯೋಧನ ಕರ್ಣನಿಗೆ ನೀಡಿದ ಅಂಗರಾಜ್ಯದ ದಾನ ಜಗತ್ತು ಕಂಡ ದಾಖಲೆಯ ವಿಫಲದಾನಗಳಲ್ಲೊಂದು. ದಾನ ನೀಡುವ ಅರ್ಹತೆ ಎಲ್ಲರಿಗೂ ಇದ್ದರೂ, ದಾನ ಸ್ವೀಕರಿಸುವ ಅರ್ಹತೆ ವಿಶೇಷಸಾಧಕರದ್ದು ಮಾತ್ರ. ಅನ್ನದಾನ, ಜಲದಾನಗಳಂತಹ ದಾನಗಳಿಗೆ ಮಾತ್ರ ಈ ನಿಯಮ ಅನ್ವಯಿಸದು.

ಯಕ್ಷಪ್ರಶ್ನೆಯಲ್ಲಿ ಯುಧಿಷ್ಠಿರ ತಿಳಿಸಿರುವಂತೆ ಬ್ರಹ್ಮಜ್ಞಾನಿಗೆ ನೀಡುವ ದಾನ ಧರ್ಮಪ್ರಾಪ್ತಿಗೆಂದು; ನಟ-ನರ್ತಕರಿಗೆ ನೀಡುವ ದಾನ ಕೀರ್ತಿಗೆಂದು; ಭೃತ್ಯರಿಗೆ ನೀಡುವ ದಾನ ಅವರು ತನ್ನ ಬಳಿ ಉಳಿದುಕೊಳ್ಳಲೆಂದು. ರಾಜರಿಗೆ ನೀಡುವುದು ಭಯದಿಂದ ಮಾತ್ರ[೧].

*****

## ತ್ರಿವಿಧ ಶ್ರದ್ಧೆ ಹಾಗೂ ಗುಣತ್ರಯ

ಸಾತ್ತ್ವಿಕಾದಿವಿಭಾಗ ೧೪ನೆಯ ಅಧ್ಯಾಯದಲ್ಲೂ ಬಂದಿದೆ. ಅದಕ್ಕೆ ಗುಣತ್ರಯ-ವಿಭಾಗಯೋಗವೆಂದು ಹೆಸರೂ ಉಂಟು. ಸಾತ್ವಿಕಾದಿವಿಭಾಗ ಈ ೧೭ನೆಯ ಅಧ್ಯಾಯದಲ್ಲೂ ಬಂದಿದೆ. ಮೇಲ್ನೋಟಕ್ಕೆ ಇವೆರಡು ಒಂದೇ ಎಂಬಂತೆ ತೋರುವವು. ಆದರೆ ವಸ್ತುಸ್ಥಿತಿ ಹಾಗಲ್ಲ. ಎರಡೂ ಸಾತ್ವಿಕಾದಿಪ್ರಭೇದಗಳನ್ನೇ ನಿರೂಪಿಸುತ್ತಿದ್ದರೂ, ಮೂಲತಃ ಎರಡರಲ್ಲೂ ವ್ಯತ್ಯಾಸ ಉಂಟು. ಅಲ್ಲಿಯ ಸಾತ್ತ್ವಿಕಾದಿಪ್ರಭೇದವು ಪ್ರಕೃತಿಯ ಗುಣಗಳಾದ ಸತ್ವ, ರಜಸ್ ಮತ್ತು ತಮಸ್ ಎಂಬ ಮೂರು ಗುಣಗಳನ್ನು ಕುರಿತಾದದ್ದು. ಎಲ್ಲರ ದೇಹವೂ ಗುಣತ್ರಯಗಳಿಂದಾಗಿದ್ದು ಆ ಗುಣಗಳ ಪ್ರಭಾವ ಯಾವ ಬಗೆಯಲ್ಲಿ ಕಾಣಿಸಿಕೊಳ್ಳುವುದು ಎಂಬುದು ಅಲ್ಲಿಯ ನಿರೂಪಣೆಯ ಉದ್ದೇಶ. ಈ ೧೭ನೆಯ ಅಧ್ಯಾಯದಲ್ಲಿ ಬಂದಿರುವ ಸಾತ್ವಿಕಾದಿಪ್ರಭೇದ ಪ್ರಕೃತಿಯ ತ್ರಿಗುಣಗಳಿಗೆ ಸಂಬಂಧಿಸಿದ್ದಾಗಿರದೆ, ಸ್ವರೂಪದ ತ್ರಿಗುಣಗಳಿಗೆ ಸಂಬಂಧಿಸಿದ್ದು. ಅದಕ್ಕೇ ಇದಕ್ಕೆ 'ಶ್ರದ್ಧಾತ್ರಯವಿಭಾಗಯೋಗ' ಎಂದು ಹೆಸರುಗಳು. ಪ್ರಕೃತಿಯ ತ್ರಿಗುಣಗಳು

---

೧. ಧರ್ಮಾರ್ಥಂ ಬ್ರಾಹ್ಮಣೇ ದಾನಂ ಯಶೋರ್ಥಂ ನಟನರ್ತಕೇ।
ಭೃತ್ಯೇಷು ಸಂಗ್ರಹಾರ್ಥಂ ಚ ಭಯಾರ್ಥಂ ಚೈವ ರಾಜಸು॥ – ಭಾರತ (ವನ. ೩೧೪/೮೨)

ಪ್ರತಿಯೊಬ್ಬರ ದೇಹದಲ್ಲೂ ಇದ್ದು ಪ್ರಭಾವ ಬೀರುವಂತಹವು. ಇಲ್ಲಿಯ ಸತ್ತ್ವಾದಿಗಳು ಹಾಗಲ್ಲ, ಸಾತ್ತ್ವಿಕಜೀವರ ಸ್ವರೂಪ ಸಾತ್ತ್ವಿಕವೇ. ಉಳಿದೆರಡರ ಸೋಂಕೂ ಅದಕ್ಕಿಲ್ಲ; ಅದರಂತೆ ರಾಜಸ, ತಾಮಸಜೀವರದು ಸಹ. ಎಂದರೆ ಒಬ್ಬ ಜೀವ ಸಾತ್ತ್ವಿಕ, ರಾಜಸ ಮತ್ತು ತಾಮಸ ಎಂಬ ಮೂರರಲ್ಲಿ ಒಂದು ಗುಂಪಿಗೆ ಮಾತ್ರ ಸೇರಿರಲು ಸಾಧ್ಯ. ಪ್ರಕೃತಿಯ ಗುಣಗಳು ಹಾಗಲ್ಲ. ಪ್ರತಿಯೊಬ್ಬರ ದೇಹದಲ್ಲೂ ಈ ಮೂರು ಇರುವಂತಹವೇ. ಪ್ರಮಾಣದಲ್ಲಿ ಮಾತ್ರ ವ್ಯತ್ಯಾಸವಾಗುವುವು. ಅವು ಅನಿತ್ಯ; ಸ್ವರೂಪದ ಸತ್ತ್ವಾದಿಪ್ರಭೇದ ನಿತ್ಯವಾದದ್ದು. ಇದನ್ನು ಸ್ಫುಟಪಡಿಸಿ ವಿವರಿಸಿದ ಶ್ರೇಯಸ್ಸು ಮಧ್ವಭಾಷ್ಯದ್ದು. ಮಧ್ವಸಿದ್ಧಾಂತದ ಜೀವತ್ರೈವಿಧ್ಯ ತತ್ತ್ವ ಈ ೧೭ನೆಯ ಅಧ್ಯಾಯದ ಹಿನ್ನೆಲೆಯಲ್ಲಿ ಅತ್ಯಂತ ಸಂಗತವಾದುದು .

## ಓಂ, ತತ್, ಸತ್ ಎಂಬ ಭಗವಂತನ ನಾಮಗಳು

'ಓಂ',[೧] 'ತತ್' ಮತ್ತು 'ಸತ್' ಎಂಬುದಾಗಿ ಭಗವಂತನ ನಾಮ ಮೂರು ಬಗೆ. ಅವನಿಂದಲೇ ಬ್ರಾಹ್ಮಣರು ಹುಟ್ಟಿದರು; ವೇದಗಳು ಅಭಿವ್ಯಕ್ತವಾದವು; ಮತ್ತು ಯಜ್ಞಗಳು ರೂಪುಗೊಂಡವು. ಆದ್ದರಿಂದ ಶಾಸ್ತ್ರವಿಧಾನಕ್ಕೆ ಅನುಗುಣವಾದ ಬ್ರಹ್ಮವಾದಿಗಳ ಯಜ್ಞ, ದಾನ ಮತ್ತು ತಪಸ್ಸು ಎಂಬ ಕಾರ್ಯಗಳು ಸದಾ 'ಓಂ' ಎಂಬುದಾಗಿ ಭಗವತ್ಸ್ಮರಣೆಯೊಂದಿಗೇ ನಡೆಯುವವು.[೨] ಪರೋಕ್ಷವಾದ ಸ್ವರ್ಗಾದಿಫಲಗಳನ್ನು ಉದ್ದೇಶಿಸದೆ, 'ತತ್' ಎನ್ನಿಸಿದ ಭಗವಂತನಿಗೋಸ್ಕರವಾಗಿ ತೆರತೆರನಾದ ಯಜ್ಞ, ದಾನ ಮತ್ತು ತಪಸ್ಸು ಎಂಬ ವಿವಿಧಕಾರ್ಯಗಳನ್ನು ಮೋಕ್ಷ ಬಯಸುವ ಜನರು ಆಚರಿಸುವರು.

*****

ಪರಬ್ರಹ್ಮನಿಂದ ರೂಪುಗೊಂಡ ಬ್ರಾಹ್ಮಣರು ಪರಬ್ರಹ್ಮನಿಂದ ಅಭಿವ್ಯಕ್ತವಾದ ವೇದಮಂತ್ರಗಳ ಮೂಲಕ ಪರಬ್ರಹ್ಮನ ಆರಾಧನರೂಪವಾದ ಯಜ್ಞವನ್ನು ಆಚರಿಸಬೇಕು ಎಂಬುದು ಇಲ್ಲಿಯ ಭಾವ. ಆ ಮೂರರ ಹಿಂದೆ ಭಗವಂತನ ಪ್ರಧಾನಪಾತ್ರವಿರುವುದೇ ಇದಕ್ಕೆ ಕಾರಣ. ಆ ಮೂರನ್ನು ಬಿಡುವುದು ಅಪಾಯಕರ; ಆ ಮೂರನ್ನು ಹಿಡಿದು ಅವುಗಳಿಗೆ ಕಾರಣನಾದ ಭಗವಂತನನ್ನು ಬಿಡುವುದು ಇನ್ನೂ ಹೆಚ್ಚು ಅಪಾಯಕರ.

---

೧. ಓಂ ತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಃ ಸ್ಮೃತಃ।
ಬ್ರಾಹ್ಮಣಾಸ್ತೇನ ವೇದಾಶ್ಚ ಯಜ್ಞಾಶ್ಚ ವಿಹಿತಾಃ ಪುರಾ ॥ – ಗೀತಾ (೧೭/೨೩)

೨. ತಸ್ಮಾದೋಮಿತ್ಯುದಾಹೃತ್ಯ ಯಜ್ಞದಾನತಪಃಕ್ರಿಯಾಃ।
ಪ್ರವರ್ತಂತೇ ವಿಧಾನೋಕ್ತಾಃ ಸತತಂ ಬ್ರಹ್ಮವಾದಿನಾಮ್ ॥
ತದಿತ್ಯನಭಿಸಂಧಾಯ ಫಲಂ ಯಜ್ಞತಪಃಕ್ರಿಯಾಃ।
ದಾನಕ್ರಿಯಾಶ್ಚ ವಿವಿಧಾಃ ಕ್ರಿಯಂತೇ ಮೋಕ್ಷಕಾಂಕ್ಷಿಭಿಃ ॥ – ಗೀತಾ (೧೭/೨೪,೨೫)

ಇರುವಿಕೆ,[೧] ಮತ್ತು ಸಜ್ಜನಿಕೆ ಎಂಬ ಅರ್ಥದಲ್ಲಿ 'ಸತ್' ಎಂಬ ಶಬ್ದ ಪ್ರಯೋಗಿ-ಸಲ್ಪಡುತ್ತದೆ. ಹಾಗೆಯೇ ಸತ್ಕರ್ಮ ಎಂಬ ಅರ್ಥದಲ್ಲೂ ಸತ್ ಶಬ್ದದ ಬಳಕೆ ಉಂಟು. ಯಜ್ಞದಲ್ಲೂ, ತಪಸ್ಸಿನಲ್ಲೂ ಮತ್ತು ದಾನದಲ್ಲೂ ಇರುವ ನಿಷ್ಠೆಯನ್ನು ಸಹ ಸತ್ ಎನ್ನುವರು. ಭಗವತ್ಪ್ರೀತಿಗೆಂದು ಆಚರಿಸುವ ಕರ್ಮವನ್ನೂ ಸಹ ಸತ್[೨] ಎಂದೇ ಕರೆಯುವರು. ಶ್ರದ್ಧೆಯಿಲ್ಲದೆ ಮಾಡಿದ ಹೋಮ, ಕೊಟ್ಟ ದಾನ, ಮಾಡಿದ ತಪಸ್ಸು ಮತ್ತು ಎಸಗಿದ ಕಾರ್ಯ 'ಅಸತ್' ಎನ್ನಿಸುವುದು. ಅದು ಅಲ್ಲಿಗೂ ಸಲ್ಲದು; ಇಲ್ಲಿಗೂ ಆಗದು.[೩]

*****

## 'ಸತ್' ಶಬ್ದದ ಅರ್ಥವೈವಿಧ್ಯ

ಈ ಅಧ್ಯಾಯದ ಕೊನೆಯ ಭಾಗದಲ್ಲಿ 'ಸತ್'ಎಂಬ ಶಬ್ದದ ಅರ್ಥವನ್ನು ಹೀಗೆ ವಿವೇಚಿಸಿ, ಈ ಅರ್ಥವನ್ನು ಒಳಗೊಳ್ಳದ ಕಾರ್ಯಗಳೆಲ್ಲ ಅಸತ್ ಎಂದು ಭಗವಂತನು ಕರೆದಿರುವನು. ಇರುವಿಕೆ, ಸಜ್ಜನಿಕೆ, ಸತ್ಕರ್ಮ, ಯಜ್ಞ, ತಪಸ್ಸು ಮತ್ತು ದಾನಗಳಲ್ಲಿ ನಿಷ್ಠೆ ಮತ್ತು ಭಗವತ್ಪ್ರೀತಿಗೆಂದು ಆಚರಿಸುವ ಕರ್ಮ – ಇವುಗಳಿಗೆಲ್ಲ ಸತ್ ಎಂದು ಹೆಸರು. ಇವೆಲ್ಲವುಗಳು ಇದ್ದಾಗ ಮಾಡುವ ಹೋಮ, ದಾನ, ತಪಸ್ಸು ಮೊದಲಾದ ಕರ್ಮಗಳೆಲ್ಲ ಸಾರ್ಥಕ.

ಹೋಮ, ದಾನ, ತಪಸ್ಸುಗಳಂತಹ ಶ್ರೇಷ್ಠಕಾರ್ಯಗಳೂ ಸಹ ಶ್ರದ್ಧೆಯಿಲ್ಲದೆ ಆಚರಿಸಲ್ಪಟ್ಟಾಗ ಅಸತ್ ಎನ್ನಿಸುವವು. ಅವಕ್ಕೆ ಈ ಲೋಕದಲ್ಲೂ ಫಲ ಇರದು. ಪರಲೋಕದಲ್ಲೂ ಸುಖ ಸಿಗದು. ಮಾಡುವ ಕಾರ್ಯಗಳಷ್ಟೇ ಪ್ರಮುಖವಾಗಿ, ಅದರ ಹಿಂದಿನ ಶ್ರದ್ಧೆ ಫಲಪ್ರಾಪ್ತಿಯ ಸಾಧನವೆನ್ನಿಸುವವು. ಆದ್ದರಿಂದ ಯಾವುದೇ ಸತ್ಕರ್ಮವನ್ನು ಆಚರಿಸುವಾಗಲೂ ಅದರ ಹಿಂದೆ ಸಾತ್ತ್ವಿಕಶ್ರದ್ಧೆ ಇರುವಂತೆ ಎಚ್ಚರವಹಿಸಬೇಕು. ಅಂತಹ ಶ್ರದ್ಧೆ ಮೂಡಲು ತತ್ತ್ವದ ಪರಿಜ್ಞಾನವು ಆವಶ್ಯಕ. ಅಂತಹ ತತ್ತ್ವಜ್ಞಾನಕ್ಕೆ ಶಾಸ್ತ್ರಗಳೇ ಪ್ರಧಾನ ಆಕರ. ಆದ್ದರಿಂದ ಅವುಗಳ ತಿಳಿವಿಗೆ ಸದಾ ಪ್ರಯತ್ನಿಸಬೇಕು ಎಂದು ಭಾವ.

*****

---

೧. ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ ಪ್ರಯುಜ್ಯತೇ ।
ಪ್ರಶಸ್ತೇ ಕರ್ಮಣಿ ತಥಾ ಸಚ್ಛಬ್ದಃ ಪಾರ್ಥ ಯುಜ್ಯತೇ ॥ – ಗೀತಾ (೧೭/೨೬)

೨. ಯಜ್ಞೇ ತಪಸಿ ದಾನೇ ಚ ಸ್ಥಿತಿಃ ಸದಿತಿ ಚೋಚ್ಯತೇ ।
ಕರ್ಮ ಚೈವ ತದರ್ಥೀಯಂ ಸದಿತ್ಯೇವಾಭಿಧೀಯತೇ ॥ – ಗೀತಾ (೧೭/೨೭)

೩. ಅಶ್ರದ್ಧಯಾ ಹುತಂ ದತ್ತಂ ತಪಸ್ತಪ್ತಂ ಕೃತಂ ಚ ಯತ್ ।
ಅಸದಿತ್ಯುಚ್ಯತೇ ಪಾರ್ಥ ನ ಚ ತತ್ ಪ್ರೇತ್ಯ ನೋ ಇಹ ॥ – ಗೀತಾ (೧೭/೨೮)

ಸಮಾಜದಲ್ಲಿ ಅನೇಕರು ಯಜ್ಞಯಾಗಾದಿಸತ್ಕರ್ಮಗಳಲ್ಲಿ ನಿರತರಾಗಿದ್ದರೂ, ನಿರೀಕ್ಷಿತವಾದ ಸಾತ್ತ್ವಿಕಫಲದ ಹಿನ್ನೆಲೆ ಸಾಮಾನ್ಯವಾಗಿ ಅವುಗಳಿಗಿರುವುದಿಲ್ಲ; ಬದಲಾಗಿ ಅವರ ಜೀವನ ಸಾವುನೋವುಗಳ ಅನರ್ಥಪರಂಪರೆಯನ್ನೇ ಹೊಂದಿರುತ್ತದೆ. ಹೊರಗಿನವರಿಗೆ ಅಂತಹ ಶ್ರೇಷ್ಠಕರ್ಮವನ್ನು ಆಚರಿಸಿಯೂ, ದುರಂತದಿಂದ ಪಾರಾಗದ ಅಂತಹ ಜನಗಳ ಸ್ಥಿತಿ ಸತ್ಕರ್ಮಗಳ ಹಿರಿಮೆಯನ್ನೇ ಪ್ರಶ್ನಿಸುವಂತೆ ಮಾಡುತ್ತದೆ. ಅಂತಹ ಗೊಂದಲವನ್ನು ಇಲ್ಲಿಯ ಶ್ರದ್ಧೆಯ ವಿವರ ಪರಿಹರಿಸುತ್ತದೆ. ಅಂತಹ ಸತ್ಕರ್ಮಗಳನ್ನು ಮಾಡಿಯೂ, ನಿರೀಕ್ಷಿತಫಲ ಕಾಣದಿದ್ದಲ್ಲಿ ಅದಕ್ಕೆ ಆಚರಿಸುವವನ ಅರ್ಹತೆಯ ಅಭಾವವೇ ಪ್ರಮುಖ ಎಂದು ತಿಳಿಯಬೇಕು. ಶ್ರದ್ಧೆ ಅರ್ಹತೆಯ ತಿರುಳು. ಅದೇ ಕಳಂಕಿತವಾಗಿದ್ದಲ್ಲಿ ಎಂತಹ ಸತ್ಕರ್ಮವೂ ನಿರೀಕ್ಷಿತಫಲ ಕೊಡಲಾರದು ಎಂಬ ರಹಸ್ಯ ಇದರಿಂದ ಪ್ರತಿಪಾದಿತ.

ಈ ಬಗೆಯ ಸಾತ್ವಿಕಾದಿ ತ್ರೈವಿಧ್ಯದ ಪರಿಕಲ್ಪನೆ ಭಗವದ್ಗೀತಾದಿ ಶಾಸ್ತ್ರಗಳ ಅಪೂರ್ವ ಕೊಡುಗೆ. ನಮ್ಮ ನಿತ್ಯ ಜೀವನದಲ್ಲಿಯೂ ಸಹ ಉತ್ತಮ, ಮಧ್ಯಮ, ಅಧಮ ಎಂಬುದಾಗಿ ಜನರನ್ನು ಗುರುತಿಸುವುದು ಎಲ್ಲರಿಗೂ ತಿಳಿದಿದ್ದೆ ಆಗಿದೆ. ಅದರಂತೆ ವಸ್ತುಗಳಲ್ಲೂ ಸಹ ಇಂತಹ ತ್ರೈವಿಧ್ಯದ ಚಿಂತನೆ ಪ್ರತಿ ಹಂತದಲ್ಲೂ ಎಲ್ಲರ ಅನುಭವಕ್ಕೂ ಬಂದಿರುವಂತಹ ವಿಷಯವೇ ಆಗಿದೆ. ಇಂತಹ ತ್ರೈವಿಧ್ಯವು ಉತ್ತಮ, ಮಧ್ಯಮ, ಅಧಮ ಎಂಬುದಾಗಿ ಒಂದು ಬಗೆಯದಾದರೆ ಸಾತ್ವಿಕ, ರಾಜಸ, ತಾಮಸ ಎಂಬುದಾಗಿ ಮತ್ತೊಂದು ಬಗೆ, ಸಾತ್ವಿಕದಲ್ಲಿಯೂ ಉತ್ತಮ, ಮಧ್ಯಮ, ಅಧಮ ಎಂಬುದಾಗಿ ವಿಭಾಗಗಳು ಕಂಡುಬರುವುದು ಅನುಭವಕ್ಕೆ ಅರಿವಾಗಿರುವ ಸಂಗತಿ.

*****

# ಅಧ್ಯಾಯ - ೧೮

ಹದಿನೆಂಟನೆಯ ಅಧ್ಯಾಯ ಗೀತೆಯ ಕೊನೆಯ ಅಧ್ಯಾಯ. ಉಪಸಂಹಾರವು ಪ್ರಬಲವೆಂಬುದು ಶಾಸ್ತ್ರಪ್ರಕ್ರಿಯೆ; ಲೋಕಪ್ರಕ್ರಿಯೆಯೂ ಅಂತೆಯೇ. ಅದಕ್ಕೆಂದೇ ಇದಕ್ಕೆ ವಿಶೇಷಪ್ರಾಶಸ್ತ್ಯ. ಗೀತೆಯ ಅಧ್ಯಾಯಗಳಲ್ಲಿ ಎಪ್ಪತ್ತೆಂಟು ಶ್ಲೋಕಗಳ ಈ ಅಧ್ಯಾಯವೇ ಅತ್ಯಂತ ದೊಡ್ಡದು. ಇಡೀ ಗೀತೆಯ [೧]ಸಾರಸಂಗ್ರಹ ಎಂಬುದು ಇದರ ಪ್ರಾಶಸ್ತ್ಯ ಎಂದು ಆಚಾರ್ಯವಾಣಿ.

*****

ಅರ್ಜುನನ ಸನ್ನ್ಯಾಸದ ಮತ್ತು ತ್ಯಾಗಗಳ ಸ್ವರೂಪವನ್ನು ತಿಳಿಯಬಯಸುವ ಅರ್ಜುನನ ಪ್ರಶ್ನೆಗೆ ಉತ್ತರರೂಪವಾಗಿ ಈ ಅಧ್ಯಾಯದ ಪ್ರಾರಂಭ.

*****

## ತ್ಯಾಗ ಸನ್ನ್ಯಾಸಗಳ ವಿವೇಚನೆ

ಸನ್ನ್ಯಾಸವೆಂದರೆ ಕಾಮ್ಯಕರ್ಮಗಳ ಪರಿತ್ಯಾಗ ಎಂದು ಕೆಲವು ಜ್ಞಾನಿಗಳ ಮತ. ಭಗವತ್ಪ್ರೀತಿಯ ಹೊರತು, ಬೇರಾವ ಫಲವನ್ನೂ ಬಯಸದಿರುವುದು ತ್ಯಾಗ ಎಂದು ಬೇರೆ ಕೆಲವು ಜ್ಞಾನಿಗಳ ಮತ. ಬಂಧನಕ್ಕೆ ಕಾರಣವಾಗುವ ಕಾಮ್ಯಕರ್ಮವಷ್ಟೆ ತ್ಯಾಜ್ಯ ಎಂದು ಮತ್ತೆ ಕೆಲವು ಪ್ರಾಜ್ಞರ ಅಭಿಮತ. ಯಜ್ಞ, ದಾನ ಮತ್ತು ತಪೋರೂಪವಾದ ಕರ್ಮವನ್ನು ಎಂದೂ ತೊರೆಯಲಾಗದು ಎಂಬುದು ಮತ್ತೆ ಕೆಲವು ಜ್ಞಾನಿಗಳ ಭಾವ.[೨] ಹೀಗೆ ನಾಲ್ಕು ಬಗೆಯ ವಿವರವನ್ನು ಅರ್ಜುನನ ಪ್ರಶ್ನೆಗೆ ಉತ್ತರವನ್ನಾಗಿ ನೀಡಿ, ಶ್ರೀಕೃಷ್ಣ ಕೊನೆಗೆ ತನ್ನ ನಿರ್ಣಯವನ್ನು ತಿಳಿಸುವನು. ಇಲ್ಲಿಯ ನಾಲ್ಕು ಪಕ್ಷಗಳನ್ನು ಉಲ್ಲೇಖಿಸುವಾಗಲು 'ಕವಯಃ', 'ವಿಚಕ್ಷಣಾಃ', 'ಮನೀಷಿಣಃ' ಎನ್ನುವ ಮೂಲಕ ಅವೆಲ್ಲವೂ ಗ್ರಾಹ್ಯವಾದವುಗಳೇ ಎಂಬುದಾಗಿ ಸೂಚಿಸಿರುವನು ಎಂಬ ವಿಶೇಷಾರ್ಥವನ್ನು ಶ್ರೀಮಧ್ವಾಚಾರ್ಯರು ತಿಳಿಸಿರುವರು.

*****

---

೧. ಪೂರ್ವೋಕ್ತಂ ಸಾಧನಂ ಸರ್ವಂ ಸಂಕ್ಷಿಪ್ಯೋಪಸಂಹರತ್ಯನೇನಾಧ್ಯಾಯೇನ। – ಗೀ. ಭಾ.
ಸರ್ವಾಧ್ಯಾಯೋಕ್ತಧರ್ಮಸ್ಯ ಸಮಾಸತೋ ನಿರ್ಣಯಾತ್ಮಕೋಽನುಕ್ತತ್ವೈಗುಣ್ಯವಾದೀ ಚಾಯಮ್। – ಗೀ. ತಾ.

೨. ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸಂನ್ಯಾಸಂ ಕವಯೋ ವಿದುಃ।
ಸರ್ವಕರ್ಮಫಲತ್ಯಾಗಂ ಪ್ರಾಹುಸ್ತ್ಯಾಗಂ ವಿಚಕ್ಷಣಾಃ॥
ತ್ಯಾಜ್ಯಂ ದೋಷವದಿತ್ಯೇಕೇ ಕರ್ಮ ಪ್ರಾಹುರ್ಮನೀಷಿಣಃ।
ಯಜ್ಞದಾನತಪಃಕರ್ಮ ನ ತ್ಯಾಜ್ಯಮಿತಿ ಚಾಪರೇ॥
ನಿಶ್ಚಯಂ ಶೃಣು ಮೇ ತತ್ರ ತ್ಯಾಗೇ ಭರತಸತ್ತಮ।
ತ್ಯಾಗೋ ಹಿ ಪುರುಷವ್ಯಾಘ್ರ ತ್ರಿವಿಧಃ ಸಂಪ್ರಕೀರ್ತಿತಃ॥ – ಗೀತಾ (೧೮/೨-೪)

## ಯಜ್ಞ - ದಾನ - ತಪಸ್ಸು

ತ್ಯಾಗ ಮೂರು ವಿಧ ಎಂದು ತಿಳಿಸುವ ಭಗವಂತನು ಯಜ್ಞ, ದಾನ ಮತ್ತು ತಪಸ್ಸು ಎಂಬ ಮೂರು ಕರ್ಮಗಳು ವಿವೇಕಿಗಳನ್ನು ಪವಿತ್ರವಾಗಿಸುವಂತಹವುಗಳು.[೧] ಆದ್ದರಿಂದ ಅವುಗಳನ್ನು ಎಂದೂ ತ್ಯಜಿಸಲೇಕೂಡದು[೨] ಎಂದು ನಿರೂಪಿಸುವನು. ಕರ್ಮಾಚರಣೆಯ ಉದ್ದೇಶವು ಅಂತಃಕರಣದ ಶುದ್ಧಿ. ಶುದ್ಧಿಗೊಂಡ ಅಂತಃಕರಣ ತತ್ತ್ವಜ್ಞಾನವನ್ನು ಗ್ರಹಿಸಲು ಶಕ್ತವಾಗುವುದು. ಅಂತಹ ಕರ್ಮಗಳಲ್ಲಿ ವಿಶೇಷವಾಗಿ ಪಾವನಗೊಳಿಸುವ ಶಕ್ತಿ ಯಜ್ಞ, ದಾನ ಹಾಗೂ ತಪಸ್ಸುಗಳದ್ದು; ಆದ್ದರಿಂದಲೇ ಅವುಗಳನ್ನೆಂದೂ ತೊರೆಯಕೂಡದು. ಇಲ್ಲಿ ಯಜ್ಞ ಎಂದರೆ ದೇವತೆಗಳನ್ನು ಉದ್ದೇಶಿಸಿ, ದ್ರವ್ಯಗಳನ್ನು ಸಮರ್ಪಿಸುವ ಪ್ರಕ್ರಿಯೆ. ದಾನವೆಂದರೆ ಅನ್ನದ್ರವ್ಯಾದಿಗಳ ದಾನ. ತಪಸ್ಸು ಎಂದರೆ ಕೃಚ್ಛ್ರ, ಚಾಂದ್ರಾಯಣ ಮೊದಲಾದ ಕಠಿಣವ್ರತಗಳು. ಏಕಾದಶೀ, ಕೃಷ್ಣಾಷ್ಟಮಿಗಳು ಸಹ. ಅವುಗಳ ಶಕ್ತಿಯಂತೂ ಸಕಲಪಾಪಗಳನ್ನು ತೊಡೆಯುವಂತಹುದು.

ಯಜ್ಞದಿಂದ ಸಿದ್ಧಿ ಪಡೆದವರಲ್ಲಿ ಇಂದ್ರಾದಿದೇವತೆಗಳನ್ನು ಉಲ್ಲೇಖಿಸಬಹುದು. ದಾನದ ಸಿದ್ಧಿಗೆ ಬಲಿಚಕ್ರವರ್ತಿಯು ಅಪೂರ್ವನಿದರ್ಶನ. ಯಕ್ಷಪ್ರಶ್ನೆಯಲ್ಲೂ "ಸಾಯುವವನ ಒಡನಾಡಿ ಯಾರು?" ಎಂಬ ಪ್ರಶ್ನೆಗೆ 'ದಾನ' ಎಂಬುದೇ ಯುಧಿಷ್ಠಿರ ನೀಡಿದ ಉತ್ತರ. ತಪಸ್ಸಿನ ಸಿದ್ಧಿಗೆ ಬ್ರಹ್ಮದೇವರು ಶ್ರೇಷ್ಠನಿದರ್ಶನ. ಅವರು ನಾರಾಯಣನ ನಾಭಿಕಮಲದಿಂದ ಜನಿಸುತ್ತಿದ್ದಂತೆಯೇ ಅವರ ಕಿವಿಗೆ ಬಿದ್ದ ಶಬ್ದ 'ತಪ' ಎಂದು. ಅದರಂತೆ ನಡೆದು ಅವರು ಗಳಿಸಿದ ಸಿದ್ಧಿ ಸುಪ್ರಸಿದ್ಧ. ತಪಸ್ಸನ್ನು ಜ್ಞಾನಿಗಳ ಧನ ಎಂದೇ ಭಾಗವತ ಕರೆದಿದೆ. ಅದಕ್ಕೆಂದೇ ಜ್ಞಾನಿಗಳು ತಪೋಧನರೆಂದೇ ಪ್ರಸಿದ್ಧಿಯೂ ಸಹ.

ಈ ಯಜ್ಞಾದಿಕರ್ಮಗಳನ್ನು ಎಂದೂ ತೊರೆಯಕೂಡದು. ಅವುಗಳನ್ನು ಮಾಡ-ಬೇಕಾದಾಗ ತೊರೆಯಬೇಕಾದದ್ದು ಅವುಗಳ ಮೇಲಿನ ನಂಟು ಹಾಗೂ ಫಲದ ಮೇಲಿನ ಹಂಬಲವನ್ನು ಮಾತ್ರ. ಕರ್ಮ ತೊರೆಯುವುದು ಮಾರಕ; ಅವುಗಳನ್ನು ಆಚರಿಸಿ ಫಲಗಳನ್ನು ಮಾತ್ರ ತೊರೆಯುವುದು ತಾರಕ.

*****

ಇಂತಹ ತ್ಯಾಗವೂ ಸಾತ್ತ್ವಿಕ, ರಾಜಸ ಹಾಗೂ ತಾಮಸ ಎಂಬುದಾಗಿ ಮೂರು ಬಗೆಯದು. ವರ್ಣಾಶ್ರಮಗಳಿಗೆ ವಿಹಿತವಾದ ಕರ್ಮಗಳ ತ್ಯಾಗ ಸರ್ವಥಾ ಯುಕ್ತವಲ್ಲ.

---

೧. ಯಜ್ಞದಾನತಪಃಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ ।
ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್ ॥ - ಗೀತಾ (೧೮/೫)

೨. ಏತಾನ್ಯಪಿ ತು ಕರ್ಮಾಣಿ ಸಂಗಂ ತ್ಯಕ್ತ್ವಾ ಫಲಾನಿ ಚ ।
ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಮ್ ॥ - ಗೀತಾ (೧೮/೬)

ತಿಳುವಳಿಕೆ ಇಲ್ಲದೆ ಅವುಗಳನ್ನು ತೊರೆಯುವುದು ತಾಮಸತ್ಯಾಗವೆನ್ನಿಸಿರುವುದು.[೧] ದುಃಖಕರವೆಂದು ಬಗೆದು ದೇಹ ಬಳಲೀತು, ಎಂಬ ಅಂಜಿಕೆಯಿಂದ, ಕರ್ತವ್ಯವನ್ನು ತೊರೆಯುವುದು ರಾಜಸತ್ಯಾಗ.[೨] ಇದರಿಂದ ತ್ಯಾಗದ ಫಲವಾದ ಭಗವತ್ಪ್ರೀತಿ ಎಂದೂ ಲಭಿಸದು. ಕರ್ತವ್ಯವೆಂದು ಬಗೆದು ವಿಹಿತಕರ್ಮವನ್ನು ಮಾಡುತ್ತಲೇ ಅಭಿಮಾನವನ್ನೂ, ಫಲವನ್ನೂ ತೊರೆಯುವುದು ಸಾತ್ತ್ವಿಕತ್ಯಾಗ[೩] ಎನ್ನಿಸುವುದು. ಸತ್ತ್ವಗುಣವನ್ನು ಮೈಗೂಡಿಸಿಕೊಂಡು ಭಗವಂತನನ್ನು ಅರಿತು, ಸಂಶಯ ತೊರೆದು, ಸಕಲಕರ್ಮಗಳನ್ನೂ ಭಗವಂತನಿಗೆ ಸಮರ್ಪಿಸುವ ತ್ಯಾಗಿಯು ಸಾತ್ತ್ವಿಕತ್ಯಾಗಿ. ಅವನು ಅಹಿತವೆಂದು ವಿಹಿತಕರ್ಮವನ್ನು ದ್ವೇಷಿಸನು; ಹಿತವೆಂದು ನಿಷಿದ್ಧಕರ್ಮದಲ್ಲಿ[೪] ತೊಡಗನು. ಹಿತವೋ, ಅಹಿತವೋ ಕರ್ತವ್ಯ ಎಂಬ ಒಂದೇ ಕಾರಣಕ್ಕಾಗಿ ತನಗೆ ವಿಹಿತವಾದ ಕರ್ಮವನ್ನು ತಪ್ಪದೇ ಮಾಡುವುದು ಸಾತ್ವಿಕ ತ್ಯಾಗಿಯ ಲಕ್ಷಣ ಎಂದು ಭಾವ.

*****

## ಕರ್ಮತ್ಯಾಗವು ಅಶಕ್ಯ

ಕರ್ಮತ್ಯಾಗವೇ ತ್ಯಾಗ ಎಂದು ಏಕೆ ಭಾವಿಸಬಾರದು? ಕರ್ಮಫಲತ್ಯಾಗವನ್ನೇ ತ್ಯಾಗ ಎಂದು ತೊರೆಯಬೇಕು ಎಂಬ ಪ್ರಶ್ನೆಗೆ ಅವಕಾಶವಿದೆ. ಅದಕ್ಕೆ ದೇಹ ಹೊಂದಿದವನು ಕರ್ಮಗಳನ್ನು ಸಂಪೂರ್ಣವಾಗಿ ತೊರೆಯಲು ಸರ್ವಥಾ[೫] ಅಶಕ್ಯ. ಆದ್ದರಿಂದ ಯಾವನು ಕರ್ಮಫಲವನ್ನು ತೊರೆಯುವನೋ, ಅವನೇ ತ್ಯಾಗಿ ಎನ್ನಿಸುವನು. ದೇಹಕ್ಕೂ, ಕರ್ಮಕ್ಕೂ ನಂಟು. ದೇಹವಿರುವವರೆಗೂ ಕರ್ಮತ್ಯಾಗವು ಅಸಾಧ್ಯ. ಒಂದಲ್ಲ ಒಂದು ಕರ್ಮ ದೇಹ ತೊರೆಯುವವರೆಗೂ ನಡೆಯುತ್ತಿರುತ್ತದೆ. ಆದ್ದರಿಂದ ಕರ್ಮತ್ಯಾಗವನ್ನೇ ತ್ಯಾಗ ಎಂದು ಎಂದೂ ಅರ್ಥಮಾಡಲು ಸಾಧ್ಯವಾಗದು.

*****

---

೧. ನಿಯತಸ್ಯ ತು ಸಂನ್ಯಾಸಃ ಕರ್ಮಣೋ ನೋಪಪದ್ಯತೇ ।
ಮೋಹಾತ್ ತಸ್ಯ ಪರಿತ್ಯಾಗಸ್ತಾಮಸಃ ಪರಿಕೀರ್ತಿತಃ ॥ – ಗೀತಾ (೧೮/೭)

೨. ದುಃಖಮಿತ್ಯೇವ ಯತ್ ಕರ್ಮ ಕಾಯಕ್ಲೇಶಭಯಾತ್ ತ್ಯಜೇತ್ ।
ಸ ಕೃತ್ವಾ ರಾಜಸಂ ತ್ಯಾಗಂ ನೈವ ತ್ಯಾಗಫಲಂ ಲಭೇತ್ ॥ – ಗೀತಾ (೧೮/೮)

೩. ಕಾರ್ಯಮಿತ್ಯೇವ ಯತ್ ಕರ್ಮ ನಿಯತಂ ಕ್ರಿಯತೇऽರ್ಜುನ ।
ಸಂಗಂ ತ್ಯಕ್ತ್ವಾ ಫಲಂ ಚೈವ ಸ ತ್ಯಾಗಃ ಸಾತ್ತ್ವಿಕೋ ಮತಃ ॥ – ಗೀತಾ (೧೮/೯)

೪. ನ ದ್ವೇಷ್ಟ್ಯಕುಶಲಂ ಕರ್ಮ ಕುಶಲೇ ನಾನುಷಜ್ಜತೇ ।
ತ್ಯಾಗೀ ಸತ್ತ್ವಸಮಾವಿಷ್ಟೋ ಮೇಧಾವೀ ಛಿನ್ನಸಂಶಯಃ ॥ – ಗೀತಾ (೧೮/೧೦)

೫. ನ ಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ ।
ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ ॥ – ಗೀತಾ (೧೮/೧೧)

## ಮೂರು ಬಗೆಯ ಕರ್ಮಫಲ

ಕರ್ಮದ ಫಲ ಪ್ರಿಯ, ಅಪ್ರಿಯ, ಮಿಶ್ರ ಎಂಬುದಾಗಿ ಮೂರು ಬಗೆ. ಇದು ಫಲತ್ಯಾಗ ಮಾಡದವರಿಗೆ ಮರಣಾನಂತರ ತಟ್ಟುವುದು. ಫಲದ ಬಯಕೆ ತೊರೆದವರಿಗೆ ಮಾತ್ರ ಎಂದೂ ತಟ್ಟದು. ಫಲಾಪೇಕ್ಷೆ ಇದ್ದವರಿಗೆ ಮಾತ್ರ ಪ್ರಿಯಾಪ್ರಿಯಾದಿಫಲದ ನಂಟು. ಅದನ್ನು ತೊರೆದವರಿಗೆ ಅದರ ಪ್ರಸಕ್ತಿಯೇ ಇಲ್ಲ. ಇಲ್ಲಿ ಇಷ್ಟವೆಂದರೆ ಕಾಮ್ಯಕರ್ಮಿಗಳಿಗೆ ಪ್ರಿಯವೆನ್ನಿಸುವ ಸ್ವರ್ಗಾದಿಫಲ; ಅನಿಷ್ಟವೆಂದರೆ ನರಕಾದಿಕೇಡು; ಮಿಶ್ರವೆಂದರೆ ಇಷ್ಟಾನಿಷ್ಟಸಂಗಮವಾದ ಮನುಷ್ಯಾದಿಜನ್ಮ ಎಂದು ಅರ್ಥ.

*****

## ಕರ್ಮಸಿದ್ಧಿಯ ಪಂಚಕಾರಣಗಳು

ಇಷ್ಟನ್ನು ತಿಳಿಸಿದ ಭಗವಂತ ಪ್ರತಿಯೊಂದು ಕಾರ್ಯದ ಸಿದ್ಧಿಗೂ ನೆರವಾಗುವ ಕಾರಣಗಳನ್ನು ಐದು ಎಂಬುದಾಗಿ ವಿವರಿಸುವನು.[೧] ಇಲ್ಲಿ ಅಧಿಷ್ಠಾನವೆಂದರೆ ದೇಹ, ಭೂಮಿ ಮೊದಲಾದ ನೆಲೆಗಳು. ಕರ್ತಾ ಎಂದರೆ ಪರಾಧೀನಕರ್ತೃವಾದ ಜೀವ. ಕರಣಗಳು ಎಂದರೆ ಇಂದ್ರಿಯಗಳು ಹಾಗೂ ಸ್ರುಕ್‌ಸ್ರುವಾದಿಗಳು. ನಾನಾತೆರನಾದ ಚೇಷ್ಟೆಗಳು ಎಂದರೆ ಹಸ್ತಾದಿಕ್ರಿಯೆಗಳು ಹಾಗೂ ಧ್ಯಾನರೂಪವಾದ ಮಾನಸಿಕಕ್ರಿಯೆ. ಐದನೆಯದು ಭಗವಂತ. ಹೀಗೆ ಅಧಿಷ್ಠಾನ, ಕರ್ತಾ ಬಗೆಬಗೆಯ ಕರಣಗಳು, ತೆರತೆರನಾದ ಪ್ರತ್ಯೇಕಚೇಷ್ಟೆಗಳು ಹಾಗೂ ಭಗವಂತ ಎಂದು ಐದು ಬಗೆಯ ಕಾರಣಗಳು ಇದ್ದೇ ಇರುವವು. ಕರ್ಮ ದೈಹಿಕ, ವಾಚಿಕ ಹಾಗೂ ಮಾನಸಿಕವಾದ ಯಾವುದೇ ಆಗಬಹುದು. ವಿಹಿತ ಅಥವಾ ನಿಷಿದ್ಧವಾದರೂ ಆಗಬಹುದು. ಈ ಐದು ಕಾರಣಗಳು ಮಾತ್ರ ಇದ್ದೇ ಇರುವುವು ಎಂಬುದು ಇಲ್ಲಿಯ ಪ್ರಮೇಯವಿಶೇಷ.

*****

ವಸ್ತುಸ್ಥಿತಿ ಹೀಗಿರುವಾಗ ಇದನ್ನೆಲ್ಲ ಗಮನಿಸದೆ ಅವಿವೇಕದಿಂದ ತನ್ನನ್ನು ಮಾತ್ರವೆ ಕರ್ತೃ ಎಂದು ಭಾವಿಸುವವನು ತತ್ತ್ವವನ್ನು ಅರಿಯದವನು.

*****

ಜೀವನ ಅಸ್ವಾತಂತ್ರ್ಯವನ್ನು ಅತ್ಯಂತಸ್ಫುಟವಾಗಿ ಸಾಧಿಸಿ ತೋರಿಸುವ ಮಹತ್ತ್ವ-ಪೂರ್ಣವಾದ ವಿವರ ಇಲ್ಲಿಯದು. ಸಾಮಾನ್ಯವಾಗಿ ಒಂದು ಕಾರ್ಯ ಮಾಡಿದವನಿಗೆ ತಾನು ಮಾತ್ರ ಎಂಬ ಭ್ರಮೆ ಒಂದು ಹಂತದಲ್ಲಿ ಯಾರಿಗೂ ಬರಬಹುದು. ಶಾಸ್ತ್ರ ಅದನ್ನು ಒಪ್ಪುವುದಿಲ್ಲ. ವಿಚಾರ ಮಾಡಿ ನೋಡಿದಾಗ ನಮ್ಮ ಅನುಭವವೂ ಸಹ

---

೧. ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಮ್ ।
ವಿವಿಧಾಶ್ಚ ಪೃಥಕ್ಚೇಷ್ಟಾ ದೈವಂ ಚೈವಾತ್ರ ಪಂಚಮಮ್ ॥ – ಗೀತಾ (೧೮/೧೪)

ಸ್ವತಂತ್ರಕರ್ತೃತ್ವವನ್ನು ಒಪ್ಪಲಾರದು. ಯಾವುದೇ ಕಾರ್ಯ ನಡೆಯಲು ದೇಶಕಾಲಗಳ ಆಸರೆ ಬೇಕು. ಅದಿಲ್ಲದೆ ಯಾವ ಕಾರ್ಯವೂ ನಡೆಯದು. ಅದರಂತೆ ಕ್ರಿಯೆಗೊಬ್ಬ ಕರ್ತೃ ಅನಿವಾರ್ಯ. ಅದರಂತೆ ಅವನಿಗೆ ಆಯಾ ಕ್ರಿಯೆಯನ್ನು ಮಾಡಲು ಅಗತ್ಯವಾದ ಹಸ್ತಪಾದಾದಿಕರಣಗಳು. ಅದರೊಂದಿಗೆ ಅನೇಕಪೂರಕಕ್ರಿಯೆಗಳು ಸಹ ಅವಶ್ಯ. ಕೊನೆಯದಾಗಿ ಅತ್ಯಂತಪ್ರಧಾನವಾಗಿ ದೈವ. ಈ ಐದು ಕಾರಣಗಳಿಲ್ಲದೆ ಯಾವುದೇ ಕಾರ್ಯವೂ ಸಾಗದು ಎಂಬುದು ಗೀತೆಯ ಪ್ರತಿಪಾದನೆ. ಇದರಲ್ಲಿ ಮೊದಲ ನಾಲ್ಕು ಕಾರಣಗಳು ನಮ್ಮ ಕಣ್ಣಿಗೆ ಕಾಣುವಂತಹವು. ಐದನೆಯದು ನಮ್ಮ ಅನುಭವಕ್ಕೆ ಎಟಕುವಂತಹುದು.

ಕಾರ್ಖಾನೆಯಲ್ಲಿ ಒಂದು ಕೆಲಸವಾಗಲು ಯಜಮಾನ, ಕಾರ್ಮಿಕರು, ಕಾರ್ಖಾನೆ, ಯಂತ್ರಗಳ ಚಲನೆ ಹೇಗೋ, ಹಾಗೆ. ಅದೇಕೆ, ನಿತ್ಯದ ಮನೆಕೆಲಸ, ಕಛೇರಿಯ ಕೆಲಸಕ್ಕೂ ಇಂತಹ ವ್ಯವಸ್ಥೆ ಅವಶ್ಯ. ಇನ್ನೂ ಮುಂದೆ ಹೋದರೆ, ವೈಯಕ್ತಿಕವಾದ ಸಾಮಾನ್ಯ ಕೆಲಸಕ್ಕೂ ಇವೆಲ್ಲ ಬೇಕೇ ಬೇಕು. ಅದೇಕೆ, ಒಂದು ಕನಸು ಕಾಣಲು ಸಹ ಇವೆಲ್ಲ ಅನಿವಾರ್ಯ. ವಿಷಯ ಇಷ್ಟು ಸ್ಫುಟವಾಗಿರುವಾಗಲೂ ತನ್ನನ್ನು ಮಾತ್ರ ಎಲ್ಲವನ್ನು ಮಾಡುವವನು ಎಂದು ತಿಳಿಯುವುದು ಭ್ರಮೆಯಲ್ಲದೆ ಮತ್ತೇನು? ಅಂತಹ ಭ್ರಮೆಗೆ ಅವಿವೇಕವೇ ಕಾರಣ.[೧]

ಚಿಂತನಶೀಲರಾದ ಯಾರಿಗೂ ಅರ್ಥವಾಗುವ ಸಂಗತಿ ಇದು. ಪ್ರತಿಯೊಂದಯ ಕಾರ್ಯಕ್ಕೆ ಅಗತ್ಯವಾದ ಕಾರಣಗಳ ಸಮಗ್ರ ಚಿಂತನೆಯನ್ನು ಇಲ್ಲಿ ಕಾಣಬಹುದು. ಕಾರ್ಯವು ಚಿಕ್ಕದೋ, ದೊಡ್ಡದೋ, ಸರಿಯೋ, ತಪ್ಪೋ; ಕಾರಣಗಳು ಮಾತ್ರ ಇರಲೇಬೇಕು. ಅಂತಹ ಕಾರಣಗಳು ಪ್ರಧಾನವಾಗಿ ಈ ಐದೇ ಆಗಿವೆ. ಉಳಿದ ಎಲ್ಲವನ್ನೂ ಸಹ ಈ ಐದರಲ್ಲೇ ಅಡಕವಾಗಿ ನಿರೂಪಿಸಲು ಸಾಧ್ಯವಿದೆ. ಇದನ್ನು ಅರ್ಥಮಾಡಿ-ಕೊಂಡವರಿಗೆ ಪ್ರತಿಯೊಂದು ಕಾರ್ಯದಲ್ಲಿನ ತಮ್ಮ ಪಾತ್ರದ ಪರಿಮಿತಿ ಮನದಟ್ಟಾ-ಗುವುದು. ಅತ್ಯಂತ ಮುಖ್ಯವಾಗಿ ಭಗವಂತನ ಪಾತ್ರದ ಹಿರಿಮೆಯೂ ಅರಿವಿಗೆ ಬರುವುದು. ಸಾಮಾನ್ಯ ತಿಳುವಳಿಕೆಗೆ ನಿಲುಕದ್ದನ್ನು ವಿಜ್ಞಾನ ವಿವರಿಸಿದರೆ, ವಿಜ್ಞಾನದ ಚಿಂತನೆಗೂ ಎಟುಕದ ಪರಮ ಚಿಂತನೆಯನ್ನು ಭಗವದ್ಗೀತೆ ಹೀಗೆ ಒದಗಿಸಿದೆ.

*****

---

೧. ಶರೀರವಾಙ್ಮನೋಭಿರ್ಯತ್ ಕರ್ಮ ಪ್ರಾರಭತೇ ನರಃ।
ನ್ಯಾಯ್ಯಂ ವಾ ವಿಪರೀತಂ ವಾ ಪಂಚೈತೇ ತಸ್ಯ ಹೇತವಃ॥
ತತ್ರೈವಂ ಸತಿ ಕರ್ತಾರಮಾತ್ಮಾನಂ ಕೇವಲಂ ತು ಯಃ।
ಪಶ್ಯತ್ಯಕೃತಬುದ್ಧಿತ್ವಾನ್ನ ಸ ಪಶ್ಯತಿ ದುರ್ಮತಿಃ॥ – ಗೀತಾ (೧೮/೧೫,೧೬)

## ಭಗವಂತನೇ ಪ್ರಧಾನಕರ್ತೃ

ಮತ್ತೊಂದು ಸೂಕ್ಷ್ಮವಿಚಾರವೂ ಇಲ್ಲಿ ಪ್ರತಿಪಾದಿತವಾಗಿದೆ. ಈ ಐದು ಕಾರಣಗಳಲ್ಲಿ ಪ್ರತಿಯೊಂದರದೂ ಸಮಪಾಲು ಎಂದು ತಿಳಿಯುವಂತಿಲ್ಲ. ಒಂದು ಕಡೆ ಪರಾಧೀನ-ಕರ್ತೃವಾದ ಜೀವ; ಮತ್ತೊಂದು ಕಡೆ ಸ್ವತಂತ್ರಕರ್ತೃವಾದ ಭಗವಂತ. ಉಳಿದವರ ಸ್ಥಾನ ಇವರಿಬ್ಬರ ಮಧ್ಯೆ ಬರುವಂತಹುದು. ಅದರಲ್ಲೂ ತಾರತಮ್ಯ ಉಂಟು. ಇನ್ನು ಪರಮಾತ್ಮನ ಸ್ಥಾನ. ಅದು ಸಮಪಾಲೂ ಅಲ್ಲ; ಸ್ವಲ್ಪ ಹೆಚ್ಚಿನ ಪಾಲೂ ಅಲ್ಲ. ಸಿಂಹಪಾಲು ಆದರದ್ದೇ. ಇತರ ಎಲ್ಲವೂ ಇದ್ದು ಅವನ ಸಂಕಲ್ಪವೊಂದು ಇಲ್ಲವಾದಲ್ಲಿ ಯಾವ ಕಾರ್ಯವೂ ಸಾಗದು – 'ತೇನ ವಿನಾ ತೃಣಮಪಿ ನ ಚಲತಿ'. ಅವನ ಸಂಕಲ್ಪವೊಂದಿದ್ದಲ್ಲಿ ಉಳಿದೆಲ್ಲವುಗಳು ಅದರಂತೆ ವರ್ತಿಸುವುದು ಅನಿವಾರ್ಯ. ಅದಕ್ಕೆಂದೇ ಭಗವಂತನ ಪಾತ್ರ ಪ್ರತಿಕರ್ಮದಲ್ಲೂ ಅತ್ಯಂತಪ್ರಧಾನ. ಅದಕ್ಕೆಂದೇ ಅವನ ಆರಾಧನೆ, ಉಪಾಸನೆ ಎಲ್ಲವೂ. ಹೀಗೆ ಭಗವಂತನ ಬಗ್ಗೆ ವಿಶಿಷ್ಟಪ್ರತಿಪಾದನೆ ನೀಡುವ ಕಾರಣದಿಂದಾಗಿಯೂ ಭಗವದ್ಗೀತೆಯೆಂಬ ಹೆಸರು ಇದಕ್ಕೆ ಸಾರ್ಥಕ.

*****

ಈ ಶ್ಲೋಕದಲ್ಲಿನ ಕರ್ತೃ ಎಂಬುದಕ್ಕೆ ಭಗವಂತ ಎಂದೂ, ದೈವ ಎನ್ನುವುದಕ್ಕೆ ಅದೃಷ್ಟ ಎಂದೂ ಅರ್ಥಮಾಡಿ, ಜೀವನಿಗೆ ಇವೆಲ್ಲವುಗಳ ಸಹಕಾರ ಬೇಕು ಎಂಬುದಾಗಿ ಮತ್ತೊಂದು ಬಗೆಯಲ್ಲೂ ಈ ಶ್ಲೋಕವನ್ನು ಅರ್ಥೈಸಿರುವುದುಂಟು. ಆಗಲೂ ತಾತ್ಪರ್ಯ ಮಾತ್ರ ಮೇಲೆ ವಿವರಿಸಿದಂತೆ ಭಗವಂತನ ಪಾರಮ್ಯವೇ.

*****

## ಅಹಂಕಾರತ್ಯಾಗದ ಫಲ

ಹೀಗೆ ತಪ್ಪು ತಿಳುವಳಿಕೆ ಇರುವವನು ಅವಿವೇಕಿಯಾಗಿ ತೀರ ಸಾಮಾನ್ಯಕಾರ್ಯ-ವೆಸಗಿದಾಗಲೂ ಹೆಚ್ಚಿನ ಅನರ್ಥಕ್ಕೆ ಗುರಿಯಾಗುವನು. ಆದರೆ ಇದರ ಬಗ್ಗೆ ಸ್ಪಷ್ಟ ಪರಿಜ್ಞಾನ ಹೊಂದಿದ್ದು ತನ್ನನ್ನು ಭಗವಂತನಿಗೆ ಅಧೀನವಾಗಿ ನಡೆಯುವವನು ಎಂದು ಅರ್ಥ ಮಾಡಿಕೊಂಡು ಪ್ರತಿಯೊಂದು ಕಾರ್ಯವನ್ನು ಕರ್ತವ್ಯಬುದ್ಧಿಯಿಂದ ಹರಿಪೂಜೆ ಎಂಬ ಅನುಸಂಧಾನದಿಂದ ಮಾಡುವವನು ಎಂತಹ ಅಕಾರ್ಯವನ್ನೆಸಗಿದರೂ, ಅದು ಅವನಿಗೆ ಅಂಟದು. ಎಂದರೆ ಇಂತಹ ವಿವೇಕ ಇದ್ದವನಿಗೆ ಅಕಾರ್ಯ ಮಾಡುವುದು ಸಾಧ್ಯವೇ ಆಗುವುದಿಲ್ಲ. ಪ್ರಾರಬ್ಧವಶಾತ್ ಮಾಡಿದರೂ ಅದು ಅವನಿಗೆ ಬಂಧಕವಾಗುವುದಿಲ್ಲ ಎಂದರ್ಥ.[೧]

*****

೧. ಯಸ್ಯ ನಾಹಂಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ ।
ಹತ್ವಾऽಪಿ ಸ ಇಮಾನ್ ಲೋಕಾನ್ ನ ಹಂತಿ ನ ನಿಬಧ್ಯತೇ ॥ – ಗೀತಾ (೧೮/೧೭)

ತಾನು ಕೊಲ್ಲುತ್ತೇನೆ ಎಂದು ಬಗೆದು, ಮತ್ತೊಬ್ಬನನ್ನು ಕೊಲ್ಲುವುದು ಕೊಲೆ ಎನ್ನಿಸುತ್ತದೆ. ಆದರೆ ಸರ್ಕಾರದ ಆದೇಶದಂತೆ ಮರಣದಂಡನೆ ಶಿಕ್ಷೆಗೆ ಗುರಿಯಾದವನನ್ನು ವಿಧ್ಯುಕ್ತವಾಗಿ ಕೊಲ್ಲುವ ಶಿಕ್ಷೆಯನ್ನು ಜಾರಿಮಾಡುವ ಅಧಿಕಾರಿ ಹಾಗೂ ಪರಿಚಾರಕನನ್ನು ಯಾರೂ ಹಂತಕರೆನ್ನದೆ, ದೇಶಸೇವಕರೆಂದು ಗೌರವಿಸುತ್ತಾರೆ; ಯೋಗ್ಯವಾದ ಸಂಬಳ, ಸಾರಿಗೆಯನ್ನು ನೀಡಿ ಪುರಸ್ಕರಿಸುತ್ತಾರೆ. ಪ್ರಾಣ ತೆಗೆಯುವ ಒಂದೇ ಕಾರ್ಯ ವೈಯಕ್ತಿಕನೆಲೆಯಲ್ಲಿ ನಡೆದಾಗ ಕೊಲೆ; ಆದರೆ ಸರ್ಕಾರದ ಆದೇಶದಂತೆ ನಡೆಯುವ ಕರ್ತವ್ಯಬುದ್ಧಿಯಿಂದ ನಡೆದಾಗ ಅದು ಧರ್ಮ. ಈ ವಿವೇಚನೆಗೆ ಗೀತೋಕ್ತತತ್ತ್ವವೇ ಮೂಲಪ್ರೇರಣೆ ಎಂಬುದನ್ನು ಮರೆಯಬಾರದು.

*****

ಅಶ್ವತ್ಥಾಮಾಚಾರ್ಯರು ಪಾಂಡವರ ಶಿಬಿರದಲ್ಲಿ ನಡೆಸಿದ ಕಗ್ಗೊಲೆ ಹೀಗೆ ಧರ್ಮದ ಸಾಲಿಗೆ ಸೇರುವ ವಿಶಿಷ್ಟಪ್ರಸಂಗ. ಅವರು ಶಿವನ ಅವತಾರ. ಶಿವ ಸಂಹಾರದೇವತೆ; ಅವರು ಅಲ್ಲಿ ಮಾಡಿದ್ದು ಅಂತಹ ಸಂಹಾರಕಾರ್ಯವನ್ನೇ. ಅದಕ್ಕೆ ಭಗವಂತನ ಸಂಕಲ್ಪದಂತೆ, ಅವರು ಶಿಬಿರ ಪ್ರವೇಶಿಸುವ ಮುನ್ನ ಅವರ ಪ್ರಾರ್ಥನೆಯಂತೆ ಭಗವಂತನ ಆದೇಶವೂ ದೊರಕಿತ್ತು. ಅದಕ್ಕೆಂದೇ ಅದು ಕೊನೆಯಲ್ಲಿ ಧರ್ಮವೆಂದೇ ಪರಿಗಣಿತವಾಯಿತು. ಪ್ರಳಯಕಾಲದಲ್ಲಿ ಶಿವನು ಜಗತ್ಸಂಹಾರ ಮಾಡುವ ಕಾರ್ಯವು ಹೀಗೆಯೇ ಪರಮಧರ್ಮ. ಅವನು ಹಾಗೆ ಜಗತ್ತನ್ನು ಸಂಹರಿಸಿ, ನಟರಾಜನಾಗಿ ಕುಣಿಯುವುದು ಭಗವತ್ಪ್ರೀತಿಕರವಾದ ಲೀಲೆಯೆಂದೇ ಶಾಸ್ತ್ರಗಳ ಅಭಿಮತ.

*****

ಕರ್ಮಪ್ರೇರಣೆಯ ಹಿನ್ನೆಲೆ ಮೂರು ಬಗೆ – ಕರ್ಮದ ಪರಿಜ್ಞಾನ, ಅದರ ವಿಷಯ ಹಾಗೂ ತಿಳಿದು ಮಾಡುವ ಕರ್ತೃ. ಕರ್ಮದ ಕಾರಣವು ಕರಣ, ಕರ್ಮ, ಮತ್ತು ಕರ್ತೃ ಎಂಬುದಾಗಿ ಸಂಗ್ರಹವಾಗಿ ಮೂರು ಬಗೆ.

*****

## ವೈದಿಕಸಾಂಖ್ಯದರ್ಶನ

ಜ್ಞಾನ, ಕರ್ಮ ಮತ್ತು ಕರ್ತೃ ಈ ಮೂರು ಗುಣಗಳ ಭಿನ್ನತೆಯಿಂದಾಗಿ ಮೂರು ಬಗೆ ಎಂಬುದಾಗಿ ವೈದಿಕಸಾಂಖ್ಯಶಾಸ್ತ್ರದಲ್ಲಿ ನಿರೂಪಿತವಾಗಿದೆ ಎಂದು ಭಗವಂತ ಉಲ್ಲೇಖಿಸುವನು. ಅವನು ಉಲ್ಲೇಖಿಸುವ ವೈದಿಕಸಾಂಖ್ಯಶಾಸ್ತ್ರ ಈಗ ಪ್ರಚಾರದಲ್ಲಿರುವ ನಿರೀಶ್ವರಸಾಂಖ್ಯವಲ್ಲ. ಅದು ಮೂಲತಃ ಶ್ರೀಮದ್ಭಾಗವತಪುರಾಣದಲ್ಲಿ ಕಪಿಲನಾಮಕಭಗವಂತನಿಂದ ದೇವಹೂತಿದೇವಿಗೆ ಉಪದೇಶಿಸಲ್ಪಟ್ಟ ನಿರ್ಮಲವಾದ

ತತ್ತ್ವಶಾಸ್ತ್ರ ಈ ಮೊದಲು ಉಲ್ಲೇಖಿಸಲ್ಪಟ್ಟಂತಹ ಸಾಂಖ್ಯಸಿದ್ಧಾಂತವೂ ಈ ಕಪಿಲಸಾಂಖ್ಯವೇ[೧].

## ಮೂರು ಬಗೆಯ ಜ್ಞಾನ

ಭಿನ್ನವೂ, ತಾರತಮ್ಯಯುಕ್ತವೂ ಆದ ಸಕಲಜಡಚೇತನಗಳಲ್ಲೂ ನಾಶರಹಿತನಾಗಿ ನೆಲೆಸಿರುವ ಸ್ವತಂತ್ರನಾದ ಭಗವಂತನನ್ನು ತಿಳಿಸಿಕೊಡುವ ಜ್ಞಾನವು ಸಾತ್ತ್ವಿಕ. ಜಡಚೇತನಗಳಲ್ಲಿನ ಭೇದವನ್ನೂ, ಚೇತನಗಳಲ್ಲಿನ ಭೇದ ಹಾಗೂ ತಾರತಮ್ಯವನ್ನು ತಿಳಿಸುತ್ತಲೆ, ಅವೆಲ್ಲವುಗಳೊಳಗೆ ನೆಲೆಸಿರುವ ಭಗವಂತನನ್ನು ಯಾವ ಬಗೆಯಲ್ಲೂ ನಾಶವಿರದ ಸ್ವತಂತ್ರನಾದ ಸರ್ವೋತ್ತಮತತ್ತ್ವವೆಂದು ತಿಳಿಸಿಕೊಡುವ ಜ್ಞಾನ ಸಾತ್ತ್ವಿಕ ಎಂದರ್ಥ.

*****

ರಾಜಸಜ್ಞಾನದ ಸ್ವರೂಪವನ್ನು ತಿಳಿಸಿಕೊಡುವ ಗೀತೆಯ ಶ್ಲೋಕ ಹೀಗಿದೆ :

**ಪೃಥಕ್ತ್ವೇನ ತು ಯಜ್ಜ್ಞಾನಂ ನಾನಾಭಾವಾನ್ ಪೃಥಗ್ವಿಧಾನ್ ।**
**ವೇತ್ತಿ ಸರ್ವೇಷು ಭೂತೇಷು ತಜ್ಜ್ಞಾನಂ ವಿದ್ಧಿ ರಾಜಸಮ್ ॥ ೧೮/೨೧ ॥**

ಈ ಶ್ಲೋಕವನ್ನು ವ್ಯಾಖ್ಯಾನಕಾರರು ಬಗೆಬಗೆಯಾಗಿ ವಿವರಿಸಿದ್ದು, ಅದರ ಸಂಗ್ರಹ ಹೀಗಿದೆ :

ಯಾವ ಜ್ಞಾನವು ಜಡಚೇತನಾದಿರೂಪ ಸಕಲಪದಾರ್ಥಗಳನ್ನು ಅನೇಕತೆರನಾದವು ಹಾಗೂ ಆ ಸಕಲಭೂತಗಳೊಳಗಿನ ಭಗವಂತನೂ ಅನೇಕಬಗೆಯಾದವನು ಎಂದು ತಿಳಿಸಿಕೊಡುವುದೋ, ಆ ಜ್ಞಾನವು ರಾಜಸಜ್ಞಾನ.[೨]

ಯಾವ ಜ್ಞಾನವು ಜಡಚೇತನಾದಿರೂಪ ಸಕಲಪದಾರ್ಥಗಳನ್ನೂ ಪರಸ್ಪರ ಭಿನ್ನವೆಂದು ತಿಳಿಸುತ್ತಾ ಅವುಗಳೊಳಗಿನ ಭಗವಂತನನ್ನು ಸರ್ವೋತ್ತಮನೆಂದು ತಿಳಿಸದೆ, ಅವುಗಳಿಂದ ಭಿನ್ನನಾದವನು ಮಾತ್ರ ಎಂದು ತಿಳಿಸುವುದೊ, ಆ ಜ್ಞಾನವು ರಾಜಸಜ್ಞಾನ.[೩]

---

೧. ಕಪಿಲೋ ವಾಸುದೇವಾಖ್ಯಸ್ತಂತ್ರಂ ಸಾಂಖ್ಯಂ ಜಗಾದ ಹ ।
ಬ್ರಹ್ಮಾದಿಭ್ಯಶ್ಚ ದೇವೇಭ್ಯೋ ಭೃಗ್ವಾದಿಭ್ಯಸ್ತಥೈವ ಚ ॥
ತಥೈವಾಸುರಯೇ ಸರ್ವವೇದಾರ್ಥಪರಿಬೃಂಹಿತಮ್ ।
ಸರ್ವವೇದವಿರುದ್ಧಂ ಚ ಕಪಿಲೋಽನ್ಯೋ ಜಗಾದ ಹ ।
ಸಾಂಖ್ಯಮಾಸುರಯೇಽನ್ಯಸ್ಮೈ ಕುತರ್ಕಪರಿಬೃಂಹಿತಮ್ ॥ – ಭಾ.ತಾ.(೧/೩/೧೦)
ವಾಸುದೇವ ಕಪಿಲನು ಅವೈದಿಕ ಸಾಂಖ್ಯದರ್ಶನದ ಕಪಿಲನಿಗಿಂತ ಭಿನ್ನ ಎಂಬುದು ಶಾಂಕರಭಾಷ್ಯಕ್ಕೂ ಸಮ್ಮತ: ಅನ್ಯಸ್ಯ ಚ ಕಪಿಲಸ್ಯ ಸಗರಪುತ್ರಾಣಾಂ ಪ್ರತಪ್ತುರ್ವಾಸುದೇವನಾಮ್ನಃ ಸ್ಮರಣಾತ್ ।
– ಶಾಂಕರಭಾಷ್ಯ (೨/೧/೧)

೨. ಶ್ರೀವಾದಿರಾಜಸ್ವಾಮಿಗಳವರ ವ್ಯಾಖ್ಯಾನ.

೩. ಶ್ರೀವಿದ್ಯಾಧಿರಾಜತೀರ್ಥರ ವ್ಯಾಖ್ಯಾನ

ಯಾವ ಜ್ಞಾನವು (ಪರಮಾತ್ಮನ ವಿಷಯವನ್ನು ತಿಳಿಸದೆ) ಅನೇಕತೆರನಾದ ಬಗೆಬಗೆಯ ಜಡಚೇತನಗಳೆಲ್ಲ ಪರಸ್ಪರಭೇದದೊಂದಿಗೆ ಮೇಲುಕೀಳು ಎಂಬ ಅಂತರವನ್ನೂ ಸಹ ಹೊಂದಿವೆ ಎಂದು ಮಾತ್ರ ತಿಳಿಸಿಕೊಡುವುದೋ, ಆ ಜ್ಞಾನವು ರಾಜಸಜ್ಞಾನ.[೧]

ಭಗವಂತನನ್ನು ತಿಳಿಸದೆ, ಜೀವಜಡಗಳ ಸ್ವರೂಪವನ್ನು ಮಾತ್ರ ಯಥಾರ್ಥವಾಗಿ ತಿಳಿಸುವುದು ರಾಜಸಜ್ಞಾನದ ಒಂದು ಮುಖ. ಆಧುನಿಕವಿಜ್ಞಾನ ಒಂದರ್ಥದಲ್ಲಿ ಈ ಬಗೆಯದು.

ಭಗವಂತನನ್ನು ತಿಳಿಸಿದರೂ, ಅವನನ್ನು ಸರ್ವೋತ್ತಮನೆಂದು ತಿಳಿಸದೆ, ಕೇವಲ ಜೀವಜಡಗಳಿಂದ ಭಿನ್ನನಾದವನು ಎಂದು ತಿಳಿಸುವುದು ರಾಜಸಜ್ಞಾನದ ಮತ್ತೊಂದು ಬಗೆ. ನ್ಯಾಯವೈಶೇಷಿಕಾದಿಮತಗಳು ನೀಡುವ ಭಗವಂತನ ಚಿತ್ರ ಈ ಬಗೆಯದು. ಭಗವಂತನನ್ನು ಸಕಲವಸ್ತುಗಳಲ್ಲಿ ನೆಲೆಸಿರುವನೆಂಬ ತತ್ತ್ವವನ್ನು ತಿಳಿಸಿದರೂ, ಅವುಗಳಲ್ಲಿ ನೆಲೆಸಿರುವ ಭಗವಂತನೂ ಸಹ ಅನೇಕಬಗೆಯಾದವನು, ಒಂದೇ ತೆರನಾದವನಲ್ಲ ಎಂದು ತಿಳಿಸುವುದು ರಾಜಸಜ್ಞಾನದ ಇನ್ನೊಂದು ಮುಖ. ಹೀಗೆ ಈ ಎಲ್ಲ ಅರ್ಥಗಳೂ ಸ್ವರಸವಾಗಿರುವುದು ಗಮನಾರ್ಹ.

ಇದರೊಂದಿಗೆ ಬೃಹದಾರಣ್ಯ ಉಪನಿಷತ್ತು ಹಾಗೂ ಅದರ ಮಧ್ವಭಾಷ್ಯದ ಹಿನ್ನೆಲೆಯಲ್ಲಿ "ಯಾವ ಜ್ಞಾನವು ಜಡಚೇತನಾದಿಸಕಲಪದಾರ್ಥಗಳು ಪರಸ್ಪರ ಬೇರೆಯಾಗಿರುವವು ಹಾಗೂ ಅದರಂತೆ ಅವುಗಳೊಳಗಿನ ಪರಮಾತ್ಮನು ಸ್ವಾಮಿತ್ವಾದಿ ಯಾವ ಸಂಬಂಧವನ್ನೂ ಹೊಂದದೆ, ಪ್ರತ್ಯೇಕವಾಗಿರುವನು ಎಂದು ತಿಳಿಸಿಕೊಡುವುದೋ, ಆ ಜ್ಞಾನವು ರಾಜಸಜ್ಞಾನ" ಎಂಬ ಮತ್ತೊಂದು ಬಗೆಯ ಅರ್ಥವನ್ನೂ ಈ ಶ್ಲೋಕದಲ್ಲಿ ಕಾಣಬಹುದು. ಈ ಅರ್ಥದಂತೆ "ಜಡ ಹಾಗೂ ಜೀವಗಳೊಂದಿಗೆ ಭಗವಂತನನ್ನೂ ತಿಳಿಸಿಕೊಟ್ಟರೂ, ಅವನನ್ನು ಸರ್ವೋತ್ತಮನೆಂದು ಪ್ರತಿಪಾದಿಸಿದರೂ, ಅವನೊಂದಿಗೆ ನಮಗೆ ಯಾವ ಸಂಬಂಧವೂ ಇಲ್ಲ; ತನ್ನಷ್ಟಕ್ಕೆ ತಾನು ಅವನಿದ್ದರೆ, ನಮ್ಮಷ್ಟಕ್ಕೆ ನಾವಿರುವೆವು. ಅವನು ಸ್ವಾಮಿಯೂ ಅಲ್ಲ; ನಾವು ದಾಸರೂ ಅಲ್ಲ" ಎಂದು ತಪ್ಪಾಗಿ ತಿಳಿಯುವುದು ರಾಜಸಜ್ಞಾನ ಎಂದಾಗುತ್ತದೆ.

*****

ದೇಹವಿರುವ ಜೀವನನ್ನು ಬ್ರಹ್ಮನೆಂದೂ, ಇಡೀ ಜಗತ್ತನ್ನು ಕೇವಲ ಅವನ ಕಲ್ಪನೆಯೆಂದೂ ತಿಳಿಸುವ, ವಿನಾ ಕಾರಣ ಜಗತ್ತನ್ನು ಸತ್ಯವಲ್ಲ ಎನ್ನುವ ಕ್ಷುಲ್ಲಕಜ್ಞಾನವು ತಾಮಸ. ಆತ್ಮೈಕ್ಯಜ್ಞಾನ ಈ ಬಗೆಯ ತಾಮಸಜ್ಞಾನ ಎಂದು ಈ ವ್ಯಾಖ್ಯಾನದ ಭಾವ.

*****

---

೧. ರಾಘವೇಂದ್ರಸ್ವಾಮಿಗಳ ವ್ಯಾಖ್ಯಾನ

## ಮೂರು ಬಗೆಯ ಕರ್ಮ

ಕರ್ಮಗಳು ಸಹ ಹೀಗೆ ಮೂರು ಬಗೆ. ರಾಗದ್ವೇಷಗಳನ್ನು ಬಿಟ್ಟು ಫಲದ ಹಂಬಲವಿಲ್ಲದವನು ಮಾಡುವ, (ಕರ್ತೃತ್ವ, ಮಮಕಾರಗಳ)ನಂಟಿರದ ವಿಹಿತಕರ್ಮವು ಸಾತ್ತ್ವಿಕ.[೧] ಫಲದ ಹಂಬಲವಿರುವವನಾಗಲಿ, ಅಹಂಕಾರಿಯಾದವನಾಗಲಿ, ಬರೀ ದೇಹದಂಡಿಸಿ ಮಾಡುವ ಕರ್ಮವು ರಾಜಸ[೨]. ಅನಂತರದ ಪರಿಣಾಮ, ನಾಶ, ಹಿಂಸೆಗಳನ್ನು ಹಾಗೂ ತನ್ನ ಯೋಗ್ಯತೆಯನ್ನು ಗಮನಿಸದೆ, ಅವಿವೇಕದಿಂದ ತೊಡಗುವ, ಸಲ್ಲದ ಕರ್ಮವು ತಾಮಸ.[೩]

*****

## ಮೂರು ಬಗೆಯ ಕರ್ತೃಗಳು

ಫಲದ ನಂಟಿರದವನು, ನಾನೇ ಮಾಡುವೆ ಎಂಬ ಹಮ್ಮಿರದವನು, ಧೈರ್ಯೋ-ತ್ಸಾಹಗಳಿಂದ ಕೂಡಿದವನು, ಐಹಿಕಫಲದ ಆಗುಹೋಗುಗಳಿಂದ ವಿಚಲಿತನಾಗದವನು ಸಾತ್ತ್ವಿಕಕರ್ತೃ.[೪] ಕೀರ್ತಿ ಮೊದಲಾದವುಗಳನ್ನು ಬಯಸುವವನು, ಪ್ರತಿಫಲ ನಿರೀಕ್ಷಿಸುವವನು, ಜಿಪುಣನು, ಹಿಂಸಾಶೀಲನು, (ಮೈಮನಗಳ)ಶುದ್ಧಿ ಇರದವನು, ನೋವುನಲಿವುಗಳಿಗೆ ಒಳಗಾಗುವವನು ರಾಜಸಕರ್ತೃ[೫]. ಭಗವದರ್ಪಣಬುದ್ಧಿ ಇಲ್ಲದವನು, ಹಸನಾಗಿ ಮಾಡದವನು, ಗುರುಹಿರಿಯರಿಗೆ ಮಣಿಯದವನು, ಬೂಟಾಟಿಕೆಯವನು, ವಂಚಕನು, ಸೋಮಾರಿಯು, ಬೇಸರಿಸುವವನು, ಮತ್ತೊಬ್ಬರನ್ನು ಸದಾ ಟೀಕಿಸುವವನು(ಕಾರ್ಯಗಳನ್ನು ಮುಂದೆ ಹಾಕುವವನು) ತಾಮಸಕರ್ತೃ.[೬]

*****

---

೧. ನಿಯತಂ ಸಂಗರಹಿತಮರಾಗದ್ವೇಷತಃ ಕೃತಮ್ ।
ಅಫಲಪ್ರೇಪ್ಸುನಾ ಕರ್ಮ ಯತ್ ತತ್ ಸಾತ್ತ್ವಿಕಮುಚ್ಯತೇ ॥ – ಗೀತಾ (೧೮/೨೩)

೨. ಯತ್ ತು ಕಾಮೇಪ್ಸುನಾ ಕರ್ಮ ಸಾಹಂಕಾರೇಣ ವಾ ಪುನಃ ।
ಕ್ರಿಯತೇ ಬಹುಲಾಯಾಸಂ ತದ್ರಾಜಸಮುದಾಹೃತಮ್ ॥ – ಗೀತಾ (೧೮/೨೪)

೩. ಅನುಬಂಧಂ ಕ್ಷಯಂ ಹಿಂಸಾಮನಪೇಕ್ಷ್ಯ ಚ ಪೌರುಷಮ್ ।
ಮೋಹಾದಾರಭ್ಯತೇ ಕರ್ಮ ಯತ್ ತತ್ ತಾಮಸಮುಚ್ಯತೇ ॥ – ಗೀತಾ (೧೮/೨೫)

೪. ಮುಕ್ತಸಂಗೋಽನಹಂವಾದೀ ಧೃತ್ಯುತ್ಸಾಹಸಮನ್ವಿತಃ ।
ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃ ಕರ್ತಾ ಸಾತ್ತ್ವಿಕ ಉಚ್ಯತೇ ॥ – ಗೀತಾ (೧೮/೨೬)

೫. ರಾಗೀ ಕರ್ಮಫಲಪ್ರೇಪ್ಸುರ್ಲುಬ್ಧೋ ಹಿಂಸಾತ್ಮಕೋಽಶುಚಿಃ ।
ಹರ್ಷಶೋಕಾನ್ವಿತಃ ಕರ್ತಾ ರಾಜಸಃ ಪರಿಕೀರ್ತಿತಃ ॥ – ಗೀತಾ (೧೮/೨೭)

೬. ಅಯುಕ್ತಃ ಪ್ರಾಕೃತಃ ಸ್ತಬ್ಧಃ ಶಠೋ ನೈಕೃತಿಕೋಽಲಸಃ ।
ವಿಷಾದೀ ದೀರ್ಘಸೂತ್ರೀ ಚ ಕರ್ತಾ ತಾಮಸ ಉಚ್ಯತೇ ॥ – ಗೀತಾ (೧೮/೨೮)

## ಮೂರು ಬಗೆಯ ಬುದ್ಧಿ

ಮುಂದಿನದು ಬುದ್ಧಿಯ ಸಾತ್ತ್ವಿಕಾದಿಪ್ರಭೇದದ ವಿವೇಚನೆ :

ಧರ್ಮದಲ್ಲಿ ಪ್ರವೃತ್ತಿ, ಅಧರ್ಮದಿಂದ ನಿವೃತ್ತಿ, ಯಾವುದು ಕರ್ತವ್ಯ ಮತ್ತು ಯಾವುದು ಅಕರ್ತವ್ಯ ಎಂಬ ವಿವೇಚನೆ, ಅಂಜಿಕೆ ಅಭಯಗಳ ಮೂಲ, ಬಂಧದ ಪರಿ ಮತ್ತು ಮೋಕ್ಷದ ದಾರಿ ಇವನ್ನೆಲ್ಲಾ ಅರಿಯಬಲ್ಲ ಬುದ್ಧಿ ಸಾತ್ತ್ವಿಕ.[೧] ಧರ್ಮ, ಅಧರ್ಮ, ಕಾರ್ಯ ಹಾಗೂ ಅಕಾರ್ಯ; ಇವುಗಳನ್ನು ಸರಿಯಾಗಿ ಗ್ರಹಿಸದ ಬುದ್ಧಿ ರಾಜಸಬುದ್ಧಿ.[೨] ಅಧರ್ಮವನ್ನುಧರ್ಮವೆಂಬುದಾಗಿಯೂ, ಧರ್ಮವನ್ನುಅಧರ್ಮವೆಂಬುದಾಗಿಯೂ, ಸಕಲವಿಷಯಗಳನ್ನು ತಪ್ಪಾಗಿಯೂ (ಮಿಥ್ಯೆಯೆಂಬುದಾಗಿಯೂ) ಗ್ರಹಿಸುವ ಅಜ್ಞಾನ ಕವಿದ ಬುದ್ಧಿಯು ತಾಮಸಬುದ್ಧಿ.[೩]

ಧರ್ಮಾಧರ್ಮಾದಿಗಳ ಸ್ವರೂಪವನ್ನು ಸರಿಯಾಗಿ ತಿಳಿಯುವುದು ಸಾತ್ತ್ವಿಕಬುದ್ಧಿ. ಅವುಗಳನ್ನು ಸರಿಯಾಗಿ ತಿಳಿಯದೆ ಗೊಂದಲಕ್ಕೊಳಗಾಗುವುದು ರಾಜಸಬುದ್ಧಿ. ಧರ್ಮವನ್ನು ಅಧರ್ಮವೆಂದು, ಅಧರ್ಮವನ್ನೇ ಧರ್ಮವೆಂದು ತಪ್ಪಾಗಿಯೇ ತಿಳಿಯುವುದು ತಾಮಸಬುದ್ಧಿ ಎಂದು ಇದರ ತಾತ್ಪರ್ಯ. ಭೀಮಸೇನನ ಬುದ್ಧಿ ಸಾತ್ತ್ವಿಕ. ಇತರ ದೇವತೆಗಳು ಹಾಗೂ ಋಷಿಮುನಿಗಳ ಬುದ್ಧಿಯೂ ಸಾತ್ತ್ವಿಕವೇ. ಪ್ರಾರಬ್ಧವಶಾತ್ ಒಮ್ಮೊಮ್ಮೆ ತಪ್ಪಾಗಬಹುದು. ಅಸುರರ ಬುದ್ಧಿ ಸಾಮಾನ್ಯವಾಗಿ ತಾಮಸವೇ. ದುರ್ಯೋಧನ ಜೂಜನ್ನು ಧರ್ಮವೆಂದು ತಿಳಿದದ್ದು, ಅಧರ್ಮಯುದ್ಧಕ್ಕೆ ತೊಡಗಿದ್ದು ಇದಕ್ಕೆ ಉದಾಹರಣೆ. ಅರ್ಜುನನು ಧರ್ಮಯುದ್ಧವನ್ನು ಅಧರ್ಮವೆಂದು ಭಾವಿಸಿದ್ದು ತಾಮಸಚಿಂತನೆಯೇ. ಆದರೆ ಕೃಷ್ಣನ ಉಪದೇಶದಿಂದ ಅದನ್ನು ಬದಲಿಸಿಕೊಂಡು ಯುದ್ಧಕ್ಕೆ ಸಿದ್ಧನಾದದ್ದು ಸಾತ್ತ್ವಿಕ. ದುರ್ಯೋಧನನ ಬಿಲ್ಲು ಕೃಷ್ಣೋಪದೇಶದಿಂದಲೂ ಬದಲಾಗದಿದ್ದದ್ದರಿಂದ ಅವನು ಸ್ವರೂಪತಃ ತಾಮಸ.

*****

## ಮೂರು ಬಗೆಯ ಧೃತಿ

ಮುಂದಿನದು ಧೃತಿಪ್ರಭೇದದ ವಿವೇಚನೆ :

---

೧. ಪ್ರವೃತ್ತಿಂ ಚ ನಿವೃತ್ತಿಂ ಚ ಕಾರ್ಯಾಕಾರ್ಯೇ ಭಯಾಭಯೇ ।
ಬಂಧಂ ಮೋಕ್ಷಂ ಚ ಯಾ ವೇತ್ತಿ ಬುದ್ಧಿಃ ಸಾ ಪಾರ್ಥ ಸಾತ್ತ್ವಿಕೀ ॥ - ಗೀತಾ (೧೮/೩೦)

೨. ಯಯಾ ಧರ್ಮಮಧರ್ಮಂ ಚ ಕಾರ್ಯಂ ಚಾಕಾರ್ಯಮೇವ ಚ ।
ಅಯಥಾವತ್ ಪ್ರಜಾನಾತಿ ಬುದ್ಧಿಃ ಸಾ ಪಾರ್ಥ ರಾಜಸೀ ॥ - ಗೀತಾ (೧೮/೩೧)

೩. ಅಧರ್ಮಂ ಧರ್ಮಮಿತಿ ಯಾ ಮನ್ಯತೇ ತಮಸಾಽಽವೃತಾ ।
ಸರ್ವಾರ್ಥಾನ್ ವಿಪರೀತಾಂಶ್ಚ ಬುದ್ಧಿಃ ಸಾ ಪಾರ್ಥ ತಾಮಸೀ ॥ - ಗೀತಾ (೧೮/೩೨)

## ಮೂರು ಬಗೆಯ ಕರ್ಮ

ಕರ್ಮಗಳು ಸಹ ಹೀಗೆ ಮೂರು ಬಗೆ. ರಾಗದ್ವೇಷಗಳನ್ನು ಬಿಟ್ಟು ಫಲದ ಹಂಬಲವಿಲ್ಲದವನು ಮಾಡುವ, (ಕರ್ತೃತ್ವ, ಮಮಕಾರಗಳ)ನಂಟಿರದ ವಿಹಿತಕರ್ಮವು ಸಾತ್ತ್ವಿಕ.[೧] ಫಲದ ಹಂಬಲವಿರುವವನಾಗಲಿ, ಅಹಂಕಾರಿಯಾದವನಾಗಲಿ, ಬರೀ ದೇಹದಂಡಿಸಿ ಮಾಡುವ ಕರ್ಮವು ರಾಜಸ[೨]. ಅನಂತರದ ಪರಿಣಾಮ, ನಾಶ, ಹಿಂಸೆಗಳನ್ನು ಹಾಗೂ ತನ್ನ ಯೋಗ್ಯತೆಯನ್ನು ಗಮನಿಸದೆ, ಅವಿವೇಕದಿಂದ ತೊಡಗುವ, ಸಲ್ಲದ ಕರ್ಮವು ತಾಮಸ.[೩]

*****

## ಮೂರು ಬಗೆಯ ಕರ್ತೃಗಳು

ಫಲದ ನಂಟಿರದವನು, ನಾನೇ ಮಾಡುವೆ ಎಂಬ ಹಮ್ಮಿರದವನು, ಧೈರ್ಯೋತ್ಸಾಹಗಳಿಂದ ಕೂಡಿದವನು, ಐಹಿಕಫಲದ ಆಗುಹೋಗುಗಳಿಂದ ವಿಚಲಿತನಾಗದವನು ಸಾತ್ತ್ವಿಕಕರ್ತೃ.[೪] ಕೀರ್ತಿ ಮೊದಲಾದವುಗಳನ್ನು ಬಯಸುವವನು, ಪ್ರತಿಫಲ ನಿರೀಕ್ಷಿಸುವವನು, ಜಿಪುಣನು, ಹಿಂಸಾಶೀಲನು, (ಮೈಮನಗಳ)ಶುದ್ಧಿ ಇರದವನು, ನೋವುನಲಿವುಗಳಿಗೆ ಒಳಗಾಗುವವನು ರಾಜಸಕರ್ತೃ[೫]. ಭಗವದರ್ಪಣಬುದ್ಧಿ ಇಲ್ಲದವನು, ಹಸನಾಗಿ ಮಾಡದವನು, ಗುರುಹಿರಿಯರಿಗೆ ಮಣಿಯದವನು, ಬೂಟಾಟಿಕೆಯವನು, ವಂಚಕನು, ಸೋಮಾರಿಯು, ಬೇಸರಿಸುವವನು, ಮತ್ತೊಬ್ಬರನ್ನು ಸದಾ ಟೀಕಿಸುವವನು(ಕಾರ್ಯಗಳನ್ನು ಮುಂದೆ ಹಾಕುವವನು) ತಾಮಸಕರ್ತೃ.[೬]

*****

---

೧. ನಿಯತಂ ಸಂಗರಹಿತಮರಾಗದ್ವೇಷತಃ ಕೃತಮ್ ।
ಅಫಲಪ್ರೇಪ್ಸುನಾ ಕರ್ಮ ಯತ್ ತತ್ ಸಾತ್ತ್ವಿಕಮುಚ್ಯತೇ ॥ – ಗೀತಾ (೧೮/೨೩)

೨. ಯತ್ ತು ಕಾಮೇಪ್ಸುನಾ ಕರ್ಮ ಸಾಹಂಕಾರೇಣ ವಾ ಪುನಃ ।
ಕ್ರಿಯತೇ ಬಹುಲಾಯಾಸಂ ತದ್ರಾಜಸಮುದಾಹೃತಮ್ ॥ – ಗೀತಾ (೧೮/೨೪)

೩. ಅನುಬಂಧಂ ಕ್ಷಯಂ ಹಿಂಸಾಮನಪೇಕ್ಷ್ಯ ಚ ಪೌರುಷಮ್ ।
ಮೋಹಾದಾರಭ್ಯತೇ ಕರ್ಮ ಯತ್ ತತ್ ತಾಮಸಮುಚ್ಯತೇ ॥ – ಗೀತಾ (೧೮/೨೫)

೪. ಮುಕ್ತಸಂಗೋಽನಹಂವಾದೀ ಧೃತ್ಯುತ್ಸಾಹಸಮನ್ವಿತಃ ।
ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃ ಕರ್ತಾ ಸಾತ್ತ್ವಿಕ ಉಚ್ಯತೇ ॥ – ಗೀತಾ (೧೮/೨೬)

೫. ರಾಗೀ ಕರ್ಮಫಲಪ್ರೇಪ್ಸುರ್ಲುಬ್ಧೋ ಹಿಂಸಾತ್ಮಕೋಽಶುಚಿಃ ।
ಹರ್ಷಶೋಕಾನ್ವಿತಃ ಕರ್ತಾ ರಾಜಸಃ ಪರಿಕೀರ್ತಿತಃ ॥ – ಗೀತಾ (೧೮/೨೭)

೬. ಅಯುಕ್ತಃ ಪ್ರಾಕೃತಃ ಸ್ತಬ್ಧಃ ಶಠೋ ನೈಕೃತಿಕೋಽಲಸಃ ।
ವಿಷಾದೀ ದೀರ್ಘಸೂತ್ರೀ ಚ ಕರ್ತಾ ತಾಮಸ ಉಚ್ಯತೇ ॥ – ಗೀತಾ (೧೮/೨೮)

## ಮೂರು ಬಗೆಯ ಬುದ್ಧಿ

ಮುಂದಿನದು ಬುದ್ಧಿಯ ಸಾತ್ತ್ವಿಕಾದಿಪ್ರಭೇದದ ವಿವೇಚನೆ :

ಧರ್ಮದಲ್ಲಿ ಪ್ರವೃತ್ತಿ, ಅಧರ್ಮದಿಂದ ನಿವೃತ್ತಿ, ಯಾವುದು ಕರ್ತವ್ಯ ಮತ್ತು ಯಾವುದು ಅಕರ್ತವ್ಯ ಎಂಬ ವಿವೇಚನೆ, ಅಂಜಿಕೆ ಅಭಯಗಳ ಮೂಲ, ಬಂಧದ ಪರಿ ಮತ್ತು ಮೋಕ್ಷದ ದಾರಿ ಇವನ್ನೆಲ್ಲಾ ಅರಿಯಬಲ್ಲ ಬುದ್ಧಿ ಸಾತ್ತ್ವಿಕ.[೧] ಧರ್ಮ, ಅಧರ್ಮ, ಕಾರ್ಯ ಹಾಗೂ ಅಕಾರ್ಯ; ಇವುಗಳನ್ನು ಸರಿಯಾಗಿ ಗ್ರಹಿಸದ ಬುದ್ಧಿ ರಾಜಸಬುದ್ಧಿ.[೨] ಅಧರ್ಮವನ್ನು ಧರ್ಮವೆಂಬುದಾಗಿಯೂ, ಧರ್ಮವನ್ನು ಅಧರ್ಮವೆಂಬುದಾಗಿಯೂ, ಸಕಲವಿಷಯಗಳನ್ನು ತಪ್ಪಾಗಿಯೂ (ಮಿಥ್ಯೆಯೆಂಬುದಾಗಿಯೂ) ಗ್ರಹಿಸುವ ಅಜ್ಞಾನ ಕವಿದ ಬುದ್ಧಿಯು ತಾಮಸಬುದ್ಧಿ.[೩]

ಧರ್ಮಾಧರ್ಮಾದಿಗಳ ಸ್ವರೂಪವನ್ನು ಸರಿಯಾಗಿ ತಿಳಿಯುವುದು ಸಾತ್ತ್ವಿಕಬುದ್ಧಿ. ಅವುಗಳನ್ನು ಸರಿಯಾಗಿ ತಿಳಿಯದೆ ಗೊಂದಲಕ್ಕೊಳಗಾಗುವುದು ರಾಜಸಬುದ್ಧಿ. ಧರ್ಮವನ್ನು ಅಧರ್ಮವೆಂದು, ಅಧರ್ಮವನ್ನೇ ಧರ್ಮವೆಂದು ತಪ್ಪಾಗಿಯೇ ತಿಳಿಯುವುದು ತಾಮಸಬುದ್ಧಿ ಎಂದು ಇದರ ತಾತ್ಪರ್ಯ. ಭೀಮಸೇನನ ಬುದ್ಧಿ ಸಾತ್ತ್ವಿಕ. ಇತರ ದೇವತೆಗಳು ಹಾಗೂ ಋಷಿಮುನಿಗಳ ಬುದ್ಧಿಯೂ ಸಾತ್ತ್ವಿಕವೇ. ಪ್ರಾರಬ್ಧವಶಾತ್ ಒಮ್ಮೊಮ್ಮೆ ತಪ್ಪಾಗಬಹುದು. ಅಸುರರ ಬುದ್ಧಿ ಸಾಮಾನ್ಯವಾಗಿ ತಾಮಸವೇ. ದುರ್ಯೋಧನ ಜೂಜನ್ನು ಧರ್ಮವೆಂದು ತಿಳಿದದ್ದು, ಅಧರ್ಮಯುದ್ಧಕ್ಕೆ ತೊಡಗಿದ್ದು ಇದಕ್ಕೆ ಉದಾಹರಣೆ. ಅರ್ಜುನನು ಧರ್ಮಯುದ್ಧವನ್ನು ಅಧರ್ಮವೆಂದು ಭಾವಿಸಿದ್ದು ತಾಮಸಚಿಂತನೆಯೇ. ಆದರೆ ಕೃಷ್ಣನ ಉಪದೇಶದಿಂದ ಅದನ್ನು ಬದಲಿಸಿಕೊಂಡು ಯುದ್ಧಕ್ಕೆ ಸಿದ್ಧನಾದದ್ದು ಸಾತ್ತ್ವಿಕ. ದುರ್ಯೋಧನನ ಬಿಲ್ಲು ಕೃಷ್ಣೋಪದೇಶದಿಂದಲೂ ಬದಲಾಗದಿದ್ದದ್ದರಿಂದ ಅವನು ಸ್ವರೂಪತಃ ತಾಮಸ.

*****

## ಮೂರು ಬಗೆಯ ಧೃತಿ

ಮುಂದಿನದು ಧೃತಿಪ್ರಭೇದದ ವಿವೇಚನೆ :

---

೧. ಪ್ರವೃತ್ತಿಂ ಚ ನಿವೃತ್ತಿಂ ಚ ಕಾರ್ಯಾಕಾರ್ಯೇ ಭಯಾಭಯೇ ।
ಬಂಧಂ ಮೋಕ್ಷಂ ಚ ಯಾ ವೇತ್ತಿ ಬುದ್ಧಿಃ ಸಾ ಪಾರ್ಥ ಸಾತ್ತ್ವಿಕೀ ॥ – ಗೀತಾ (೧೮/೩೦)

೨. ಯಯಾ ಧರ್ಮಮಧರ್ಮಂ ಚ ಕಾರ್ಯಂ ಚಾಕಾರ್ಯಮೇವ ಚ ।
ಅಯಥಾವತ್ ಪ್ರಜಾನಾತಿ ಬುದ್ಧಿಃ ಸಾ ಪಾರ್ಥ ರಾಜಸೀ ॥ – ಗೀತಾ (೧೮/೩೧)

೩. ಅಧರ್ಮಂ ಧರ್ಮಮಿತಿ ಯಾ ಮನ್ಯತೇ ತಮಸಾಽಽವೃತಾ ।
ಸರ್ವಾರ್ಥಾನ್ ವಿಪರೀತಾಂಶ್ಚ ಬುದ್ಧಿಃ ಸಾ ಪಾರ್ಥ ತಾಮಸೀ ॥ – ಗೀತಾ (೧೮/೩೨)

ಭಗವದ್ಭಕ್ತಿಯೋಗದಿಂದ ಕೂಡಿ, ಧರ್ಮದ ಹಾದಿ ತಪ್ಪದಂತೆ ಮನಸ್ಸು, ಪ್ರಾಣ ಮತ್ತು ಇಂದ್ರಿಯಗಳ ವ್ಯಾಪಾರಗಳನ್ನು ನಿಭಾಯಿಸುವ ಧೈರ್ಯ ಸಾತ್ತ್ವಿಕಧೈರ್ಯ. ಅತಿಯಾದ ಅಭಿಮಾನದಿಂದಾಗಿ ಫಲದ ಹಂಬಲದಿಂದ ಧರ್ಮ, ಅರ್ಥ ಮತ್ತು ಕಾಮಗಳನ್ನು ನೆಚ್ಚುವ ಧೈರ್ಯ ರಾಜಸಧೈರ್ಯ. ಅತಿನಿದ್ರೆ, ಅಂಜಿಕೆ, ಚಿಂತೆ, ವಿಷಾದ ಮತ್ತು ಮದಗಳನ್ನು ತೊರೆಯಲಾಗದ ಅವಿವೇಕಿಯ ಧೈರ್ಯ ತಾಮಸಧೈರ್ಯ.

ಧರ್ಮಾಚರಣೆಯಲ್ಲಿ ಎಂತಹ ಎಡರು, ತೊಡರುಗಳು ಒದಗಿದರೂ, ಎದುರಿಸುವ ಧೈರ್ಯ ಸಾತ್ತ್ವಿಕಧೈರ್ಯ. ಕುಂತಿಯು ಇದಕ್ಕೆ ಶ್ರೇಷ್ಠ ದೃಷ್ಟಾಂತ. ಹಾಗೆಂದು ವ್ಯಾಸರೇ ಸಾರಿರುವರು – 'ಕುಂತ್ಯಾ ಧೃತಿಂ ಚೈವ'; ಬಕಾಸುರನಂತಹ ಶಿವ ವರವಿದ್ದ ದೈತ್ಯನ ಸಂಹಾರವನ್ನು ಭೀಮ ಅನಾಯಾಸವಾಗಿ ಮಾಡುವುದು ಸುನಿಶ್ಚಿತ ಎಂಬ ಭಾವನೆಯಿಂದ ಬ್ರಾಹ್ಮಣ ಕುಟುಂಬದ ಸಂರಕ್ಷಣೆಗಾಗಿ ಅವನನ್ನು ಕಳುಹಿಸಿಕೊಡುವ ಅವಳ ಧೃತಿ ಲೋಕೋತ್ತರವಾದುದು.

ಧನಕನಕಗಳ ಹಂಬಲವನ್ನು ಹಠ ಹಿಡಿದು ಪೂರೈಸಿಕೊಳ್ಳುವ ಧೈರ್ಯ ರಾಜಸ. ಫಲಾಪೇಕ್ಷೆಗಾಗಿ ತೋರುವ ಧೈರ್ಯ ರಾಜಸವೆಂದು ಭಾವ. ಅಜ್ಞಾನ, ನಿದ್ರೆ ಮೊದಲಾದವುಗಳನ್ನು ತೊರೆಯದಿರುವ ಹಠ ತಾಮಸಧೈರ್ಯ. ದುರ್ಯೋಧನನ ಧೃತಿ ಪರಮತಾಮಸ.

*****

## ಮೂರು ಬಗೆಯ ಸುಖ

ಸುಖವೂ ಸಹ ಸಾತ್ತ್ವಿಕ, ರಾಜಸ, ತಾಮಸ ಎಂಬುದಾಗಿ ಮೂರು ಬಗೆ :

ಅನುಭವಿಸದಷ್ಟೂ ಹಿತವೆನ್ನಿಸುವ, ದುಃಖವನ್ನು ಪರಿಹರಿಸುವಂತಹ, ಮೊದಲಿಗೆ ವಿಷದಂತೆ ಅಪ್ರಿಯವಾಗಿದ್ದು ಕೊನೆಯಲ್ಲಿ ಅಮೃತದಂತಾಗುವ, ಶ್ರೀಹರಿಯ ಅನುಗ್ರಹ ಹಾಗೂ ಮನಸ್ಸಿನ ಪ್ರಸನ್ನತೆಗಳಿಂದ ಒದಗುವ ಸುಖವು ಸಾತ್ತ್ವಿಕಸುಖ.[೧] ವಿಷಯ ಮತ್ತು ಇಂದ್ರಿಯಗಳ ಸಂಪರ್ಕದಿಂದಾಗಿ ಒದಗುವ, ಮೊದಲಿಗೆ ಅಮೃತದಂತಿದ್ದು ಕೊನೆಗೆ ವಿಷದಂತಾಗುವ ಸುಖವು ರಾಜಸಸುಖ.[೨] ಮುಂಚೆಯೂ, ಅನಂತರವೂ ಮನಸ್ಸಿಗೆ ಮಂಕು ಕವಿಸುವಂತಹ, ನಿದ್ರೆ, ಆಲಸ್ಯ ಮತ್ತು ಮರೆವುಗಳಿಂದ ಒದಗುವ ಸುಖವು ತಾಮಸಸುಖ ವೆನ್ನಿಸುವುದು.[೩]

---

೧. ಯತ್ ತದಗ್ರೇ ವಿಷಮಿವ ಪರಿಣಾಮೇಽಮೃತೋಪಮಮ್ ।
ತತ್ ಸುಖಂ ಸಾತ್ತ್ವಿಕಂ ಪ್ರೋಕ್ತಮಾತ್ಮಬುದ್ಧಿಪ್ರಸಾದಜಮ್ ॥ – ಗೀತಾ (೧೮/೩೭)

೨. ವಿಷಯೇಂದ್ರಿಯಸಂಯೋಗಾದ್ಯತ್ ತದಗ್ರೇಽಮೃತೋಪಮಮ್ ।
ಪರಿಣಾಮೇ ವಿಷಮಿವ ತತ್ ಸುಖಂ ರಾಜಸಂ ಸ್ಮೃತಮ್ ॥ – ಗೀತಾ (೧೮/೩೮)

೩. ಯದಗ್ರೇ ಚಾನುಬಂಧೇ ಚ ಸುಖಂ ಮೋಹನಮಾತ್ಮನಃ ।

ಭಗವದ್ಪ್ರಸಾದದಿಂದೊದಗುವ ಜ್ಞಾನಾದಿಗಳಿಂದ ಒದಗುವ ಸುಖ ಸಾತ್ತ್ವಿಕ. ಭೌತಿಕಸುಖ ರಾಜಸ. ಮೈಮರೆಸುವ ದುರ್ವ್ಯಸನಗಳ ಸುಖ ತಾಮಸ. ಸಾತ್ತ್ವಿಕಸುಖ ಮೊದಲು ವಿಷದಂತೆ; ಕೊನೆಯಲ್ಲಿ ಅಮೃತ. ರಾಜಸಸುಖ ಮೊದಲು ಅಮೃತ; ಕೊನೆಯಲ್ಲಿ ವಿಷ. ತಾಮಸಸುಖವಂತೂ ಮೊದಲಿನಿಂದ ಕೊನೆಯವರೆಗೂ ವಿಷವೇ.

*****

## ತ್ರಿಗುಣಗಳ ವ್ಯಾಪ್ತಿ

ಸತ್ತ್ವಾದಿತ್ರಿಗುಣಗಳ ವ್ಯಾಪ್ತಿ ವಿಶಾಲವಾದುದು. ಭೂಲೋಕ, ದೇವಲೋಕ ಮೊದಲಾದ ಯಾವುದೂ ಇವುಗಳಿಗೆ ಹೊರತಲ್ಲ. ಮನುಷ್ಯರಂತೆ ದೇವತೆಗಳೂ ಗುಣತ್ರಯದ ವ್ಯಾಪ್ತಿಗೆ ಒಳಪಡುವವರೇ.[೧] ಬ್ರಹ್ಮಾದಿದೇವತೆಗಳಿಂದ ಹಿಡಿದು, ತೃಣಜೀವರವರೆಗಿನ ಬಾಹ್ಯದೇಹ ತ್ರಿಗುಣಾತ್ಮಕವಾದದ್ದು. ಅದರಲ್ಲೂ ತಾರತಮ್ಯವುಂಟು. ಬ್ರಹ್ಮದೇವರ ದೇಹವು ಸತ್ತ್ವಮಯ. ಇತರ ದೇವತೆಗಳಲ್ಲಿ ಸತ್ತ್ವಗುಣದ ಪ್ರಮಾಣ ಕುಸಿಯುವುದು. ಮನುಷ್ಯರಲ್ಲಿ ರಜೋಗುಣದ ಮೇಲ್ಮೆ. ಅಸುರರಲ್ಲಿ ತಮೋಗುಣಕ್ಕೇ ಪ್ರಾಧಾನ್ಯ. ಮುಕ್ತಿಯೋಗ್ಯರ ಸ್ವರೂಪದೇಹವು ಶುದ್ಧಸತ್ತ್ವಾತ್ಮಕ; ಅದು ಪ್ರಾಕೃತವಲ್ಲ. ಗುಣತ್ರಯದ ಸಂಬಂಧ ಅನ್ವಯಿಸುವುದು ಸಂಸಾರಾವಸ್ಥೆಯಲ್ಲಿನ ಅವರ ಪ್ರಾಕೃತದೇಹಕ್ಕೆ ಮಾತ್ರ. ಇತರರಿಗೂ ಪ್ರಾಕೃತಗುಣದ ಸಂಪರ್ಕ ಸಂಸಾರಾವಸ್ಥೆಯಲ್ಲಿಯೇ. ಸ್ವರೂಪದಲ್ಲಿ ನಿತ್ಯಸಂಸಾರಿಗಳದು ಕೇವಲ ರಜೋಗುಣ; ತಾಮಸರದು ಕೇವಲ ತಮೋಗುಣ.

ಲಕ್ಷ್ಮೀನಾರಾಯಣರಿಗೆ ಮಾತ್ರ ಗುಣತ್ರಯದ ಸಂಪರ್ಕ ಎಂದೂ ಇರದು. ಅವರ ಮೂಲರೂಪದಂತೆ ಅವತಾರಗಳೂ ಅಪ್ರಾಕೃತವಾಗಿದ್ದು, ಪ್ರಾಕೃತಗುಣಗಳ ಸಂಪರ್ಕ ಅವರಿಬ್ಬರಿಗೂ ಯಾವಕಾಲಕ್ಕೂ ಎಷ್ಟುಮಾತ್ರಕ್ಕೂ ಇರುವುದೇ ಇಲ್ಲ.

## ಬ್ರಾಹ್ಮಣಾದಿ ನಾಲ್ಕು ವರ್ಣಗಳ ಲಕ್ಷಣವಿವೇಚನೆ

ಬ್ರಾಹ್ಮಣಾದಿ ನಾಲ್ಕುವರ್ಣಗಳ ಲಕ್ಷಣವಿವೇಚನೆ ಮುಂದಿನ ಘಟ್ಟ.

ಭಗವನ್ನಿಷ್ಠೆ ಇಂದ್ರಿಯನಿಗ್ರಹ, ಬ್ರಹ್ಮಚರ್ಯಾದಿತಪಸ್ಸು ಒಳಹೊರಗಿನ ಶುದ್ಧಿ ಕ್ಷಮೆ, ನೇರ ನಡೆನುಡಿಗಳು, ಜ್ಞಾನ, ವಿಜ್ಞಾನ ಮತ್ತು ಧರ್ಮಶ್ರದ್ಧೆ – ಇವು ಬ್ರಾಹ್ಮಣಸ್ವಭಾವದ ಸಹಜಗುಣಗಳು. ಶೂರತನ, ತೇಜಸ್ಸು ಧೈರ್ಯ, ನಿಪುಣತೆ, ಸಮರದಲ್ಲಿ ಅಂಜಿ ಓಡದಿರುವುದು, ದಾನ ಕೊಡುವುದು ಮತ್ತು ಆಳುವ ಛಾತಿ – ಇವು

---

ನಿದ್ರಾಲಸ್ಯಪ್ರಮಾದೋತ್ಥಂ ತತ್ ತಾಮಸಮುದಾಹೃತಮ್ ॥ – ಗೀತಾ (೧೮/೩೯)

೧. ನ ತದಸ್ತಿ ಪೃಥಿವ್ಯಾಂ ವಾ ದಿವಿ ದೇವೇಷು ವಾ ಪುನಃ ।
ಸತ್ತ್ವಂ ಪ್ರಕೃತಿಜೈರ್ಮುಕ್ತಂ ಯದೇಭಿಃ ಸ್ಯಾತ್ ತ್ರಿಭಿರ್ಗುಣೈಃ ॥ – ಗೀತಾ (೧೮/೪೦)

ಕ್ಷತ್ರಿಯ ಸ್ವಭಾವದ ಸಹಜ ಗುಣಗಳು. ಬೇಸಾಯ, ಪಶುಪಾಲನೆ ಮತ್ತು ವ್ಯಾಪಾರ ವೈಶ್ಯರ ಸಹಜ ಕರ್ಮ. ಸೇವಾಕಾರ್ಯ ಶೂದ್ರಸ್ವಭಾವಕ್ಕೆ ಸಹಜವಾದದ್ದು.

*****

## ವರ್ಣವಿವೇಕ

ವರ್ಣವಿವೇಕ ತುಂಬಾ ಅಪಾರ್ಥಕ್ಕೊಳಗಾಗಿರುವ ಪರಿಕಲ್ಪನೆ. ವರ್ಣಗಳಿಗೂ, ಜಾತಿಗಳಿಗೂ ವ್ಯತ್ಯಾಸ ತಿಳಿಯದೆ ಆಕ್ಷೇಪಿಸುವ ಜನರೇ ಬಹಳ. ಮೇಲ್ನೋಟಕ್ಕೆ ವರ್ಣ ಹಾಗೂ ಜಾತಿಗಳನ್ನು ಸಮಾನಾರ್ಥಕವೆಂಬಂತೆ ಪ್ರಯೋಗಿಸಿದರೂ, ಮೂಲತಃ ಅವುಗಳಲ್ಲಿ ವಿಶಾಲವಾದ ಅರ್ಥವ್ಯತ್ಯಾಸ ಉಂಟು. ವರ್ಣಗಳು ನಾಲ್ಕು – ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬುದಾಗಿ. ಜಾತಿಗಳು ಅನೇಕ. ವರ್ಣಸಾಂಕರ್ಯದ ಫಲವೇ ಜಾತಿ. ವರ್ಣಗಳ ಸೃಷ್ಟಿ ಭಗವಂತನಿಂದಲೇ ಆದುದು. ಅದರ ಮೂಲ ಉದ್ದೇಶ ಕರ್ಮಾಚರಣೆಯ ವ್ಯವಸ್ಥೆ. ಪುರುಷಸೂಕ್ತದಲ್ಲಿ ಪ್ರಸ್ತಾಪಿತವಾಗಿರುವುದೂ ಸಹ ಈ ವರ್ಣಗಳೇ. ಜ್ಞಾನ, ರಕ್ಷಣೆ, ವ್ಯವಹಾರ, ಸೇವೆ – ಈ ನಾಲ್ಕು ಕರ್ಮಗಳಿಗಾಗಿ ರೂಪುಗೊಂಡಂಥವು ಈ ನಾಲ್ಕು ವರ್ಣಗಳು. ಜ್ಞಾನಪ್ರಸಾರಕ್ಕಾಗಿ ಬ್ರಾಹ್ಮಣವರ್ಣ, ರಕ್ಷಣೆಗಾಗಿ ಕ್ಷತ್ರಿಯವರ್ಣ, ವ್ಯವಹಾರಕ್ಕಾಗಿ ವೈಶ್ಯವರ್ಣ ಹಾಗೂ ಸೇವೆಗಾಗಿ ಶೂದ್ರವರ್ಣ – ಇವು ಕರ್ಮದ ಹಿನ್ನೆಲೆಯಲ್ಲಿನ ವರ್ಣವ್ಯವಸ್ಥೆ. ಇಂದಿಗೂ ಯಾವುದೇ ಕಛೇರಿಗಳಲ್ಲೂ ಈ ನಾಲ್ಕು ವರ್ಗದ ನೌಕರರು ಇರುವುದು ಅನಿವಾರ್ಯ. ಮನೆಯಲ್ಲೂ ಅಂತೆಯೇ.

ಇನ್ನು ಗುಣವಿಭಾಗ. ಆಯಾ ಕರ್ಮಕ್ಕೆ ತಕ್ಕಂತೆ ದೇಹದಲ್ಲಿ ಆಯಾ ಗುಣಗಳನ್ನು ವಿಶೇಷವಾಗಿ ಅಳವಡಿಸುವುದು ಇದರ ಹಿನ್ನೆಲೆ. ಬ್ರಾಹ್ಮಣಾದಿ ನಾಲ್ಕು ವರ್ಣಗಳಲ್ಲಿ ಸತ್ತ್ವಾದಿತ್ರಿಗುಣಗಳನ್ನು ಹೀಗೆಯೇ ಅಳವಡಿಸಿರುವರು. ವಾಹನವ್ಯವಸ್ಥೆಯಲ್ಲೂ ಪ್ರಯಾಣಿಕರ ವಾಹನಕ್ಕೂ, ಸರಕಿನ ವಾಹನಕ್ಕೂ ವ್ಯತ್ಯಾಸವಿರುವಂತೆ. ಕಾರು, ಬಸ್ಸುಗಳು ಪ್ರಯಾಣಕ್ಕೆ ಉಪಯೋಗವಾಗುವಂತೆ, ಲಾರಿ ಸರಕುಸಾಗಣೆಗೂ, ಟ್ರಾಕ್ಟರ್‌ಗಳು ವ್ಯವಸಾಯ ಮೊದಲಾದ ಇತರ ಕಾರ್ಯಗಳಿಗೂ ಉಪಯೋಗವಾಗುವಂತೆ. ಅವುಗಳ ರಚನೆ ಅವುಗಳ ಕಾರ್ಯಕ್ಕೆ ತಕ್ಕಂತೆಯೇ ರೂಪುಗೊಂಡಿವೆ. ಇವುಗಳ ಯಂತ್ರಗಳ ಸಾಮರ್ಥ್ಯವೂ ಅದರಂತೆ ವಿಭಿನ್ನವಾಗಿರುತ್ತವೆ. ಇದರಲ್ಲಿ ಪಕ್ಷಪಾತಾದಿಗಳ ಪ್ರಶ್ನೆಯೇ ಇಲ್ಲ. ಆಯಾ ಕಾರ್ಯನಿರ್ವಹಣೆಗೆ ತಕ್ಕ ನಿರ್ಮಾಣವ್ಯವಸ್ಥೆ ಮಾತ್ರ. ಮನೆಗಳಲ್ಲಿಯೂ ದೇವರಮನೆ, ಅಡಿಗೆಮನೆ, ಊಟದ ಮನೆಗಳಲ್ಲೂ ಆವಶ್ಯಕತೆಗಳಿಗೆ ತಕ್ಕಂತೆ ರೂಪುರೇಖೆಗಳು ವಿಭಿನ್ನವಾಗಿರುವುದು ಅನಿವಾರ್ಯ. ಈ ಹಿನ್ನೆಲೆಯಲ್ಲಿ ವರ್ಣಗಳ ನಿರ್ಮಾಣ ಭಗವಂತನಿಂದಲೇ ನಡೆಯಿತು. ಈ ವರ್ಣವ್ಯವಸ್ಥೆ ಯೋಗ್ಯತೆಯನ್ನು

ಆಳೆಯುವ ಸಾಧನವನ್ನಾಗಿ ಶಾಸ್ತ್ರ ವಿಧಿಸಿಲ್ಲ. ಇದೇನಿದ್ದರೂ ಗುಣಕರ್ಮಗಳಿಗಷ್ಟೇ ಸೀಮಿತ. ಮುಕ್ತಿಸಂಪಾದನೆಗೆ ಈ ಎಲ್ಲ ವರ್ಣದವರೂ ಅರ್ಹರೇ. ಅದಕ್ಕೆ ಕಡ್ಡಾಯವಾದದ್ದು ಜ್ಞಾನವೇ ಹೊರತು, ಇತರ ಯಾವುದೂ ಅಲ್ಲ. ಅಂತಹ ಜ್ಞಾನಸಂಪಾದನೆ ವರ್ಣಗಳಿಗೆ ಅನುಸಾರವಾಗಿ ವಿಭಿನ್ನಮೂಲಗಳಿಂದ ಒದಗಬಹುದು.

*****

ಜೀವರು ಸ್ವಭಾವತಃ ವರ್ಣವ್ಯವಸ್ಥೆ ಹೊಂದಿದವರು ಎಂಬ ಹೊಸ ವಿವರವನ್ನು ಶ್ರೀಮಧ್ವಾಚಾರ್ಯರು ನೀಡಿರುವರು. ಅದರಂತೆ ಕೆಲವು ಜೀವರು ಸ್ವಭಾವತಃ ಬ್ರಾಹ್ಮಣರು. ಅದರಂತೆ ಸ್ವಭಾವತಃ ಕ್ಷತ್ರಿಯರು, ವೈಶ್ಯರು, ಶೂದ್ರರೂ ಆದ ಜೀವರು ಇರುವರು. ಜ್ಞಾನವನ್ನೇ ಸಹಜವಾಗಿ ಮೆಚ್ಚುವುದು ಬ್ರಾಹ್ಮಣಜೀವರ ಲಕ್ಷಣವಾದರೆ, ರಕ್ಷಣೆ ನೀಡುವ ಪ್ರವೃತ್ತಿ ಕ್ಷತ್ರಿಯಜೀವರ ಲಕ್ಷಣ. ವ್ಯಾಪಾರಪ್ರವೃತ್ತಿ ವೈಶ್ಯಜೀವರ ಸ್ವಭಾವವಾದರೆ, ಸೇವಾಮನೋಭಾವ ಶೂದ್ರಜೀವರ ಪ್ರವೃತ್ತಿ. ಆಯಾ ಜೀವರಿಗೆ ಸಾಮಾನ್ಯವಾಗಿ ಭಗವಂತ ಆಯಾ ವರ್ಣದ ದೇಹವನ್ನೇ ನೀಡುವನು. ಕೆಲವು ವಿಶೇಷಕಾರಣಗಳ ಹಿನ್ನೆಲೆಯಲ್ಲಿ ಅವು ಬದಲಾಗುವುದೂ ಉಂಟು. ಎಂದರೆ ಬ್ರಾಹ್ಮಣಜೀವ ಶೂದ್ರದೇಹ ಪಡೆದು ಹುಟ್ಟಬಹುದು. ಅದರಂತೆ ಶೂದ್ರಜೀವ ಬ್ರಾಹ್ಮಣನಾಗಿ ಜನಿಸಬಹುದು; ಹಾಗೆಯೇ ಕ್ಷತ್ರಿಯವೈಶ್ಯರೂ ಸಹ. ಒಬ್ಬ ಜೀವ ತನ್ನ ಸ್ವರೂಪಕ್ಕೆ ಅನುಗುಣವಾದ ದೇಹವನ್ನೇ ಪಡೆದು ಹುಟ್ಟಿದಲ್ಲಿ ಅವನ ನಡವಳಿಕೆ ಸಂಪೂರ್ಣವಾಗಿ ಆ ವರ್ಣಕ್ಕನುಗುಣವಾಗಿಯೇ ಇರುವುದು. ಉದಾಹರಣೆಗೆ ಬ್ರಾಹ್ಮಣಜೀವ ಬ್ರಾಹ್ಮಣನಾಗಿ ಜನಿಸಿದರೆ, ಬ್ರಾಹ್ಮಣನ ಎಲ್ಲಾ ಲಕ್ಷಣಗಳೂ ಅವನಲ್ಲಿ ಪೂರ್ಣವಾಗಿ ಕಂಡುಬರುವುವು; ಅದರಂತೆ ಕ್ಷತ್ರಿಯಾದಿಜೀವರೂ ಸಹ.

ಆಯಾ ವರ್ಣಕ್ಕೆ ಉಚಿತವಾದ ಲಕ್ಷಣಗಳು ಪೂರ್ಣಪ್ರಮಾಣದಲ್ಲಿ ಕಂಡು-ಬರದಿದ್ದಲ್ಲಿ ಜೀವಸ್ವಭಾವ ಹಾಗೂ ದೇಹವರ್ಣಗಳು ವಿಭಿನ್ನವೆಂದೇ ಅರ್ಥ. ಆಡಳಿತದತ್ತ ಒಲಿಯುವ ಬ್ರಾಹ್ಮಣ ಸ್ವರೂಪದಲ್ಲಿ ಕ್ಷತ್ರಿಯಜೀವ ಎಂದರ್ಥ. ಜ್ಞಾನಕಾರ್ಯಕ್ಕೆ ಒಲಿಯುವ ಶೂದ್ರ ಬ್ರಾಹ್ಮಣಜೀವ ಎಂದೇ ಅರ್ಥ.

ಇನ್ನು ಗೌರವದ ಪ್ರಶ್ನೆ. ವರ್ಣನಿಮಿತ್ತಕವಾದ ಗೌರವ ಸಾಂಕೇತಿಕವಾದದ್ದು ಮಾತ್ರ. ಪ್ರತಿಯೊಬ್ಬರೂ ನಿಜಕ್ಕೂ ಗೌರವಕ್ಕೆ ಅರ್ಹನಾಗುವುದು ತನ್ನ ವರ್ಣಕ್ಕೆ ತಕ್ಕಂತೆ ಬದುಕಿದಾಗ ಮಾತ್ರ. ಆಯಾ ವರ್ಣಕ್ಕೆ ಅನುಗುಣವಾಗಿ ಬದುಕುವ ಪ್ರತಿಯೊಬ್ಬರದೂ ಪೂಜ್ಯವ್ಯಕ್ತಿತ್ವವೇ ಆದುದು. ಅವರವರ ವಿಭಾಗದಲ್ಲಿ ಅವರ ಹಿರಿಮೆ ಅಬಾಧಿತವಾದುದು. ಇದರಲ್ಲಿನ ಮೇಲುಕೀಳುಗಳು ಮನುಷ್ಯನ ಚಿಂತನೆಯ ವಿಕೃತಿ ಮಾತ್ರ.

ಬ್ರಾಹ್ಮಣನೊಬ್ಬ ಆ ವರ್ಣಕ್ಕೆ ಅನುಗುಣವಾಗಿ ಬದುಕದಿದ್ದಲ್ಲಿ ಅವನ ಪೂಜ್ಯತೆಗೆ ಧಕ್ಕೆ ಒದಗುವುದು ಅನಿವಾರ್ಯ; ಅಂತೆಯೇ ಶೂದ್ರನೊಬ್ಬ ಬ್ರಾಹ್ಮಣನ ಗುಣ-

ಲಕ್ಷಣಗಳನ್ನು ವಿಶೇಷವಾಗಿ ಹೊಂದಿದ್ದಲ್ಲಿ ಅವನಿಗೆ ಬ್ರಾಹ್ಮಣನಂತೆ ಗೌರವವೂ ಅನಿವಾರ್ಯ. ಮಹಾಭಾರತದ ವಿದುರ, ರಾಮಾಯಣದ ಶಬರಿ ಗುಹರು, ಈ ಕಾಲದ ಕನಕದಾಸರು ಇದಕ್ಕೆ ನಿದರ್ಶನ. ಭಾಗವತದ ಅಜಾಮಿಳ ಮೊದಲಾದವರು ತಪ್ಪಾಗಿ ಬದುಕಿದಾಗ ನಿಂದ್ಯರಾಗುತ್ತಿದ್ದುದಕ್ಕೆ ನಿದರ್ಶನ.

*****

ಶ್ರೀಮಧ್ವಾಚಾರ್ಯರು ಈ ವರ್ಣವ್ಯವಸ್ಥೆಯ ಬಗ್ಗೆ ಅಪೂರ್ವವಾದ ಇನ್ನೂ ವಿವರಗಳನ್ನು ನೀಡಿರುವರು. ಬ್ರಾಹ್ಮಣಾದಿವ್ಯವಸ್ಥೆ ಪ್ರತಿಯೊಬ್ಬನ ದೇಹದಲ್ಲೂ ಉಂಟು. ತಲೆ, ಕೈಕಾಲುಗಳು ಒಂದೇ ದೇಹದ ಅವಯವಗಳಾಗಿರುವಂತೆ, ಬ್ರಾಹ್ಮಣಾದಿವರ್ಣಗಳು ಒಬ್ಬನೇ ಜೀವನ ವಿಭಿನ್ನಗುಣಗಳೂ ಹೌದು. ಅವನ ಚಿಂತನಶೀಲತೆ ಬ್ರಾಹ್ಮಣ್ಯಕ್ಕೂ, ಪಾಲನೆ ಕ್ಷತ್ರಿಯತ್ವಕ್ಕೂ, ವ್ಯವಹಾರನೈಪುಣ್ಯ ವೈಶ್ಯತ್ವಕ್ಕೂ, ತನ್ನ ದೇಹವನ್ನೇ ಸ್ನಾನಾದಿಗಳಿಂದ ಉಪಚರಿಸಿಕೊಳ್ಳುವಾಗ ಶೂದ್ರತ್ವಕ್ಕೂ ನಿದರ್ಶನ. ತಲೆಯಿಂದ ಚಿಂತಿಸಿ, ಕೈಯಿಂದ ರಕ್ಷಿಸಿ, ಕಾಲಿನಿಂದ ಓಡಾಡುವಾಗ ಎಲ್ಲ ವರ್ಣಗಳೂ ಒಟ್ಟಾಗಿಯೇ ಕಾಣುವುದಿಲ್ಲವೇ? ಆದ್ದರಿಂದ ಎಲ್ಲರೂ ಏಕಕಾಲಕ್ಕೆ ಎಲ್ಲ ವರ್ಣದವರೂ ಆದವರೇ. ಚಿಕ್ಕವರಿಗೆ ತಿಳಿಹೇಳುವಾಗ ಬ್ರಾಹ್ಮಣ, ದುರ್ಬಲರನ್ನು ರಕ್ಷಿಸುವಾಗ ಕ್ಷತ್ರಿಯ, ವ್ಯವಹಾರಕೌಶಲ ತೋರಿದಾಗ ವೈಶ್ಯ, ತನಗಿಂತ ದೊಡ್ಡವರನ್ನು ಉಪಚರಿಸುವಾಗ ಶೂದ್ರ. ಇಂತಹ ಬದುಕೇ ನಿಜವಾದ ಅರ್ಥದಲ್ಲಿ ಸಾಧನೆಯ ಬದುಕು ಎಂಬುದು ಅವರ ನಿರೂಪಣೆ.

ವಿಷಯ ಹೀಗಿದ್ದರೂ, ಬಾಹ್ಯದ ವ್ಯವಹಾರಗಳಿಗೆ ದೇಹದ ಜಾತಿ ಪ್ರಧಾನ. ಒಳಗಿನ ಜೀವದ ಸ್ವರೂಪ ದುರ್ಜ್ಞೇಯವಾದ್ದರಿಂದ ಈ ವ್ಯವಸ್ಥೆ ಅನಿವಾರ್ಯವೂ ಹೌದು. ಲೋಕದಲ್ಲೂ ಕೆಲವು ವೈದ್ಯ, ಇಂಜನಿಯರ್ ಮೊದಲಾದ ಹುದ್ದೆಗಳಿಗೆ ಅದಕ್ಕೆ ಸಂಬಂಧಿಸಿದ ಅಂಗೀಕೃತ ವಿಶ್ವವಿದ್ಯಾನಿಲಯಗಳ ಪದವಿಗಳೇ ಮುಖ್ಯ ಆಧಾರ. ಕೆಲವೊಮ್ಮೆ ಅಂತಹ ಪದವಿಗಳಿಲ್ಲದೆಯೂ ಒಬ್ಬ ಅಪ್ರತಿಮವೈದ್ಯ ಆಗಿರಬಲ್ಲ. ಆದರೂ, ಸಂಬಂಧಿಸಿದ ಉದ್ಯೋಗಕ್ಕೆ ನೇಮಕ ಮಾಡುವಾಗ ಪದವಿಗಳ ಅವಲಂಬನೆ ಅನಿವಾರ್ಯ. ಈ ವ್ಯವಸ್ಥೆ ಇಲ್ಲವಾದಲ್ಲಿ ದಿನನಿತ್ಯದ ವ್ಯವಹಾರ ಬುಡಮೇಲಾಗುವುದು ನಿಶ್ಚಿತ. ಆದರೂ ಇದು ಗೌಣವೇ. ಯೋಗ್ಯತೆಯ ನಿರ್ಣಯಕ್ಕೆ ಅವರ ಸಹಜ ಆಚಾರವಿಚಾರಗಳೇ ಮುಖ್ಯವಾದ ಅಳತೆಗೋಲು.

ಛಾಂದೋಗ್ಯೋಪನಿಷತ್ತಿನಲ್ಲಿ ಬರುವ ಸತ್ಯಕಾಮನ ಪ್ರಸಂಗ ಇದಕ್ಕೆ ಉತ್ತಮ ನಿದರ್ಶನ. ತನ್ನ ಗೋತ್ರ ತಿಳಿಯದ ಸತ್ಯಕಾಮ, ಗುರುಗಳು ಪ್ರಶ್ನಿಸಿದಾಗ ತನ್ನ ಗೋತ್ರ ತಿಳಿಯದೆಂದೇ ಪ್ರಾಮಾಣಿಕವಾಗಿ ಉತ್ತರಿಸುತ್ತಾನೆ. ಗುರುಗಳು ತತ್ಕ್ಷಣ ತೀರ್ಮಾನಿಸುತ್ತಾರೆ: "ಇವನ ಪ್ರಾಮಾಣಿಕತೆ ಇವನ ಜಾತಿಯನ್ನು ತಿಳಿಸುತ್ತದೆ; ಇವನು ನಿಶ್ಚಿತವಾಗಿಯೂ

ಬ್ರಾಹ್ಮಣನೇ". ಇದರರ್ಥ ಇತರ ಜಾತಿಯವರು ಅಪ್ರಾಮಾಣಿಕರೆಂದಲ್ಲ, ಬ್ರಾಹ್ಮಣನಲ್ಲಿ ಇಂತಹ ಗುಣಗಳು ವಿಶೇಷವಾಗಿ ಕಂಡುಬರುತ್ತವೆ ಎಂದಷ್ಟೇ. ಪರಶುರಾಮರು ಕರ್ಣನ ದೇಹಶಕ್ತಿಯನ್ನು ಗಮನಿಸಿ, "ನೀನು ಖಂಡಿತ ಬ್ರಾಹ್ಮಣನಲ್ಲ" ಎಂದು ಜಗತ್ತಿಗೆ ತೋರಿಸಿಕೊಟ್ಟದ್ದು ಇದಕ್ಕೆ ಮತ್ತೊಂದು ನಿದರ್ಶನ.

ಇದು ವರ್ಣಧರ್ಮಗಳ ಬಗ್ಗೆ ವಿಶೇಷ ಬೆಳಕು ಚೆಲ್ಲುವ ಮಾತು. ಬ್ರಾಹ್ಮಣ ಮೊದಲಾದ ಸಕಲವರ್ಣದವರಿಗೂ ಇತರವರ್ಣಗಳ ಕಾರ್ಯವೂ ವಿಹಿತ; ಎಂದರೆ ತನಗಿಂತ ಚಿಕ್ಕವರಿಗೆ ತಿಳಿಸಿಕೊಡುವಾಗ ಅವನ ವರ್ತನೆ ಬ್ರಾಹ್ಮಣನದಾಗುವುದು. ನೊಂದವರಿಗೆ ರಕ್ಷಣೆ ನೀಡುವಾಗ ಕ್ಷತ್ರಿಯನಂತಾಗಬೇಕು ; ಪ್ರಜಾವೃದ್ಧಿ ಮೊದಲಾದ ಕಾರ್ಯಗಳಲ್ಲಿ ವೈಶ್ಯರಂತೆ ವರ್ತಿಸಬೇಕು ; ಗುರುಹಿರಿಯರ ಸೇವಾಕಾರ್ಯದಲ್ಲಿ ಶೂದ್ರನಂತೆ ನಡೆದುಕೊಳ್ಳಬೇಕು ಎಂದು ಇದರ ಭಾವ. ಹೀಗೆ ನಾಲ್ಕುವರ್ಣದ ಧರ್ಮಗಳೂ ಸಾಮಾನ್ಯತಃ ಎಲ್ಲರಿಗೂ ಕರ್ತವ್ಯವೆನ್ನಿಸಲು ಪ್ರತಿಯೊಬ್ಬ ಮನುಷ್ಯನಲ್ಲೂ ಮುಖ, ಬಾಹು, ತೊಡೆ ಹಾಗೂ ಪಾದಗಳು ಇರುವುದೇ ಗಮಕ. ವರ್ಣವ್ಯವಸ್ಥೆಯನ್ನು ಲೇವಡಿ ಮಾಡುವವರು ಈ ಸೂಕ್ಷ್ಮವನ್ನು ತಿಳಿದಲ್ಲಿ ತಪ್ಪುಕಲ್ಪನೆ ದೂರಾಗಲು ಸಾಧ್ಯ.

*****

## ಎಲ್ಲ ವರ್ಣದವರಿಗೂ ಮುಕ್ತಿ ಸಾಧ್ಯ

ಪ್ರತಿಯೊಬ್ಬನೂ ತನ್ನ ಸಹಜಕರ್ತವ್ಯದಲ್ಲಿ ತೊಡಗಿದಾಗ ಸಿದ್ಧಿಯನ್ನು ಗಳಿಸಿ, ಮುಕ್ತಿ ಪಡೆಯುವನು. ಆ ಬಗ್ಗೆ ಸಂಶಯ ಬೇಕಿಲ್ಲ.[೧]

*****

ಇಂತಹ ವರ್ಣಧರ್ಮಗಳ ಮುಖ್ಯಗುರಿ ಭಗವಂತನ ಆರಾಧನೆ. ಜಗತ್ತಿನ ಸಕಲಪ್ರಾಣಿಗಳ ಪ್ರವೃತ್ತಿಗೂ ಮೂಲಕಾರಣನಾದ, ವಿಶ್ವದ ಎಲ್ಲೆಡೆಯೂ ತುಂಬಿರುವ ಭಗವಂತನನ್ನು ಆರಾಧಿಸುವುದೇ ಸರ್ವವಿಧಶ್ರೇಯಸ್ಸಿನ ಮೂಲ. ತಮ್ಮ ವರ್ಣಾಶ್ರಮಧರ್ಮಗಳನ್ನು ಪ್ರಾಮಾಣಿಕವಾಗಿ ಪರಿಪಾಲಿಸಿ, ಸಮರ್ಪಿಸುವುದೇ ನಿಜವಾದ ಭಗವದಾರಾಧನೆ.

*****

## ಸ್ವಧರ್ಮವೇ ಶ್ರೇಯಸ್ಕರ

ಸಮಗ್ರವಾದ ಪರಧರ್ಮದ ಆಚರಣೆಗಿಂತ ಸ್ವಲ್ಪ ನ್ಯೂನತೆ ಇದ್ದರೂ ತನಗೆ ವಿಹಿತವಾದ ಧರ್ಮದ ಆಚರಣೆಯೇ ಮೇಲು. ತನ್ನ ಸ್ವಭಾವಕ್ಕೆ ವಿಹಿತವಾದ

---

೧. ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಂ ಲಭತೇ ನರಃ ।
ಸ್ವಕರ್ಮನಿರತಃ ಸಿದ್ಧಿಂ ಯಥಾ ವಿಂದತಿ ತಚ್ಛೃಣು ॥
ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ ।
ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ॥ – ಗೀತಾ (೧೮/೪೫,೪೬)

ಕರ್ಮವನ್ನು ಮಾಡಿದಲ್ಲಿ ಪಾಪ ಘಟಿಸದು. ತನಗೆ ವಿಹಿತವಾದ ಧರ್ಮವನ್ನು, ಅದರಲ್ಲಿ ಸ್ವಲ್ಪ ದೋಷವಿದ್ದರೂ ಸಹ ತೊರೆಯಬಾರದು. ಪ್ರತಿಯೊಂದು ಧರ್ಮಕ್ಕೂ ಒಂದಲ್ಲ ಒಂದು ದೋಷವಿರುವುದು ತಪ್ಪಿದ್ದಲ್ಲ.

*****

ತನಗೆ ವಿಹಿತವಾದ ಕರ್ಮವನ್ನು ಅದರಲ್ಲಿ (ಸ್ವಲ್ಪ) ದೋಷವಿದ್ದರೂ ತೊರೆಯ-ಬಾರದು. ಬೆಂಕಿಗೆ ಹೊಗೆಯಂತೆ ಸಕಲಕರ್ಮಗಳಿಗೂ (ಒಂದಲ್ಲ ಒಂದು) ದೋಷವು[1] ಕವಿದೇ ಇರುವುದು. ಕೈಗೆ ರಕ್ತ ಮೆತ್ತೀತೆಂದು ವೈದ್ಯ ಶಸ್ತ್ರಚಿಕಿತ್ಸೆ ಬಿಡಲಾದೀತೆ? ಮೈ ಕೊಳೆಯಾದೀತೆಂದು ರೈತ ಬೇಸಾಯ ತೊರೆಯಲಾದೀತೆ? ಶಸ್ತ್ರದ ಅಪಾಯ ಉಂಟು ಎಂದು ಯೋಧ ಯುದ್ಧ ಬಿಡಲಾದೀತೆ?

## ಸಿದ್ಧಿಯ ಬಗೆ

ಮನಸ್ಸನ್ನು ನಿಯಂತ್ರಿಸಿ, ಯಾವುದನ್ನೂ ಮನಸ್ಸಿಗೆ ಹಚ್ಚಿಕೊಳ್ಳದೆ, ಫಲದ ಹಂಬಲ ತೊರೆಯುವವನು, ಭಗವಂತನಿಗೆ ಸಮಸ್ತವನ್ನೂ ಒಪ್ಪಿಸುವುದರಿಂದಾಗಿ ಮೋಕ್ಷ-ಪ್ರಾಪಕವಾದ (ಪ್ರಾರಬ್ಧದ ಹೊರತು ಇತರ ಅನಿಷ್ಟಕರ್ಮನಾಶರೂಪವಾದ) ಶ್ರೇಷ್ಠಸಿದ್ಧಿಯನ್ನು ಪಡೆದುಕೊಳ್ಳುವನು. ನಿರ್ಮಲವಾದ ಬುದ್ಧಿಯಿಂದ ಕೂಡಿದವನಾಗಿ ಧೈರ್ಯದಿಂದ ಮನಸ್ಸನ್ನು ನಿಯಂತ್ರಿಸಿ, ಶಬ್ದ ಮೊದಲಾದ ವಿಷಯಗಳ ಹಂಬಲ ತೊರೆದು, ರಾಗದ್ವೇಷಗಳನ್ನು ನೀಗಿ, ಜನಜಂಗುಳಿಯಿಂದ ದೂರವಿದ್ದು ಮಿತಾಹಾರದಿಂದಿದ್ದು ಮಾತು ಮೈಮನಸ್ಸುಗಳನ್ನು ಸದ್ವಿಷಯದಲ್ಲಿ ತೊಡಗಿಸಿ, ಧ್ಯಾನಯೋಗದಲ್ಲಿ ಮಗ್ನನಾಗಿ, ಅನುಗಾಲವೂ ವೈರಾಗ್ಯವನ್ನು ನೆಚ್ಚಿದವನು[2], ಅಹಂಕಾರ, ಬಲ, ದರ್ಪ, ಕಾಮ, ಕ್ರೋಧ ಮತ್ತು ಪರಿಗ್ರಹ ಇವುಗಳನ್ನು ತೊರೆದು, ಅಭಿಮಾನವನ್ನು ತ್ಯಜಿಸಿ ನೆಮ್ಮದಿಯಿಂದಿರುವವನು ಬ್ರಹ್ಮಚಿಂತನೆಗೆ (ಬ್ರಹ್ಮಸಾಯುಜ್ಯಕ್ಕೆ ಅಥವಾ ಪರಬ್ರಹ್ಮನ ನೆಲೆಯಾದ ವೈಕುಂಠಲೋಕದ ಪ್ರಾಪ್ತಿಗೆ) ಅರ್ಹನಾಗುವನು.

---

೧. ಸಹಜಂ ಕರ್ಮ ಕೌಂತೇಯ ಸದೋಷಮಪಿ ನ ತ್ಯಜೇತ್ ।
ಸರ್ವಾರಂಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ ॥ – ಗೀತಾ (೧೮/೪೮)

೨. ಅಸಕ್ತಬುದ್ಧಿಃ ಸರ್ವತ್ರ ಜಿತಾತ್ಮಾ ವಿಗತಸ್ಪೃಹಃ ।
ನೈಷ್ಕರ್ಮ್ಯಸಿದ್ಧಿಂ ಪರಮಾಂ ಸಂನ್ಯಾಸೇನಾಧಿಗಚ್ಛತಿ ॥
ಸಿದ್ಧಿಂ ಪ್ರಾಪ್ತೋ ಯಥಾ ಬ್ರಹ್ಮ ತಥಾಽಽಪ್ನೋತಿ ನಿಬೋಧ ಮೇ ।
ಸಮಾಸೇನೈವ ಕೌಂತೇಯ ನಿಷ್ಠಾ ಜ್ಞಾನಸ್ಯ ಯಾ ಪರಾ ॥
ಬುದ್ಧ್ಯಾ ವಿಶುದ್ಧಯಾ ಯುಕ್ತೋ ಧೃತ್ಯಾಽಽತ್ಮಾನಂ ನಿಯಮ್ಯ ಚ ।
ಶಬ್ದಾದೀನ್ ವಿಷಯಾಂಸ್ತ್ಯಕ್ತ್ವಾ ರಾಗದ್ವೇಷೌ ವ್ಯುದಸ್ಯ ಚ ॥
ವಿವಿಕ್ತಸೇವೀ ಲಘ್ವಾಶೀ ಯತವಾಕ್ಕಾಯಮಾನಸಃ ।
ಧ್ಯಾನಯೋಗಪರೋ ನಿತ್ಯಂ ವೈರಾಗ್ಯಂ ಸಮುಪಾಶ್ರಿತಃ ॥
ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಮ್ ।
ವಿಮುಚ್ಯ ನಿರ್ಮಮಃ ಶಾಂತೋ ಬ್ರಹ್ಮಭೂಯಾಯ ಕಲ್ಪತೇ ॥ – ಗೀತಾ (೧೮/೪೯-೫೩)

## ಯೋಗಸಿದ್ಧನ ರೀತಿನೀತಿಗಳು

ಸಾಧಕನು ಸಿದ್ಧಿ ಗಳಿಸುವ ಬಗೆಯನ್ನು ಭಗವಂತ ವಿವರಿಸುವ ರೀತಿ ಹೀಗಿದೆ :[೧]

''ಬ್ರಹ್ಮಚಿಂತಕನು ಪ್ರಸನ್ನಮನಸ್ಕನಾಗುವನು; (ಯಾತಕ್ಕೂ) ಶೋಕಿಸನು, ಆಶಿಸನು. ಎಲ್ಲ ಪ್ರಾಣಿಗಳಲ್ಲೂ ಒಂದೇ ತೆರನಾಗಿದ್ದು ನನ್ನಲ್ಲಿ ಶ್ರೇಷ್ಠಭಕ್ತಿಯನ್ನು ಹೊಂದುವನು. ಭಕ್ತಿಬಲದಿಂದಾಗಿ ಭಗವಂತನಾದ ನನ್ನನ್ನು ನಾನು ಹೇಗಿರುವೆನು? ಎಂತಿರುವೆನು? ಎಂಬುದನ್ನು ಸರಿಯಾಗಿ ತಿಳಿಯುವನು. ಹಾಗೆ ನನ್ನನ್ನು ಸರಿಯಾಗಿ ತಿಳಿದು ಅನಂತರ ನನ್ನನ್ನೇ ಸೇರುವನು. ಸದಾ ನನ್ನನ್ನೇ ನೆಚ್ಚಿ ಸಕಲಕರ್ಮಗಳನ್ನು ಮಾಡುವವನು, ನನ್ನ ಪ್ರಸಾದದಿಂದ ಅವ್ಯಯವೂ, ಶಾಶ್ವತವೂ ಆದ ನನ್ನ ನೆಲೆಯನ್ನು ಪಡೆಯುವನು. ಮನಸ್ಸಿನಿಂದ ಸಕಲಕರ್ಮಗಳನ್ನೂ ನನಗೆ ಸಮರ್ಪಿಸಿ, ನನ್ನನ್ನೇ ಸರ್ವೋತ್ತಮನೆಂದು ತಿಳಿದವನಾಗು. ಜ್ಞಾನಯೋಗವನ್ನು ಹಿಡಿದು, ಅನುಗಾಲ ನನ್ನಲ್ಲೇ ಮನಸ್ಸಿಟ್ಟವನಾಗು''.

*****

ಹಾಗೆ ಭಗವಂತನಲ್ಲಿ ಮನಸ್ಸನ್ನು ತೊಡಗಿಸಿದಾಗ ಅವನ ದಯೆಯಿಂದ ಎಲ್ಲ ಸಂಕಟಗಳೂ ದೂರಾಗುವವು. ದುರಹಂಕಾರದಿಂದಾಗಿ ಹಾಗೆ ಮಾಡದಿದ್ದಲ್ಲಿ ಹಾಳಾಗುವುದು ತಪ್ಪಿದ್ದಲ್ಲ. 'ನಾನು ಮಾಡಲಾರೆ' ಎಂದು ತಿಳಿದು ಕರ್ತವ್ಯವನ್ನು ತೊರೆಯುವುದು ತರವಲ್ಲ. ಅದು ನಡೆಯುವಂತಹುದೂ ಅಲ್ಲ. ಭಗವಂತ ತನ್ನ ಸಂಕಲ್ಪದಂತೆ ಮಾಡಿಸಿಯೇ ಮಾಡಿಸುವನು.

*****

ಎಲ್ಲ ಜೀವರು ತಮ್ಮ ಸ್ವಭಾವಕ್ಕನುಗುಣವಾದ ಕರ್ತವ್ಯದ ಕಟ್ಟುಪಾಡಿಗೆ ಒಳಪಟ್ಟವರು. ಅವಿವೇಕದಿಂದಾಗ ಅವರು ಅದನ್ನು ತೊರೆಯಬಯಸಿದರೂ, ಭಗವಂತ ಅದನ್ನು ಮಾಡಿಸಿಯೇ ಮಾಡಿಸುವನು. ಆ ಸರ್ವಶಕ್ತನಾದ ಭಗವಂತನು ಎಲ್ಲೋ ನೆಲೆಸಿಲ್ಲ, ಅವನು ನೆಲೆಸಿರುವುದು ಪ್ರತಿಯೊಬ್ಬ ಪ್ರಾಣಿಯ ಹೃದಯದಲ್ಲಿಯೇ. ಅವನು

---

೧. ಬ್ರಹ್ಮಭೂತಃ ಪ್ರಸನ್ನಾತ್ಮಾ ನ ಶೋಚತಿ ನ ಕಾಂಕ್ಷತಿ ।
ಸಮಃ ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಮ್ ॥
ಭಕ್ತ್ಯಾಮಾಮಭಿಜಾನಾತಿ ಯಾವಾನ್ ಯಶ್ಚಾಸ್ಮಿ ತತ್ತ್ವತಃ ।
ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನಂತರಮ್ ॥
ಸರ್ವಕರ್ಮಾಣ್ಯಪಿ ಸದಾ ಕುರ್ವಾಣೋ ಮದ್ವ್ಯಪಾಶ್ರಯಃ ।
ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಮ್ ॥
ಚೇತಸಾ ಸರ್ವಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಃ ।
ಬುದ್ಧಿಯೋಗಮುಪಾಶ್ರಿತ್ಯ ಮಚ್ಚಿತ್ತಃ ಸತತಂ ಭವ ॥ - ಗೀತಾ (೧೮/೫೪-೫೭)

ಎಲ್ಲರಿಂದಲೂ ಅವರ ಯೋಗ್ಯತೆಗನುಗುಣವಾದ ಕರ್ಮಗಳನ್ನು ಮಾಡಿಸುವುದು ಅಲ್ಲಿ ನೆಲೆಸಿಯೇ.[೧]

*****

## ಭಗವಂತನ ಹಿತನುಡಿ

ಇಷ್ಟು ಹೇಳಿದ ಭಗವಂತ ಉಪಸಂಹಾರರೂಪವಾಗಿ ಇನ್ನಷ್ಟು ಹಿತವಚನಗಳನ್ನು ನುಡಿಯುವನು.

''ಸಕಲಬಗೆಯಿಂದಲೂ ಅವನನ್ನೇ ನೆರೆನಂಬು. ಅವನ ಪ್ರಸಾದದಿಂದ ಭಗವನ್ನಿಷ್ಠೆಯನ್ನೂ ಶಾಶ್ವತಸ್ಥಾನವನ್ನೂ ಪಡೆಯುವಿ''.[೨]

*****

ಅನಂತರ ಭಗವಂತ ತಾನು ಹೇಳಿದ ಜ್ಞಾನ ರಹಸ್ಯಗಳಲ್ಲೂ ರಹಸ್ಯ; ಅದನ್ನು ಸಮಗ್ರವಾಗಿ ವಿವೇಚಿಸಿ, ಅನಂತರ ತೋಚಿದ್ದು ಮಾಡಬಹುದು ಎಂದು ವಿಚಾರಸ್ವಾತಂತ್ರ್ಯವನ್ನು ನೀಡುವನು.

*****

## ಮುಕ್ತಚಿಂತನೆಗೆ ಅವಕಾಶ

ಇದು ಗೀತೆಯ ಮತ್ತೊಂದು ಹಿರಿಮೆ. ಮುಕ್ತಚಿಂತನೆಗೆ, ವಿಚಾರಸ್ವಾತಂತ್ರ್ಯಕ್ಕೆ ಅದು ನೀಡುವ ಅವಕಾಶ ಅಪಾರವಾದದ್ದು. ಇಂದು ಮುಕ್ತಚಿಂತನೆ ಎಂಬ ಪದ ಸ್ವೇಚ್ಛಾಚಿಂತನೆ ಎಂದು ಅಪಾರ್ಥದಲ್ಲಿ ಪ್ರಯೋಗವಾಗುವುದುಂಟು. ಆದರೆ ಅದರ ನಿಜವಾದ ಅರ್ಥ' ತಲೆಗೆ ತೋಚಿದ ಚಿಂತನೆ ಎಂದಲ್ಲ. ಅಂತಹ ಚಿಂತನೆ ಮಾಡುವ ಮುನ್ನ ಗೀತಾದಿಶಾಸ್ತ್ರಗಳನ್ನು ಸಮಗ್ರ ವಿವೇಚಿಸಬೇಕು. ಅವುಗಳ ತಳಹದಿಯಲ್ಲಿ ನಡೆಸುವ ಚಿಂತನೆಯೇ ಮುಕ್ತಚಿಂತನೆ. ಇಲ್ಲವಾದಲ್ಲಿ ಅವನೂ ಬದುಕನು; ಸಮಾಜವೂ ಬದುಕದು. ಬ್ರಹ್ಮಸೂತ್ರವೂ ಹೀಗೆಯೇ; 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬುದಾಗಿ ಪರಿಶುದ್ಧಚಿಂತನೆಗೆ ಅವಕಾಶ ನೀಡಿದೆ.

*****

ಮುಕ್ತಚಿಂತನೆಯ ಫಲಶ್ರುತಿಯನ್ನು ಭಗವಂತ ಮುಂದೆ ನೀಡಿರುವನು :

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ ॥**

---

೧. ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।
ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥ – ಗೀತಾ (೧೮/೬೧)

೨. ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ ।
ತತ್ಪ್ರಸಾದಾತ್ ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್ ॥ – ಗೀತಾ (೧೮/೬೨)

**ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ।**
**ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ।**[೧]

''ನನ್ನಲ್ಲಿ ಮನಸ್ಸಿಡು; ನನ್ನ ಭಕ್ತನಾಗು; ನನ್ನನ್ನೇ ಆರಾಧಿಸು; ನನಗೇ ತಲೆಬಾಗು. ಶಪಥ ಮಾಡುವೆ; ನೀನು ನನ್ನನ್ನೇ ಸೇರುವೆ. ನೀನು ನನಗೆ ಪ್ರಿಯನಾದವನು.

ಸಕಲ(ಅವೈಷ್ಣವ)ಧರ್ಮಗಳನ್ನೂ(ಸಕಲಕರ್ಮಫಲವನ್ನೂ) ತೊರೆದು ನನ್ನೊಬ್ಬನನ್ನೇ ನೆರೆನಂಬು. ನಾನು ನಿನ್ನನ್ನು ಸಕಲಪಾಪಗಳಿಂದಲೂ ಮುಕ್ತನನ್ನಾಗಿಸುವೆ; ಶೋಕಿಸದಿರು''.

*****

ಹೀಗೆ ಮತ್ತೆ ಮತ್ತೆ ತನ್ನ ಉಪದೇಶದಿಂದ ದಾರಿತೋರಲು ಕಾರಣವನ್ನು ಅಲ್ಲಿಯೇ ತಿಳಿಸಿರುವನು. ಅರ್ಜುನ ಅವನಿಗೆ ತುಂಬಾ ಪ್ರಿಯ. ಅದಕ್ಕೆಂದೇ ಅವನ ಬಗ್ಗೆ ಅಷ್ಟು ಕಳಕಳಿ. ಅರ್ಜುನ ಪ್ರಿಯನಾಗಲು ಕಾರಣ ಯಾವುದು? ಅದಾಗಲೇ ಬಂದಿದೆ. ''ನಿಃಶಸ್ತ್ರನಾದ ನಾನು ಬೇಕೋ, ಸಶಸ್ತ್ರವಾದ ನನ್ನ ಸೈನ್ಯ ಬೇಕೋ'' ಎಂದು ಕೃಷ್ಣ ನುಡಿದಾಗ, ಅರ್ಜುನ ಕೃಷ್ಣನನ್ನೇ ಆಯುದ್ಧುಕೊಂಡದ್ದು ಇತಿಹಾಸ. ಅಂತಹ ಆಯ್ಕೆ ಆಳವಾದ ಭಕ್ತಿಗೆ ದ್ಯೋತಕ. ಅಂತಹ ನಿರ್ಮಲಭಕ್ತಿ ಅದರ ಹಿನ್ನೆಲೆಯಾಗಿದ್ದ ದಿವ್ಯಜ್ಞಾನಕ್ಕೆ ದ್ಯೋತಕ. ಅಂತಹ ಜ್ಞಾನಿ ಭಗವಂತನಿಗೆ ಅತ್ಯಂತಪ್ರಿಯ. ಜ್ಞಾನವನ್ನು ಮೆಚ್ಚುವಂತೆ ಭಗವಂತ ಬೇರಾವ ಗುಣವನ್ನೂ ಮೆಚ್ಚಲಾರ ಎಂಬುದನ್ನು ಗಮನಿಸಬೇಕು.

ಅರ್ಜುನನು ಕೃಷ್ಣನಿಗೆ ಪ್ರಿಯನಾಗಲು ಇನ್ನೂ ಅನೇಕ ಕಾರಣಗಳುಂಟು. ಶ್ರೀಕೃಷ್ಣ ಗೋಪಾಲಕ. ಅರ್ಜುನನು ಗೋರಕ್ಷಕ. ಉತ್ತರಗೋಗ್ರಹಣದಲ್ಲಿ ಗೋಮೋಚಕ. ಕೃಷ್ಣ ಬ್ರಾಹ್ಮಣವತ್ಸಲ; ಅರ್ಜುನ ಬ್ರಾಹ್ಮಣರಿಗೆ ನೆರವು ನೀಡಿದವನು. ಕೃಷ್ಣ ಅನಾದಿ ಬ್ರಹ್ಮಚಾರಿ. ಅರ್ಜುನ ಉರ್ವಶಿಯ ಪ್ರೇಮಭಿಕ್ಷೆಯನ್ನು ತಿರಸ್ಕರಿಸಿ, ತನ್ನ ಬ್ರಹ್ಮಚರ್ಯವನ್ನು ಮೆರೆದವನು. ಎಲ್ಲಕ್ಕೂ ಮಿಗಿಲಾಗಿ ಕೃಷ್ಣನು ಭೀಮವತ್ಸಲ; ಅರ್ಜುನ ಸಾಕ್ಷಾದ್ಭೀಮಾನುಜ. ಕೃಷ್ಣ ಧರ್ಮಸಂರಕ್ಷಕ; ಅರ್ಜುನ ಧರ್ಮರಾಜನಾದ ಯುಧಿಷ್ಠಿರನ ತಮ್ಮ. ಕೃಷ್ಣನು ಅಸೂಯಾದಿದೋಷಗಳನ್ನು ಸಹಿಸದವನು; ಅರ್ಜುನ ಅಸೂಯಾದಿದೋಷಗಳನ್ನು ಹೊಂದದವನು ('ಪ್ರವಕ್ಷ್ಯಾಮ್ಯನಸೂಯವೇ' – ೯/೧). ಇದು ಅರ್ಜುನ ಏಕಲವ್ಯನ ಮೇಲೆ ಅಸೂಯೆಪಟ್ಟವನು ಎಂಬ ಕೆಲವರ ಆಕ್ಷೇಪಕ್ಕೂ ಉತ್ತರ. ಇಷ್ಟೆಲ್ಲ ಅರ್ಹತೆ ಇದ್ದ ಕಾರಣದಿಂದಲೇ ಕೃಷ್ಣನಿಗೆ ಪ್ರಿಯನಾದ ಅರ್ಜುನ ಅವನ ಮುಖದಿಂದ ಗೀತೆಯನ್ನು ಸಾಕ್ಷಾತ್ತಾಗಿ ಕೇಳುವ ಮಹಾಭಾಗ್ಯಶಾಲಿ ಎನ್ನಿಸಿದ.

*****

---

೧. ಗೀತಾ ೧೮/೬೫,೬೬

## ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ

"ಎಲ್ಲ ಧರ್ಮಗಳನ್ನೂ ಬಿಟ್ಟುಬಿಡು; ಬಿಟ್ಟು ನನ್ನೊಬ್ಬನನ್ನೇ ಶರಣು ಹೊಂದು" ಎಂಬ ಮಾತು ಮೇಲ್ನೋಟಕ್ಕೆ ಗೊಂದಲ ಹುಟ್ಟಿಸುವಂತಹುದು. ಈವರೆಗೂ ಧರ್ಮಾಚರಣೆಗೆ ಒತ್ತು ಕೊಟ್ಟ ಕೃಷ್ಣ ಇಲ್ಲಿ ಬಿಡಲು ಸೂಚಿಸುತ್ತಿರುವಂತೆ ಕಾಣುತ್ತದೆ. ಅದರ ಆಂತರ್ಯವನ್ನು ಶ್ರೀಮಧ್ವಾಚಾರ್ಯರು ಸ್ಪಷ್ಟಪಡಿಸಿರುವರು. ಇಲ್ಲಿ ಧರ್ಮ ಬಿಡುವುದು ಎಂದರೆ ಧರ್ಮಾಚರಣೆ ಬಿಡುವುದು ಎಂದಲ್ಲ. ಧರ್ಮದ ಫಲವನ್ನು ತೊರೆಯುವುದು ಎಂದರ್ಥ. **'ಮಾ ಫಲೇಷು ಕದಾಚನ'** ಎಂಬುದಾಗಿ ಅವನು ಹೇಳಿರುವುದು ಅದನ್ನೇ ಅಲ್ಲವೆ ! ಸಕಲ ಅವೈಷ್ಣವಕರ್ಮಗಳನ್ನು ತೊರೆಯುವುದು ಎಂಬುದು ಮತ್ತೊಂದು ಬಗೆಯ ಅರ್ಥ. ಅದು 'ಮಾ ತೇ ಸಂಗೋಽಸ್ತ್ವಕರ್ಮಣಿ' ಎಂಬುದರ ಭಾವ. ಸರ್ವಧರ್ಮಗಳ ಫಲವನ್ನು ನನಗೇ ಒಪ್ಪಿಸು ಎಂಬುದು ಇನ್ನೊಂದು ರೀತಿಯ ಅರ್ಥ.

**ಯತ್ ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।**
**ಯತ್ ತಪಸ್ಯಸಿ ಕೌಂತೇಯ ತತ್ ಕುರುಷ್ವ ಮದರ್ಪಣಮ್ ॥**[೧]

– ಎಂಬುದರ ವಿವರವಿದು. ಈ ಅರ್ಥಗಳನ್ನು ಒಪ್ಪದಿದ್ದಲ್ಲಿ **'ತಸ್ಮಾದ್ಯುಧ್ಯಸ್ವ ಭಾರತ'** ಎಂದು ಅವನು ಹೇಳುವುದು ಹೇಗೆ ಉಚಿತವಾಗುತ್ತಿತ್ತು?

*****

ಇಲ್ಲಿಯ 'ಶರಣಂ ವ್ರಜ' ಎಂಬುದನ್ನು ವಿವರಿಸುತ್ತಾ ಮಹಾವಿಷ್ಣುಪುರಾಣದ ವಚನಗಳ ಮೂಲಕ ಶರಣಾಗತಿಯ ಸ್ವರೂಪವನ್ನು ಶ್ರೀಮಧ್ವರು ತೆರೆದಿಟ್ಟಿರುವ ರೀತಿ ತುಂಬಾ ಅಪೂರ್ವವಾದುದು :

**'ಸರ್ವೋತ್ತಮತ್ವವಿಜ್ಞಾನಪೂರ್ವಂ ತತ್ರ ಮನಃ ಸದಾ ।**
**ಸರ್ವಾಧಿಕಪ್ರೇಮಯುಕ್ತಂ ಸರ್ವಸ್ಯಾತ್ರ ಸಮರ್ಪಣಮ್ ॥**
**ಅಖಂಡಾ ತ್ರಿವಿಧಾ ಪೂಜಾ ತದ್ರತ್ಯೈವ ಸ್ವಭಾವತಃ ।**
**ರಕ್ಷತೀತ್ಯೇವ ವಿಶ್ವಾಸಸ್ತದೀಯೋಽಹಮಿತಿ ಸ್ಮೃತಿಃ ।**
**ಶರಣಾಗತಿರೇಷಾ ಸ್ಯಾದ್ ವಿಷ್ಣೌ ಮೋಕ್ಷಫಲಪ್ರದಾ ॥'**

ಭಗವಂತನು ಸರ್ವೋತ್ತಮ ಎಂದು ತಿಳಿದು ಅವನಲ್ಲಿ ಸರ್ವಾಧಿಕವಾದ ಪ್ರೀತಿಯಿಂದ ಕೂಡಿದ ಮನಸ್ಸನ್ನು ಹಾಕುವುದು, ಎಲ್ಲವನ್ನೂ ಅವನಿಗೆ ಸಮರ್ಪಿಸುವುದು, ಅಖಂಡವಾದ ಮೂರು ಬಗೆಯ ಪೂಜೆಯನ್ನು ಅವನಲ್ಲಿ ಸಹಜವಾದ ಆದರದಿಂದಲೇ ಸಮರ್ಪಿಸುವುದು, ರಕ್ಷಿಸಿಯೇ ರಕ್ಷಿಸುವನು ಎಂಬುದಾಗಿ ನಂಬುವುದು, ನಾನು ಅವನಿಗೆ ಸೇರಿದವನು ಎಂದು ಸದಾ ಸ್ಮರಿಸುವುದು– ಇದು ವಿಷ್ಣುವಿನಲ್ಲಿ ಹೊಂದುವ ಶರಣಾಗತಿ ಎನ್ನಿಸುವುದು. ಮೋಕ್ಷವೇ ಇದಕ್ಕೆ ದೊರೆಯುವ ಫಲ.

---

೧. ಗೀತಾ (೯/೨೭)

# ಉಪಸಂಹಾರ

ಅನುಪಮಶಾಸ್ತ್ರವಾದ ಈ ಗೀತೆಯನ್ನು ಸಾಧಕನಾದವನು ತಾನೂ ತಿಳಿದು, ಮತ್ತೊಬ್ಬರಿಗೂ ತಿಳಿಸುವುದು ಭಗವಂತನಿಗೆ ಅತ್ಯಂತ ಪ್ರಿಯಕರವಾದ ಕಾರ್ಯ. ಇದನ್ನು ಓದುವುದು, ತಿಳಿಯುವುದು, ಹೇಳುವುದು, ಮನನ ಮಾಡುವುದು ಮೊದಲಾದ ಪ್ರತಿಯೊಂದು ಕಾರ್ಯವೂ ಮುಕ್ತಿಗೆ ಸೋಪಾನವೇ ಆಗಿದೆ. ಇದನ್ನು ಮತ್ತೊಬ್ಬನಿಗೆ ತಿಳಿಸುವವನನ್ನಂತೂ ಭಗವಂತನು ಇನ್ನಿಲ್ಲದಂತೆ ಮೆಚ್ಚುವನು. ಇದನ್ನು ಶ್ರದ್ಧೆಯಿಂದ ಕೇಳುವುದೂ ಸಹ ಅತ್ಯಂತಪಾವನ. ಆದರೆ ಹಾಗೆ ತಿಳಿಸುವ ಭರದಲ್ಲಿ ಇದನ್ನು ಭಕ್ತಿಯಿಲ್ಲದವರಿಗೆ, ತಪೋಹೀನರಿಗೆ, ಕೇಳುವ ಇಚ್ಛೆ ಇಲ್ಲದವರಿಗೆ, ಭಗವಂತನನ್ನು ದ್ವೇಷಿಸುವವರಿಗೆ ಸರ್ವಥಾ ತಿಳಿಸಬಾರದು ಎಂಬ ಎಚ್ಚರವನ್ನು ಭಗವಂತನೇ ನೀಡಿರುವನು. ಒಲವಿಲ್ಲದವರಿಗೆ ಅಮೂಲ್ಯವಸ್ತುವನ್ನು ನೀಡುವುದು ಒಂದರ್ಥದಲ್ಲಿ ಆ ವಸ್ತುವಿಗೇ ಮಾಡುವ ಅಪಚಾರ ಎಂಬುದು ಇದರ ಹಿಂದಿನ ತತ್ತ್ವ. ಮತ್ತೊಂದು ರೀತಿಯಲ್ಲಿ ಇದು ಗೀತೆಯ ಅರಿವಿಗೆ ಬೇಕಾದ ಅರ್ಹತೆಯನ್ನು ಸೂಚಿಸುವ ಮಾತೂ ಆಗಿದೆ. ಎಂದರೆ ಗೀತೆಯಂತಹ ಗ್ರಂಥವನ್ನು ತಿಳಿಯಲು ಕೇವಲ ಭಾಷಾಜ್ಞಾನ ಸಾಲದು; ಅದರೊಂದಿಗೆ ಅದರ ಭಾವಪರಿಜ್ಞಾನಕ್ಕೆ ಆವಶ್ಯಕವಾದ ಚಿಂತನಶೀಲತೆ, ವ್ರತೋಪವಾಸಗಳ ಅನುಷ್ಠಾನರೂಪವಾದ ತಪಸ್ಸು ಕಾಮಕ್ರೋಧಾದಿಗಳನ್ನು ತೊರೆಯುವಂತಹ ಪರಿಶುದ್ಧಜೀವನ, ಎಲ್ಲಕ್ಕೂ ಮಿಗಿಲಾಗಿ ಅದನ್ನು ಉಪದೇಶಿಸಿದ ಭಗವಂತನಲ್ಲಿ ಅಪಾರ ಭಕ್ತಿ – ಇವೆಲ್ಲ ಇರಲೇಬೇಕು ಎಂದರ್ಥ.

*****

ಇಷ್ಟನ್ನು ತಿಳಿಸಿದ ಭಗವಂತ "ಇದನ್ನು ಏಕಾಗ್ರತೆಯಿಂದ ಕೇಳಿಸಿಕೊಂಡೆಯಾ? ನಿನ್ನ ಅಜ್ಞಾನದ ಮಂಕು ಕಳೆಯಿತೆ?" ಎಂದು ಅರ್ಜುನನನ್ನು ಕೇಳುವನು;[೧] ಅದೆಲ್ಲವನ್ನೂ ಅವನು ಬಲ್ಲವನಾದರೂ. ಹಾಗೆ ಕೇಳುವ ಮೂಲಕ ಹೇಳುವವರಿಗೆ ಕೇಳುವವರಿಗೆ ವಿಷಯ ಸರಿಯಾಗಿ ತಿಳಿಯುವಂತೆ ತಿಳಿಸಬೇಕಾದ ಬದ್ಧತೆಯನ್ನು ತಿಳಿಸಿಕೊಟ್ಟಿರುವನು. ಯಶಸ್ವಿ ಉಪದೇಶಕನ ಮೂಲಭೂತಲಕ್ಷಣವೇ ಇದು. ಈ ದೃಷ್ಟಿಯಲ್ಲೂ ಭಗವದ್ಗೀತೆ ಭಗವದ್ಗೀತೆಯೇ.

*****

---

೧. ಕಚ್ಚಿದೇತತ್ ಶ್ರುತಂ ಪಾರ್ಥ ತ್ವಯೈಕಾಗ್ರೇಣ ಚೇತಸಾ ।
ಕಚ್ಚಿದಜ್ಞಾನಸಂಮೋಹಃ ಪ್ರಣಷ್ಟಸ್ತೇ ಧನಂಜಯ ॥ – ಗೀತಾ (೧೮/೭೨)

ಗೀತೆ ಕೇಳಿದ ಅರ್ಜುನ ಅದ್ಭುತವಾಗಿ ಪ್ರತಿಕ್ರಿಯಿಸುವನು : ''ನನ್ನ ಮೋಹ ಅಳಿಯಿತು; ಸ್ಮೃತಿ ಮರಳಿತು; ಇದೆಲ್ಲ ನಿನ್ನ ದಯೆ. ನನಗೀಗ ಸಂದೇಹ ಉಳಿದಿಲ್ಲ; ನಿನ್ನ ಮಾತನ್ನು ನಡೆಸುವೆ''[೧].

ಅರ್ಜುನ ಇಲ್ಲಿ ಭಗವಂತನ ದಯೆಯ ಬಗ್ಗೆ ಒತ್ತು ಕೊಟ್ಟು ಮಾತಾಡಿರುವುದು ಗಮನಾರ್ಹ. ಎಲ್ಲದಕ್ಕೂ ಭಗವಂತನ ಅನುಗ್ರಹವೆ ಮೂಲ ಎಂಬ ಗೀತೆಯ ಪ್ರಧಾನಸಂದೇಶ ಅವನ ಈ ಮಾತಿನಲ್ಲಿ ಅಡಗಿರುವುದು ಗಮನಾರ್ಹ. ಗೀತೆ ಕೇಳಿದ್ದರಿಂದ ಅವನಲ್ಲಿ ಆದ ಬಹುಮುಖ್ಯಪರಿವರ್ತನೆಯೆಂದರೆ ಇದೇ.

*****

ಹಾಗೆ ನುಡಿದ ಅರ್ಜುನ ತೊರೆದಿದ್ದ ಶಸ್ತ್ರವನ್ನು ಕೈಗೆತ್ತಿಕೊಂಡು ಹೋರಾಟಕ್ಕೆ ಅಣಿಯಾದ. ಗೀತಾಶ್ರವಣದ ಫಲಶ್ರುತಿ ಇದೇ. ಕೇಳಿದ್ದನ್ನು ನಡೆಸಲು ಸಿದ್ಧನಾಗುವುದು. ಶಸ್ತ್ರ ಹಿಡಿಯಬೇಕಾದ ಅರ್ಜುನ ಅದನ್ನು ತೊರೆದಿದ್ದ. ಈಗ ಅದನ್ನು ಮರಳಿ ಹಿಡಿದು ನಿಂತ. ಶಾಸ್ತ್ರ ತೊರೆದು ಬದುಕುವ ಜನ ಮರಳಿ ಅದನ್ನು ಹಿಡಿಯುವಂತಾದರೆ, ಗೀತೆ ಕೇಳಿದ್ದು ಸಾರ್ಥಕ. ಇದಾಗಲು ಸಹ ಮೊದಲು ಹಿಡಿಯಬೇಕಾದದ್ದು ಗೀತೆಯನ್ನೇ. ಅದಕ್ಕೆಂದೆ ಇದು ಎಲ್ಲರಿಗೂ ಅಗತ್ಯವಾದ ಉಪದೇಶ.

*****

ಸಂಜಯನು ವ್ಯಾಸರು ತನಗೆ ಒದಗಿಸಿದ ಭಾಗ್ಯವನ್ನು ಮನಸಾರೆ ನೆನೆಯುತ್ತಾನೆ. ''ಅವರ ದಯೆಯಿಂದ ತಾನೂ ಗೀತೆ ಕೇಳುವಂತಾಯಿತು. ಶ್ರೀಕೃಷ್ಣನ ವಿಶ್ವರೂಪ ಕಾಣುವಂತಾಯಿತು. ಆ ಮೂಲಕ ಬಾಳಿನ ಸಾರ್ಥಕ್ಯವನ್ನೇ ಪಡೆಯುವಂತಾಯಿತು; ರೋಮಾಂಚನಗೊಳ್ಳುವಂತಾಯಿತು. ಎಂತಹ ಕರುಣೆ ವ್ಯಾಸರದು ! ನಿಜಕ್ಕೂ ಅವರು ಭಗವಂತನಾದ ಶ್ರೀಕೃಷ್ಣನ ಮತ್ತೊಂದು ರೂಪ. ಅವರ ಕರುಣೆಗೆ ಪಾತ್ರನಾದ ತಾನೆಂತಹ ಭಾಗ್ಯಶಾಲಿ !''[೨]

---

೧. ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಽಚ್ಯುತ।
ಸ್ಥಿತೋಽಸ್ಮಿ ಗತಸಂದೇಹಃ ಕರಿಷ್ಯೇ ವಚನಂ ತವ॥ – ಗೀತಾ (೧೮/೭೩)

೨. ಇತ್ಯಹಂ ವಾಸುದೇವಸ್ಯ ಪಾರ್ಥಸ್ಯ ಚ ಮಹಾತ್ಮನಃ।
ಸಂವಾದಮಿಮಮಶ್ರೌಷಮದ್ಭುತಂ ರೋಮಹರ್ಷಣಮ್ ॥
ವ್ಯಾಸಪ್ರಸಾದಾಚ್ಛ್ರುತವಾನೇತದ್ಗುಹ್ಯಮಹಂ ಪರಮ್ ।
ಯೋಗಂ ಯೋಗೇಶ್ವರಾತ್ ಕೃಷ್ಣಾತ್ ಸಾಕ್ಷಾತ್ ಕಥಯತಃ ಸ್ವಯಮ್ ॥
ರಾಜನ್ ಸಂಸ್ಮೃತ್ಯ ಸಂಸ್ಮೃತ್ಯ ಸಂವಾದಮಿಮಮದ್ಭುತಮ್ ।
ಕೇಶವಾರ್ಜುನಯೋಃ ಪುಣ್ಯಂ ಹೃಷ್ಯಾಮಿ ಚ ಮುಹುರ್ಮುಹುಃ॥
ತಚ್ಚ ಸಂಸ್ಮೃತ್ಯ ಸಂಸ್ಮೃತ್ಯ ರೂಪಮತ್ಯದ್ಭುತಂ ಹರೇಃ।
ವಿಸ್ಮಯೋ ಮೇ ಮಹಾನ್ ರಾಜನ್ ಹೃಷ್ಯಾಮಿ ಚ ಪುನಃ ಪುನಃ॥ – ಗೀತಾ (೧೮/೭೭)

ಗೀತೆ ಕೇಳಿದ ಅವನಿಗೆ ಮುಂದಿನದೆಲ್ಲ ಗೋಚರಿಸಿತು. ಶಾಶ್ವತಸತ್ಯವನ್ನು ಘೋಷಿಸಿದ:

**ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ।**
**ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ॥**

"ಎಲ್ಲಿ ಯೋಗೇಶ್ವರನಾದ ಶ್ರೀಕೃಷ್ಣನಿರುವನೋ, ಎಲ್ಲಿ ಧನುರ್ಧಾರಿಯಾದ ಅರ್ಜುನನಿರುವನೋ, ಅಲ್ಲಿ ರಾಜ್ಯಲಕ್ಷ್ಮಿ, ವಿಜಯ, ಸಂಪತ್ತು (ಉತ್ತರೋತ್ತರ ಅಭ್ಯುದಯ) ಅಚಲ ಎಂದು ನನ್ನ ನಿಶ್ಚಯ".

ಇದು, ಶ್ರೀವೇದವ್ಯಾಸರು ಕರುಣಿಸಿದ ದಿವ್ಯದೃಷ್ಟಿಯ ಹಿನ್ನೆಲೆಯಲ್ಲಿ ಸಂಜಯ ನುಡಿದ ಮಾತು. ಕುರುಕ್ಷೇತ್ರ ಯುದ್ಧದ ಫಲಿತಾಂಶವೇ ಇದರಲ್ಲಿ ಅಡಗಿದೆ.

ಶ್ರೀ ಕೃಷ್ಣ ಹಾಗೂ ಅರ್ಜುನರು ಇದ್ದಲ್ಲಿ ವಿಜಯಾದಿಗಳು ಖಚಿತ. ವಿಜಯಾದಿಗಳು ಖಚಿತವೆನ್ನಿಸಲು ಶ್ರೀಕೃಷ್ಣ ಒಬ್ಬನಿದ್ದರೆ ಸಾಕು. ಆದರೆ ಅರ್ಜುನನಿಗೆ ಅವು ಲಭಿಸಲು ಶ್ರೀಕೃಷ್ಣನ ಅನುಗ್ರಹ ಅತ್ಯಗತ್ಯ. ಮಾಧವನದು ಸಹಜವಾದ ಸದಾಕಾಲ ನಿಶ್ಚಿತ ಜಯ. ಆದರೆ ಮಾನವನದು ಹಾಗಲ್ಲ. ಮಾಧವನ ಕರುಣೆಗೆ ಪಾತ್ರನಾದಾಗ ಮಾತ್ರವೇ ಅವನಿಗೆ ವಿಜಯ ಮೊದಲಾದವುಗಳು ನಿಶ್ಚಿತ ಎಂದು ಭಾವ.

ಪಾರ್ಥ ಎಂಬುದಕ್ಕೆ ಅರ್ಜುನ ಎಂಬುದು ಸಾಮಾನ್ಯವಾದ ಪ್ರಸಿದ್ಧಿಯ ಅರ್ಥ. ಆದರೆ ಪೃಥೆಯ ಮಗ ಎಂಬ ಅರ್ಥದಲ್ಲಿ ಅದು ಭೀಮ ಹಾಗೂ ಯುಧಿಷ್ಠಿರನಿಗೂ ಅನ್ವಯಿಸುವ ಮಾತು. ಅದರಲ್ಲೂ,

**ಅಪರ್ಯಾಪ್ತಂ ತದಸ್ಮಾಕಂ ಬಲಂ ಭೀಷ್ಮಾಭಿರಕ್ಷಿತಮ್।**
**ಪರ್ಯಾಪ್ತಂ ತ್ವಿದಮೇತೇಷಾಂ ಬಲಂ ಭೀಮಾಭಿರಕ್ಷಿತಮ್॥**

ಎಂಬ ಮಾತಿನಲ್ಲಿ ಭೀಮನಿದ್ದಲ್ಲಿ ಜಯ ಖಚಿತ ಎಂಬ ವಿವರ ದುರ್ಯೋಧನನ ಬಾಯಿಂದಲೇ ಬಂದಿದೆ. ಆದ್ದರಿಂದ ಇಲ್ಲಿ ಭೀಮ ಇದ್ದಲ್ಲಿ ಜಯ ಎಂಬುದು ಮುಖ್ಯ ಭಾವ. ಜಯ ಎಂಬ ಹೆಸರಿನ ಹನುಮಂತನ ಅವತಾರವೇ ಭೀಮ ಎಂಬುದು ಸಹ ಸುಪ್ರಸಿದ್ಧ.

ಧನುಸ್ಸು ಎಂಬುದಕ್ಕೆ ಆರ್ಥರ್ವಣೋಪನಿಷತ್ತಿನಲ್ಲಿ ಪ್ರಣವ ಎಂಬ ಅರ್ಥವೂ ಬಂದಿದೆ: **ಪ್ರಣವೋ ಧನುಃ**. ಪ್ರಣವ ಮಂತ್ರದ ಜಪದ ಮುಖ್ಯ ಅರ್ಹತೆ ಮುಖ್ಯಪ್ರಾಣನದು[೧]. ಆದ್ದರಿಂದ ಧನುರ್ಧರನಾದ ಪಾರ್ಥ ಎಂದರೆ

---

೧. ಅನಂತಮಾತ್ರಾಂತಮುದಾಹರಂತಿ ಯಂ। ತ್ರಿಮಾತ್ರಪೂರ್ವಂ ಪ್ರಣವೋಚ್ಚಯಂ ಬುಧಾಃ।
ತದಾಽಭವದ್ವ್ಯಾವಿಚತುರ್ಮುಖಾಕೃತಿರ್ಜಪಾಧಿಕಾರೀ ಯತಿರಸ್ಯ ಸೂಚಿತಃ॥
ಸುಮಧ್ವವಿಜಯ (೪/೩೨)

ಮುಖ್ಯಪ್ರಾಣನಾದ ಭೀಮನೇ ಎಂದಾಗುವುದು. ಇದರಿಂದ ಸರ್ವೋತ್ತಮನಾದ ಶ್ರೀಹರಿ ಹಾಗೂ ಜೀವೋತ್ತಮನಾದ ಮುಖ್ಯಪ್ರಾಣ ಇದ್ದಲ್ಲಿ ಜಯ ಮೊದಲಾದವುಗಳು ನಿಶ್ಚಿತ ಎಂದಾಗುವುದು. ಈ ಪಕ್ಷದಲ್ಲಿ **ಪಾರ್ಥೋಽಧನುರ್ಧರಃ** ಎಂಬುದಾಗಿ ಅಧನುರ್ಧರನಾದ ಪಾರ್ಥ ಎಂದರೆ ಬಿಲ್ಲು ಹಿಡಿಯದ ಪಾರ್ಥ ಎಂದು ಅರ್ಥಮಾಡಿಕೊಳ್ಳಬೇಕು. ಭೀಮಸೇನ ಬಿಲ್ಲು ಹಿಡಿಯದೇ ಯುದ್ಧ ಮಾಡಿದ ಮಹಾವೀರ. ಗದೆಯನ್ನೂ ಸಹ ಸದಾ ಬಳಸುತ್ತಿದ್ದ ಎಂದೇನಲ್ಲ. ಮುಖ್ಯವಾಗಿ ಭೀಮ ಬಾಹುಶಾಲಿ. ಕೇವಲ ತೋಳ್ಬಲದಿಂದಲೇ ಎಂತಹ ಯುದ್ಧವನ್ನೂ ಜಯಿಸಬಲ್ಲ. ಎಂತಹ ಎದುರಾಳಿಯನ್ನು ಸಹ ಮಣ್ಣುಮುಕ್ಕಿಸಬಲ್ಲ ಅಪ್ರತಿಮ ಮಹಾವೀರ. ಇದನ್ನು ದೃಢಪಡಿಸಲೆಂದೇ ಅಧನುರ್ಧರಃ ಎಂಬುದಾಗಿ ವಿಶೇಷಣವನ್ನಾಗಿ ಬಳಸಿರುವರು ಎಂದು ತಿಳಿಯಬಹುದು.

ಇನ್ನು ಪಾರ್ಥ ಎಂಬುದಕ್ಕೆ ಅರ್ಜುನ ಎಂಬ ಅರ್ಥ ಇಟ್ಟುಕೊಂಡರೂ ಮತ್ತೊಂದು ರೀತಿಯಲ್ಲಿ ಈ ವಾಕ್ಯಕ್ಕೆ ವಿಶೇಷವಾದ ಅರ್ಥ ಲಭಿಸುವುದು. ಶ್ರೀಕೃಷ್ಣ ಇದ್ದರೆ ಸಾಕು ಜಯ ನಿಶ್ಚಿತ. ಅವನ ಜಯಕ್ಕೆ ಅಸ್ತ್ರಶಸ್ತ್ರಾದಿಗಳು ಅನಗತ್ಯ. ಅದನ್ನು ಅವನು ಕೇವಲ ಸಾರಥಿಯಾಗಿಯೇ ಕುಳಿತು ಪಾಂಡವರಿಗೆ ಜಯವನ್ನು ಸಾಧಿಸಿ ಕೊಡುವ ಮೂಲಕ ತೋರಿಸಿಕೊಟ್ಟಿರುವವನು. ಆದರೆ ಅರ್ಜುನನದು ಹಾಗಲ್ಲ. ಅವನ ಜಯಕ್ಕೆ ಶ್ರೀಕೃಷ್ಣನ ಸಾರಥ್ಯದ ಅಗತ್ಯವಿದ್ದಂತೆ ಗಾಂಡೀವ ಧನುಸ್ಸಿನ ಅಗತ್ಯವೂ ಇದ್ದಿತು. ಇದು ಧನುರ್ಧರ ಎಂಬ ಮಾತಿನಿಂದ ಸ್ಫುಟಪಡುವುದು. ಗಾಂಡೀವ ಧನುಸ್ಸು ಸಹ ಮೂಲತಃ ಅರ್ಜುನನಾಗಿರದೇ ಬ್ರಹ್ಮ ದೇವರದಾಗಿದ್ದಿತು, ಎಂಬ ವಿವರ ಮಹಾಭಾರತದಲ್ಲಿದೆ[೧]. ಬ್ರಹ್ಮ ಎಂದರೆ ಹಿಂದೆ ಮುಖ್ಯಪ್ರಾಣನಾಗಿದ್ದವನು. ಇದರಿಂದ ಧನುರ್ಧರನಾದ ಪಾರ್ಥ ಎಂದರೆ ಮುಖ್ಯಪ್ರಾಣನಿಂದ ಅನುಗ್ರಹಿತನಾದ ಅರ್ಜುನ ಎಂದು ಅರ್ಥವಾಗುವುದು. ಕುರುಕ್ಷೇತ್ರ ಯುದ್ಧದಲ್ಲೂ ಸಹ ಅರ್ಜುನ ಭೀಮನ ಸಹಕಾರದಿಂದ ಗೆಲುವು ಪಡೆದ ಉಲ್ಲೇಖ ಸ್ಪಷ್ಟವಾಗಿಯೇ ಬಂದಿದೆ. ಇದರಿಂದ ಅರ್ಜುನನ ಜಯಕ್ಕೆ ಶ್ರೀಹರಿಯಾದ ಕೃಷ್ಣ ಮುಖ್ಯಪ್ರಾಣನಾದ ಭೀಮ ಇಬ್ಬರ ಅನುಗ್ರಹವೂ ಕಾರಣವಾದವು ಎಂಬ ಅಂಶ ಸ್ಫುಟಪಡುವುದು.

---

೧. ತಚ್ಚ ದಿವ್ಯಂ ಧನುಃಶ್ರೇಷ್ಠಂ ಬ್ರಹ್ಮಣಾ ನಿರ್ಮಿತಂ ಪುರಾ ।
ಗಾಂಡೀವಮುಪಸಂಗೃಹ್ಯ ಬಭೂವ ಮುದಿತೋಽರ್ಜುನಃ ॥ -ಮಹಾಭಾರತ (೨೨೪/೧೯)
ಧನುಶ್ಚ ಗಾಂಡೀವಮಥಾಬ್ಜಜಸ್ಯ ಕರೋತಿ ಯೇನಾಖಿಲಸಂಯುತಿಂ ಸಃ ।
ಅಂಶೇನ ದತ್ತಂ ತದುಮಾಪತೇಶ್ಚ ಶಕ್ರಸ್ಯ ಸೋಮಸ್ಯ ಜಲೇಶಿತುಶ್ಚ ॥
ತೇನೈವ ತೇ ಜಿಗ್ಯುರಥೋ ಜಗತ್ತ್ರಯಂ ಪ್ರಸಾದತಸ್ತೇ ಕ್ರಮಶೋಽಬ್ಜಯೋನೇಃ ।
ಅನನ್ಯಧಾರ್ಯಂ ವಿಜಯಾವಹಂ ಚ ಭಾರೇಣ ಲಕ್ಷಸ್ಯ ಸಮಂ ಶುಭಾವಹಮ್ ॥
– ಮಹಾಭಾರತತಾತ್ಪರ್ಯನಿರ್ಣಯ (೨೦/೨೨೫,೨೨೬)

ಹೀಗೆ ಬ್ರಹ್ಮತತ್ತ್ವವಾದ ಕೃಷ್ಣ ಹಾಗೂ ಪ್ರಾಣತತ್ತ್ವವಾದ ಭೀಮ ಇಬ್ಬರ ಹಿರಿಮೆಯು ಸಹ ಇದರಿಂದ ತಿಳಿಯುವುದು. ಉಪನಿಷತ್ತುಗಳಲ್ಲಿ ಬ್ರಹ್ಮತತ್ತ್ವದೊಂದಿಗೆ ಪ್ರಧಾನವಾಗಿ ನಿರೂಪಿತವಾಗಿರುವ ಮತ್ತೊಂದು ತತ್ತ್ವವೆಂದರೆ ಪ್ರಾಣತತ್ತ್ವವೇ ಆಗಿದೆ. ಗೀತೆಯೂ ಸಹ ಉಪನಿಷತ್ತು ಎಂಬುದು ಅದರ ಪ್ರತಿ ಅಧ್ಯಾಯದ ಸಮಾಪ್ತಿ ವಾಕ್ಯದಿಂದ ತಿಳಿಯುವುದು. ಆದ್ದರಿಂದ ಇದರಲ್ಲೂ ಸಹ ಬ್ರಹ್ಮ ತತ್ತ್ವ ಹಾಗೂ ಪ್ರಾಣತತ್ತ್ವಗಳ ನಿರೂಪಣೆ ಬಂದಿರುವುದು ಸಹಜ ಎಂದಾಗುವುದು. ರಾಮಾಯಣದಲ್ಲಿ ಸುಗ್ರೀವ, ವಿಭೀಷಣಾದಿಗಳಿಗೆ ಜಯವು ಲಭಿಸಿದ್ದು ಸಹ ಪ್ರಾಣತತ್ತ್ವದ ಸಂಕೇತವಾದ ಹನುಮಂತನ ಅವಲಂಬನೆಯಿಂದಲೇ ಎಂಬ ವಿಷಯ ವಿಸ್ತಾರವಾಗಿ ನಿರೂಪಿತವಾಗಿದೆ. ಎಂದರೆ ಮಹಾಭಾರತ, ರಾಮಾಯಣಗಳಲ್ಲಿ ವೇದೋಪನಿಷತ್ತುಗಳಲ್ಲಿ ಹೇಗೋ ಹಾಗೇ ಬ್ರಹ್ಮತತ್ತ್ವವಾದ ಶ್ರೀಕೃಷ್ಣ ಶ್ರೀರಾಮ ಎಂಬ ಭಗವದ್ರೂಪಗಳ ಹಿರಿಮೆಯೊಂದಿಗೆ ಪ್ರಾಣತತ್ತ್ವವಾದ ಮುಖ್ಯಪ್ರಾಣನ ಹಿರಿಮೆಯೂ ಸಹ ನಿರೂಪಿತವಾಗಿದೆ ಎಂಬುದು ಸ್ಫುಟಪಡುವುದು.

ಅರ್ಜುನನು ಭಗವದ್ಗೀತೆಯನ್ನು ಪರಬ್ರಹ್ಮನಾದ ಶ್ರೀಕೃಷ್ಣನಿಂದ ಕೇಳುವಾಗಲೂ ಸಹ ಅವನ ರಥದ ಧ್ವಜದ ಮೇಲೆ ಪ್ರಾಣತತ್ತ್ವದ ಸಂಕೇತವಾದ ಹನುಮಂತನು ಉಪಸ್ಥಿತನಿದ್ದುದು ಪ್ರಸಿದ್ಧವಾದ ವಿಷಯ. ಗೀತೆಯ ಮೊದಲ ಅಧ್ಯಾಯದಲ್ಲಿಯೇ ಕಪಿಧ್ವಜ(೧/೨೦) ಎಂಬುದಾಗಿ ಅರ್ಜುನನ ಈ ಹಿರಿಮೆಯು ಪ್ರತಿಪಾದಿತವಾಗಿರುವುದು ಗಮನಿಸಬೇಕಾದ ಅಂಶ.

ಹೀಗೆ ಭಗವದ್ಗೀತೆಯ ಈ ಉಪಸಂಹಾರ ಶ್ಲೋಕವು ಗೀತೋಪನಿಷತ್ತಿನ ಅಂತರ್ಯವನ್ನು ವಿಶೇಷ ರೀತಿಯಲ್ಲಿ ಅನಾವರಣಗೊಳಿಸುವ ಅಪೂರ್ವ ಶ್ಲೋಕವೂ ಆಗಿದೆ.

**॥ ಶ್ರೀಕೃಷ್ಣಾರ್ಪಣಮಸ್ತು ॥**

**ಸಮರ್ಪಿತಂ ಮಯಾ ಭವೇತ್ ಸುಮಧ್ವಸುತ್ತವಾಣಿನಾ ।**
**ರಮಾರಮೇಶಪಾದಯೋಃ ಪ್ರಭಂಜನಾಭಿಧಾಯುಜಾ ॥**

★★★★★

## ಪರಿಶಿಷ್ಟ - ೧

### ಗೀತೆಯಲ್ಲಿ ಬಂದಿರುವ ವಿವಿಧವ್ಯಕ್ತಿಗಳ ಸೂಕ್ಷ್ಮಪರಿಚಯ

**ಶ್ರೀಕೃಷ್ಣ**: ಗೀತೆ ಹೇಳಿದ ಭಗವಂತ; ಭಗವಂತನಾದ ಮಹಾವಿಷ್ಣುವಿನ ದಶಾವತಾರಗಳಲ್ಲಿಎಂಟನೆಯಅವತಾರ. ಮಹಾಭಾರತದಸೂತ್ರಧಾರ. ಕಂಸಾದಿದುಷ್ಟವಿನಾಶಕ. ಪಾಂಡವಾದಿ ಸಮಸ್ತಶಿಷ್ಟಜನಪರಿಪಾಲಕ. ಗೀತೆಯಲ್ಲಿ ಬಂದಿರುವುದೆಲ್ಲ ಅವನ ಮಹಿಮೆಯೇ. ಗೀತೆ ಇವನ ಸಂದೇಶ. ಅದಕ್ಕಾಗಿಯೇ ಭಗವದ್ಗೀತೆ ಎಂದು ಇದಕ್ಕೆ ಹೆಸರು.

**ಪಂಚಪಾಂಡವರು** : ಯುಧಿಷ್ಠಿರ, ಭೀಮಸೇನ, ಅರ್ಜುನ, ನಕುಲ ಹಾಗೂ ಸಹದೇವ ಇವರು ಪಂಚಪಾಂಡವರು. ಪರಾವಹ ಎಂಬ ಮರುತ್ತಿನ ಅವತಾರನಾದ ಪಾಂಡುರಾಜನ ಪುತ್ರರಾದ್ದರಿಂದ ಪಾಂಡವರು ಎಂದು ಅವರು ಪ್ರಸಿದ್ಧರಾದವರು.

**ಯುಧಿಷ್ಠಿರ** : ಪಾಂಡವಜ್ಯೇಷ್ಠ ಯಮಧರ್ಮನ ಅವತಾರ; ಅಜಾತಶತ್ರು, ರಾಜಸೂಯ ಯಾಗ ಮಾಡಿದ ಚಕ್ರವರ್ತಿ; ಸೌಮ್ಯನಾಮಕ ವಾಯುವಿನ ಆವೇಶವು ಇವನಲ್ಲಿ ಇದ್ದಿತು.

**ಭೀಮಸೇನ** : ಪಾಂಡವಶ್ರೇಷ್ಠ ಮುಖ್ಯಪ್ರಾಣನಾದ ವಾಯುದೇವರ ಅವತಾರ; ಜ್ಞಾನ-ಬಲಾದಿಗಳಲ್ಲಿ ಅಪ್ರತಿಮ. ಮಹಾಭಾರತದ ಮಹಾಖಳನಾಯಕರನ್ನೆಲ್ಲಸಂಹರಿಸಿ ಮೆರೆದಮಹಾ-ನಾಯಕ; ಹನುಮಂತನ ಮತ್ತೊಂದು ರೂಪ; ಸೋಲರಿಯದ ಮಹಾಸಾಹಸಿ; ಕೃಷ್ಣಭಕ್ತಾಗ್ರೇಸರ; ಶಿವಾದಿದೇವತೆಗಳ ವರದಿಂದ ಕೊಬ್ಬಿದ್ದ ಬಕ, ಹಿಡಿಂಬ, ಜರಾಸಂಧಾದಿದೈತ್ಯರನ್ನು ಲೀಲಾಜಾಲವಾಗಿ ಸದೆ ಬಡಿದ ಮಹಾವೀರ, ಅಪ್ರತಿಮ ಧೀರ; ವಜ್ರದೇಹಿ.

**ಅರ್ಜುನ** : ಗೀತೆ ಕೇಳಿದ ಮಹಾಮಹಿಮ; ಪಾಂಡವಮಧ್ಯಮ; ಇಂದ್ರಾವತಾರ;ನರಾಂಶ-ದಿಂದ ಕೂಡಿದವನು; ವೀರನಾಮಕ ವಾಯುವಿನ ಆವೇಶದಿಂದಲೂ ಕೂಡಿದ್ದವನು. ಅಪ್ರತಿಮಧನುರ್ಧಾರಿ; ಗಾಂಡೀವಪಾಣಿ; ಶಿವನನ್ನು ಮೆಚ್ಚಿಸಿ ಪಾಶುಪತಾಸ್ತ್ರವನ್ನು ಪಡೆದ ಅಪೂರ್ವ ಸಾಧಕ; ಕಾಲಕೇಯ, ನಿವಾತಕವಚರನ್ನು ಸಂಹರಿಸಿದ ಮಹಾವೀರ. ಊರ್ವಶಿಯ ಪ್ರೇಮಯಾಚನೆಯನ್ನು ನಿರಾಕರಿಸಿದ ಅಪ್ರತಿಮ ಬ್ರಹ್ಮಚಾರಿ; ಶ್ರೀಕೃಷ್ಣನ ಸೋದರಿಯಾದ ಸುಭದ್ರೆಯ ಪತಿ; ಅಭಿಮನ್ಯುವಿನ ತಂದೆ; ಪರಮಕೃಷ್ಣಭಕ್ತ.

**ನಕುಲ ಮತ್ತು ಸಹದೇವ** : ಮಾದ್ರಿಯ ಅವಳಿ ಮಕ್ಕಳು; ಅಶ್ವಿನಿದೇವತೆಗಳ ಅವತಾರ; ಶೀಲ, ವಿನಯಗಳ ಸಾಕಾರಮೂರ್ತಿಗಳು; ವಿಶೇಷಹರಿಭಕ್ತರು; ಇವರಿಬ್ಬರಲ್ಲಿ ಕ್ರಮವಾಗಿ ಸುನೀತಿ ಹಾಗೂ ಶೃಂಗಾರ ನಾಮಕ ವಾಯುದೇವರ ಆವೇಶವಿದ್ದಿತು.

**ಧೃತರಾಷ್ಟ್ರ** : 'ಧೃತರಾಷ್ಟ್ರ' ಎಂಬ ನಾಮಾಂತರವನ್ನು ಹೊಂದಿದ್ದ 'ಹಂಸ' ಎಂಬ ಗಂಧರ್ವರಾಜನ ಅವತಾರ. ದುರ್ಯೋಧನಾದಿ ನೂರು ಕೌರವರ ಹಾಗೂ 'ದುಃಶಲೆ'ಯ ತಂದೆ; ಜಯದ್ರಥ ಇವನ ಅಳಿಯ. ಯುಯುತ್ಸು ಸಹ ಇವನ ಮಗ.

**ಸಂಜಯ** : ಧೃತರಾಷ್ಟ್ರನ ತಂದೆಯಾದ ವಿಚಿತ್ರವೀರ್ಯನಿಗೆ 'ಗವಲ್ಗಣ'ನೆಂಬ ಸೂತನೊಬ್ಬ ನಿದ್ದ; ಅವನ ಪುತ್ರನೇ 'ಸಂಜಯ'. ಇವನು ತುಂಬುರುಗಂಧರ್ವನ ಅವತಾರ; ಶ್ರೀವೇದವ್ಯಾಸರಿಂದ ದಿವ್ಯದೃಷ್ಟಿಯೊಂದಿಗೆ ಕುರುಕ್ಷೇತ್ರ ಯುದ್ಧದ ವೀಕ್ಷಕವಿವರಣೆಗೆ ನಿಯಮಿತನಾದವನು.

**ದುರ್ಯೋಧನ :** ದುರ್ಯೋಧನನು 'ಕಲಿ' ಎಂಬ ದೈತ್ಯನ ಅವತಾರ; ಹುಟ್ಟುವಾಗಲೇ ವಜ್ರಕಾಯ; ಮಹಾಭಾರತದ ಮಹಾಖಳನಾಯಕ; ಅಜ್ಞಾನ, ಮಿಥ್ಯಾಜ್ಞಾನಗಳಿಗೆ ಅಭಿಮಾನಿ ಎನ್ನಿಸಿದ ಮಹಾ ದೈತ್ಯ.

**ಸಾತ್ಯಕಿ:** ಸತ್ಯಕ ಎಂಬ ಯಾದವನ ಮಗ, ಅಸ್ತ್ರ ಶಸ್ತ್ರ ಹಾಗೂ ಸರ್ವ ವಿದ್ಯೆಗಳಲ್ಲಿ ಕೃಷ್ಣಾರ್ಜುನರ ಶಿಷ್ಯ; ಕೃಷ್ಣಪಕ್ಷದ ಅಭಿಮಾನಿ ದೇವತೆಯ ಅವತಾರ. ಇವನಲ್ಲಿ ಗರುಡ, ಸಂವಹ ಎಂಬ ಮರುತ್ ಮತ್ತು ವಿಷ್ಣುಚಕ್ರದ ಅಂಶಗಳೂ ಇದ್ದವು.

**ವಿರಾಟ:** ಉತ್ತರೆಯ ತಂದೆ; ಅಭಿಮನ್ಯುವಿನ ಮಾವ; ಈತನ ಬಳಿಯಲ್ಲೇ ಪಾಂಡವರು 'ಅಜ್ಞಾತವಾಸ'ದ ಒಂದು ವರ್ಷವನ್ನು ಕಳೆದಿದ್ದರು; ಇವನು 'ಹಾಹಾ' ಎಂಬ ಬ್ರಹ್ಮಲೋಕದ ಗಂಧರ್ವನ ಅವತಾರ; 'ವಿವಹ' ಎಂಬ ಮರುದ್ದೇವತೆಯ ಅಂಶವೂ ಅವನಲ್ಲಿತ್ತು; ಇವನು ಮತ್ಸ್ಯದೇಶದ ದೊರೆ.

**ದ್ರುಪದ:** ದ್ರೌಪದಿಯ ತಂದೆ; ಪಾಂಚಾಲದೇಶದ ರಾಜ, ಪಾಂಡವರ ಮಾವ 'ಹೂಹೂ' ಎಂಬ ಗಂಧರ್ವನ ಅವತಾರ; 'ಆವಹ' ಎಂಬ ಮರುದ್ದೇವತೆಯ ಅಂಶವೂ ಅವನಲ್ಲಿತ್ತು; ಇವನು ಪಾಂಚಾಲದೇಶದ ದೊರೆ.

**ಧೃಷ್ಟಕೇತು :** ಶಿಶುಪಾಲನ ಮಗ; ಇವನ ಸಹೋದರಿಯಾದ 'ದೇವಕೀ' ಎಂಬವಳನ್ನು ಯುಧಿಷ್ಠಿರನು ವಿವಾಹವಾಗಿದ್ದ. ಇವನು ಪ್ರಹ್ಲಾದನ ಸಹೋದರಲ್ಲೊಬ್ಬನಾದ ಅನುಹ್ಲಾದ ಎಂಬವನ ಅವತಾರ; 'ಸವಿತೃ' ಎಂಬ ಆದಿತ್ಯನ ಅಂಶವೂ ಅವನಲ್ಲಿ ಇದ್ದಿತು; ಇವನು ಚೇದೀದೇಶದ ರಾಜ.

**ಚೇಕಿತಾನ:** ಒಬ್ಬ ಯಾದವ ವೀರ; 'ಪ್ರವಹ' ಎಂಬ ಮರುತ್ತಿನ ಅವತಾರ.

**ಕಾಶೀರಾಜ:** ಭೀಮಸೇನನ ಪತ್ನಿಯರಲ್ಲೊಬ್ಬಳಾದ 'ಕಾಳಿ'ಯ ತಂದೆ;

**ಪುರುಜಿತ್:** ಕುಂತಿಯ ಒಬ್ಬ ಸಹೋದರ.

**ಕುಂತಿಭೋಜ:** ಕುಂತಿಯ ತಂದೆ; 'ಕೂರ್ಮ' ಎಂಬ ಮರುದ್ದೇವತೆಯ ಅವತಾರ. ಇದೇ ಹೆಸರಿನ ಒಬ್ಬ ಸೋದರನೂ ಕುಂತಿಗೆ ಇದ್ದನು.

**ಶೈಬ್ಯ:** ಕೃಷ್ಣನ ಷಣ್ಮಹಿಷಿಯರಲ್ಲಿ ಒಬ್ಬಳಾದ 'ಭದ್ರಾ' ಎಂಬವಳ ತಂದೆ. 'ಋಭು' ಎಂಬ ದೇವತೆಯ ಅವತಾರ. ವಿಶ್ವೇದೇವತೆಗಳ ಅವತಾರರಾದ ಪಂಚಕೇಕಯರೆಂಬ ಇವನ ಪುತ್ರರೂ ಸಹ ಇವನೊಂದಿಗೆ ಪಾಂಡವಪಕ್ಷದಲ್ಲಿ ಸೇರಿದ್ದರು.

**ಯುಧಾಮನ್ಯು ಮತ್ತು ಉತ್ತಮೌಜಸ್:** ಇವರಿಬ್ಬರೂ ದ್ರುಪದರಾಜನ ಪುತ್ರರು; ವಿಶ್ವಾವಸು ಮತ್ತು ಪರಾವಸು ಎಂಬ ಗಂಧರ್ವರ ಅವತಾರ; ಇವರಲ್ಲಿ ಕ್ರಮವಾಗಿ ಧಾತೃ ಮತ್ತು ಅರ್ಯಮಾ ಎಂಬ ಆದಿತ್ಯರ ಆವೇಶವೂ ಇದ್ದವು.

**ಅಭಿಮನ್ಯು:** ಅರ್ಜುನ, ಸುಭದ್ರೆಯರ ಮಗ; ಪಾಂಡವಸೇನೆಯಲ್ಲಿದ್ದ ಅತ್ಯಂತ ಕಿರಿಯ ವಯಸ್ಸಿನ ಮಹಾವೀರರಲ್ಲೊಬ್ಬ ಚಂದ್ರಾಂಶದಿಂದ ಕೂಡಿದ 'ಬುಧ'ನ ಅವತಾರ; ಶ್ರೀಕೃಷ್ಣನ ಸೋದರಳಿಯ.

**ದ್ರೌಪದೇಯರು:** ಪ್ರತಿವಿಂಧ್ಯ, ಶ್ರುತಸೋಮ, ಶ್ರುತಕೀರ್ತಿ, ಶತಾನೀಕ ಮತ್ತು ಶ್ರುತಕ್ರಿಯ

ಎಂಬ ಐವರು ದ್ರೌಪದೀ ಪುತ್ರರು; ಇವರು ಪಂಚವಿಶ್ವೇದೇವತೆಗಳ ಅವತಾರ; ಚಿತ್ರರಥ, ಅಭಿತಾಮ್ರ, ಕಿಶೋರ, ಗೋಪಾಲ ಮತ್ತು ಬಲ ಎಂಬ ಐವರು ಗಂಧರ್ವಮುಖ್ಯರ ಆವೇಶ ಕ್ರಮವಾಗಿ ಇವರಲ್ಲಿ ಇದ್ದವು.

**ದ್ರೋಣ:** ಕುರುಪಾಂಡವರು ಮೊದಲಾಗಿ, ಆ ಕಾಲದ ಸಕಲರಾಜಪುತ್ರರಿಗೂ ಅಸ್ತ್ರವಿದ್ಯಾಗುರುಗಳಾಗಿದ್ದವರು. ಪರಶುರಾಮರ ಶಿಷ್ಯರು; ದೇವಗುರುಗಳಾದ ಬೃಹಸ್ಪತ್ಯಾಚಾರ್ಯರ ಅವತಾರ; ಭೀಷ್ಮರ ಅನಂತರ ಐದುದಿನಗಳ ಕಾಲ ಕೌರವ ಸೇನಾಪತಿಗಳಾಗಿದ್ದವರು; ಕೌರವರು ಭೀಮನ ಭಯದಿಂದ ಶರಣು ಬಂದಾಗ ಮಾತುಕೊಟ್ಟಿದ್ದಂತೆ ಅವರ ಪಕ್ಷ ವಹಿಸಿದವರು; ಭರದ್ವಾಜಸುತರಾದ ಇವರಲ್ಲಿ ಚತುರ್ಮುಖಬ್ರಹ್ಮನ ಆವೇಶವಿತ್ತು.

**ಭೀಷ್ಮ:** ಕುರುಪಿತಾಮಹರು; ಪರಶುರಾಮರ ಶಿಷ್ಯರು; ಶಂತನು-ಗಂಗೆಯರ ಪುತ್ರ.'ದ್ಯು' ಎಂಬ ವಸುವಿನ ಅವತಾರ. ಮೊದಲ ಹತ್ತು ದಿನಗಳು ಕೌರವರ ಸೇನಾಪತಿಯಾಗಿ ಹೋರಾಡಿ ಅನಂತರ ಅರ್ಜುನನ ಬಾಣಗಳಿಂದ ಶರಮಂಚದಲ್ಲಿ ಒರಗಿದವರು; ತಂದೆಯ ವರದಿಂದ ಇಚ್ಛಾಮರಣಿಗಳಾಗಿದ್ದ ಇವರು, ಯುದ್ಧ ಮುಗಿದ ಮೇಲೆ ಧರ್ಮರಾಜಾದಿಗಳಿಗೆ ರಾಜಧರ್ಮ ಮೊದಲಾದ ಧರ್ಮಗಳನ್ನು ತಿಳಿಸಿ, ಅನಂತರ ಉತ್ತರಾಯಣದಲ್ಲಿ ಶರೀರವನ್ನು ತೊರೆದರು. ಇವರಲ್ಲಿ ಚತುರ್ಮುಖಬ್ರಹ್ಮನ ಅಂಶವೂ ಇದ್ದಿತು. ಇವರ ಮೊದಲ ಹೆಸರು 'ದೇವವ್ರತ'; ಆಜನ್ಮಬ್ರಹ್ಮಚರ್ಯ ಮತ್ತು ರಾಜ್ಯತ್ಯಾಗದ ಪ್ರತಿಜ್ಞೆಯಿಂದಾಗಿ 'ಭೀಷ್ಮ'ರೆನ್ನಿಸಿದರು.

**ಕರ್ಣ:** ಕುಂತಿಯ ವಿವಾಹಪೂರ್ವದ ಮಗ; ಸೂರ್ಯನ ಅವತಾರ; ನರಕಾಸುರ ಹಾಗೂ ಸಹಸ್ರವರ್ಮ ಎಂಬ ಅಸುರರ ಆವೇಶ ಇವನಲ್ಲಿದ್ದಿತು. ಅಂಗರಾಜ; ದುರ್ಯೋಧನನ ಸಹವಾಸದಿಂದಾಗಿ ಪಾಂಡವರ ವಿರುದ್ಧ ನಿಂತವನು; ಪರಶುರಾಮರ ಶಿಷ್ಯ.

**ಕೃಪ:** ಕೃಪಾಚಾರ್ಯರು; ದ್ರೋಣರ ಪತ್ನಿ ಕೃಪಿಯ ಸಹೋದರ; ವಿಷ್ಕಂಭ ಎಂಬ ರುದ್ರನ ಅವತಾರ; ದ್ರೋಣರಿಗಿಂತ ಮುಂಚೆ ಪಾಂಡವ ಕೌರವರಿಗೆ ಅಸ್ತ್ರವಿದ್ಯಾ ಗುರುಗಳೆನಿಸಿದವರು; ಇವರೂ ಸಪ್ತಚಿರಂಜೀವಿಗಳಲ್ಲಿ ಒಬ್ಬರು. ದ್ರೋಣ ಮತ್ತು ಅಶ್ವತ್ಥಾಮರಿಗಾಗಿ ಕೌರವ ಪಕ್ಷವನ್ನು ವಹಿಸಿದವರು. ಇವರು'ಶರದ್ವಾನ್' ಎಂಬ ಋಷಿಯ ಪುತ್ರ.

**ಅಶ್ವತ್ಥಾಮ:** ಅಶ್ವತ್ಥಾಮಾಚಾರ್ಯರು; ರುದ್ರಾಂಶ ಸಂಭೂತರು; ದ್ರೋಣ-ಕೃಪಿಯರ ಏಕಮಾತ್ರ ಪುತ್ರರು; ಸಪ್ತಚಿರಂಜೀವಿಗಳಲ್ಲಿ ಒಬ್ಬರು. ವಾಸ್ತವವಾಗಿ ಕೌರವಪಕ್ಷದ ವೀರರಲ್ಲಿ ಇವರದೇ ಅಗ್ರ ಸ್ಥಾನ.

**ವಿಕರ್ಣ:** ದುರ್ಯೋಧನಾದಿ ನೂರು ಜನ ಕೌರವರಲ್ಲಿ ಮೂರನೆಯವನು; ರಾಮಾಯಣದ ಕಾಲದಲ್ಲಿ 'ಅತಿಕಾಯ'ನೆಂಬ ರಾಕ್ಷಸನಾಗಿ ರಾವಣನ ಪಕ್ಷದಲ್ಲಿದ್ದವನು.

**ಭೂರಿಶ್ರವಸ್:** ಭೀಷ್ಮರ ತಂದೆ ಶಂತನುವಿನ ಅಣ್ಣ ಬಾಹ್ಲೀಕ; ಬಾಹ್ಲೀಕನ ಪುತ್ರ ಸೋಮದತ್ತ; ಆ ಸೋಮದತ್ತನ ಭೂರಿ, ಭೂರಿಶ್ರವಸ್ ಮತ್ತು ಶಲ ಎಂಬ ಮೂವರು ಪುತ್ರರಲ್ಲಿ ಮಧ್ಯದವನು; ಅಹಿರ್ಬುಧ್ನ ಎಂಬ ರುದ್ರನ ಅವತಾರ; ಇತರ ಹತ್ತು ರುದ್ರರ ಆವೇಶ ಮತ್ತು ವರದಿಂದಾಗಿ ಅಣ್ಣತಮ್ಮಂದಿರಿಗಿಂತ ಬಲಾಢ್ಯನೆನ್ನಿಸಿದ್ದನು.

ಶಿಖಂಡೀ : ದ್ರುಪದನ ಹಿರಿಯ ಮಗ; ಭೀಷ್ಮರನ್ನು ವಿವಾಹವಾಗಲು ಬಯಸಿದ ಅಂಬೆ ನಿರಾಶಳಾಗಿ ಅವರನ್ನು ಕೊಲ್ಲುವ ಪಣತೊಟ್ಟು ಪುರುಷತ್ವ ಪಡೆಯುವ ಬಯಕೆಯಿಂದ ಶಿವನನ್ನು ಆರಾಧಿಸಿ, ದ್ರುಪದನ ಮಗಳಾಗಿ ಹುಟ್ಟುತ್ತಾಳೆ. ಶಿವನ ವರದಿಂದ ತುಂಬುರು ಗಂಧರ್ವನ ಶರೀರವನ್ನು ಎರವಲು ಪಡೆದು ಅದರಲ್ಲಿಗೆ ಅವನೊಂದಿಗೆ ತಾನೂ ನೆಲೆಸಿ ಲೋಕದ ಕಣ್ಣಿಗೆ 'ಪುರುಷ' ಎನ್ನಿಸುತ್ತಾಳೆ. ಇದನ್ನೆಲ್ಲವನ್ನು ತಿಳಿದಿದ್ದರಿಂದಲೇ ಭೀಷ್ಮರು "ಶಿಖಂಡಿಯನ್ನು ಎದುರಿಸಿ ಯುದ್ಧ ಮಾಡಲಾರೆ" ಎಂದು ಘೋಷಿಸಿರುತ್ತಾರೆ. ಭೀಷ್ಮ-ಅಂಬೆಯರು 'ದ್ಯು' ಮತ್ತು 'ವರಾಂಗಿ' ಎಂಬ ವಸುದಂಪತಿಗಳು.

*****

# ಪರಿಶಿಷ್ಟ - ೨

## ಗೀತೆಯಲ್ಲಿ ಬಂದಿರುವ ದೇವತಾದಿಗಳ ವಿವರ

**ಪಂಚಪ್ರಾಣಗಳು**

ಪ್ರಾಣ ಅಪಾನ ವ್ಯಾನ ಉದಾನ ಸಮಾನ

**ಪಂಚಭೂತಗಳು**

ಪೃಥಿವೀ ಅಪ್ ತೇಜಸ್ಸು ವಾಯು ಆಕಾಶ

**ಪಂಚತನ್ಮಾತ್ರಾಗಳು**

ಗಂಧ ರಸ ರೂಪ ಸ್ಪರ್ಶ ಶಬ್ದ

**ಪಂಚಜ್ಞಾನೇಂದ್ರಿಯಗಳು**

ಕಣ್ಣು ಕಿವಿ ನಾಲಿಗೆ ಮೂಗು ಚರ್ಮ

**ಪಂಚಕರ್ಮೇಂದ್ರಿಯಗಳು**

ವಾಕ್ ಹಸ್ತ ಪಾದ ಉಪಸ್ಥ ಪಾಯು

**ಅರಿಷಡ್ವರ್ಗ**

ಕಾಮ ಕ್ರೋಧ ಲೋಭ ಮೋಹ ಮದ ಮತ್ಸರ

**ಆತತಾಯಿಗಳು**

ಅಗ್ನಿದ ಗರದ ಶಸ್ತ್ರಪಾಣಿ ಧನಾಪಹ ಕ್ಷೇತ್ರಾಪಹಾರಿ ದಾರಾಪಹಾರಿ

**ದಶವಿಶ್ವೇದೇವತೆಗಳು**

ಕ್ರತು ದಕ್ಷ ಸತ್ಯ ವಸು ಧೂರಿ

ಲೋಚನ ಪೂರು ಖಾದ್ರ್ರವ ಕಾಮ ಕಾಲ

**ಅರ್ಜುನನ ದಶನಾಮಗಳು**

ಅರ್ಜುನ ಫಲ್ಗುನ ಜಿಷ್ಣು ಕಿರೀಟಿ ಶ್ವೇತವಾಹನ

ಬೀಭತ್ಸು ವಿಜಯ ಕೃಷ್ಣ ಸವ್ಯಸಾಚಿ ಧನಂಜಯ

ಪರಿಶಿಷ್ಟ - ೪

## ಗೀತೆಯಲ್ಲಿ ಬಂದಿರುವ ವಕ್ತೃಗಳ ಹೆಸರು ಹಾಗೂ ಅವರಿಂದ ಹೇಳಲ್ಪಟ್ಟ ಶ್ಲೋಕಗಳ ಸಂಖ್ಯೆ

| ಅಧ್ಯಾಯ | ಧೃತರಾಷ್ಟ್ರ | ಸಂಜಯ | ಅರ್ಜುನ | ಶ್ರೀಭಗವಾನ್ | ಒಟ್ಟು |
|---|---|---|---|---|---|
| ೧ | ೧ | ೨೫ | ೨೧ | ÷ | ೪೭ |
| ೨. | | ೩ | ೬ | ೬೩ | ೭೨ |
| ೩. | | | ೩ | ೪೦ | ೪೩ |
| ೪. | | | ೧ | ೪೧ | ೪೨ |
| ೫. | | | ೧ | ೨೮ | ೨೯ |
| ೬. | | | ೫ | ೪೨ | ೪೭ |
| ೭. | | | ÷ | ೩೦ | ೩೦ |
| ೮. | | | ೨ | ೨೬ | ೨೮ |
| ೯. | | | ÷ | ೩೪ | ೩೪ |
| ೧೦. | | | ೭ | ೩೫ | ೪೨ |
| ೧೧. | | ೮ | ೩೩ | ೧೪ | ೫೫ |
| ೧೨. | | | ೧ | ೧೯ | ೨೦ |
| ೧೩. | | | ÷ | ೩೪ | ೩೪ |
| ೧೪. | | | ೧ | ೨೬ | ೨೭ |
| ೧೫. | | | ÷ | ೨೦ | ೨೦ |
| ೧೬. | | | ÷ | ೨೪ | ೨೪ |
| ೧೭. | | | ೧ | ೨೭ | ೨೮ |
| ೧೮. | | ೫ | ೨ | ೭೧ | ೭೮ |
| ಒಟ್ಟು | ೧ | ೪೧ | ೮೪ | ೫೭೪ | ೭೦೦ |

★★★★★

## ಪರಿಶಿಷ್ಟ- ೫

### ಗೀತೆಯಲ್ಲಿ ಶ್ರೀಕೃಷ್ಣನನ್ನು ಸಂಬೋಧಿಸಿ ಬಂದಿರುವ ವಿವಿಧನಾಮಗಳು

| | | | |
|---|---|---|---|
| ೧. | ಅಚ್ಯುತ | (೧/೨೧, ೧೧/೪೨, ೧೮/೭೩) | ೩ |
| ೨. | ಅನಂತ | (೧೧/೩೭) | ೧ |
| ೩. | ಅನಂತರೂಪ | (೧೧/೩೮) | ೧ |
| ೪. | ಅನಂತವೀರ್ಯ | (೧೧/೪೦) | ೧ |
| ೫. | ಅಪ್ರತಿಮಪ್ರಭಾವ | (೧೧/೪೩) | ೧ |
| ೬. | ಅರಿಸೂದನ | (೨/೪) | ೧ |
| ೭. | ಕಮಲಪತ್ರಾಕ್ಷ | (೧೧/೨) | ೧ |
| ೮. | ಕೃಷ್ಣ | (೧/೨೮, ೩೨, ೪೧; ೫/೧; ೬/೩೪, ೩೭, ೩೯; ೧೧/೪೧; ೧೭/೧) | ೯ |
| ೯. | ಕೇಶವ | (೧/೩೧, ೨/೫೪, ೩/೧೦, ೧೦/೧೪) | ೪ |
| ೧೦. | ಕೇಶಿಸೂದನ | (೧೮/೧) | ೧ |
| ೧೧. | ಗೋವಿಂದ | (೧/೩೨) | ೧ |
| ೧೨. | ಜಗತ್ಪತೇ | (೧೦/೧೫) | ೧ |
| ೧೩. | ಜಗನ್ನಿವಾಸ | (೧೧/೨೫, ೩೭, ೪೫) | ೩ |
| ೧೪. | ಜನಾರ್ದನ | (೧/೩೬, ೩೯, ೪೪; ೩/೧, ೧೦/೧೮, ೧೧/೫೧) | ೬ |
| ೧೫. | ದೇವ | (೧೧/೧೫, ೪೪) | ೨ |
| ೧೬. | ದೇವದೇವ | (೧೦/೧೫) | ೧ |
| ೧೭. | ದೇವವರ | (೧೧/೩೧) | ೧ |
| ೧೮. | ದೇವೇಶ | (೧೧/೨೫, ೩೭, ೪೫) | ೩ |
| ೧೯. | ಪರಮೇಶ್ವರ | (೧೧/೩) | ೧ |
| ೨೦. | ಪುರುಷೋತ್ತಮ | (೮/೧, ೧೦/೧೫, ೧೧/೩) | ೩ |
| ೨೧. | ಪ್ರಭೋ | (೧೧/೪, ೧೪, ೨೧) | ೨ |
| ೨೨. | ಭಗವನ್ | (೧೦/೧೪, ೧೭) | ೨ |
| ೨೩. | ಭೂತಭಾವನ | (೧೦/೧೫) | ೧ |
| ೨೪. | ಭೂತೇಶ | (೧೦/೧೫) | ೧ |
| ೨೫. | ಮಧುಸೂದನ | (೧/೩೫; ೨/೪; ೬/೩೩; ೮/೨) | ೪ |
| ೨೬. | ಮಹಾತ್ಮನ್ | (೧೧/೨೦, ೩೭) | ೨ |

| | | | |
|---|---|---|---|
| ೨೭. | ಮಹಾಬಾಹೋ | (೬/೩೮; ೧೧/೨೩; ೧೮/೧) | ೩ |
| ೨೮. | ಮಾಧವ | (೧/೩೭) | ೧ |
| ೨೯. | ಯಾದವ | (೧೧/೪೧) | ೧ |
| ೩೦. | ಯೋಗಿನ್ | (೧೦/೧೭) | ೧ |
| ೩೧. | ಯೋಗೇಶ್ವರ | (೧೧/೪) | ೧೩ |
| ೩೨. | ವಾರ್ಷ್ಣೇಯ | (೧/೪೧; ೩/೩೬) | ೨ |
| ೩೩. | ವಿಶ್ವಮೂರ್ತೇ | (೧೧/೪೬) | ೧ |
| ೩೪. | ವಿಶ್ವರೂಪ | (೧೧/೧೬) | ೧ |
| ೩೫. | ವಿಶ್ವೇಶ್ವರ | (೧೧/೧೬) | ೧ |
| ೩೬. | ವಿಷ್ಣೋ | (೧೧/೨೪, ೩೦) | ೨ |
| ೩೭. | ಸಖೇ | (೧೧/೪೧) | ೧ |
| ೩೮. | ಸರ್ವ | (೧೧/೪೦) | ೧ |
| ೩೯. | ಸಹಸ್ರಬಾಹೋ | (೧೧/೪೬) | ೧ |
| ೪೦. | ಹೃಷೀಕೇಶ | (೧೧/೩೬; ೧೮/೧) | ೨ |
| | ಒಟ್ಟು | | ೭೬ |

★★★★★

## ಪರಿಶಿಷ್ಟ – ೬

## ಗೀತೆಯಲ್ಲಿ ಅರ್ಜುನನನ್ನು ಸಂಬೋಧಿಸಿ ಬಂದಿರುವ ವಿವಿಧನಾಮಗಳು

| | | | |
|---|---|---|---|
| ೧. | ಅನಘ | (೩/೩; ೧೪/೬; ೧೫/೨೦) | ೩ |
| ೨. | ಅರ್ಜುನ | (೨/೨, ೫೪; ೩/೭; ೪/೫,೯,೩೭; ೬/೧೭, ೩೨, ೪೬; ೭/೧೬, ೨೬; ೮/೧೬, ೨೭; ೯/೧೯; ೧೦/೩೨, ೩೯, ೪೨; ೧೧/೪೭, ೫೪; ೧೮/೯, ೩೪, ೬೧) | ೨೨ |
| ೩. | ಕುರುನಂದನ | (೨/೪೧; ೬/೪೩; ೧೪/೧೩) | ೩ |
| ೪. | ಕುರುಪ್ರವೀರ | (೧೧/೪೮) | ೧ |

| | | | |
|---|---|---|---|
| ೫. | ಕುರುಶ್ರೇಷ್ಠ | (೧೦/೧೯) | ೧ |
| ೬. | ಕುರುಸತ್ತಮ | (೪/೩೧) | ೧ |
| ೭. | ಕೌಂತೇಯ | (೨/೧೪, ೩೭, ೬೦; ೩/೯, ೩೯; ೪/೨೨; ೬/೩೫;೭/೮; ೮/೬, ೧೬; ೯/೭, ೧೦, ೨೩, ೨೭, ೩೧; ೧೩/೧, ೩೧; ೧೪/೪, ೭; ೧೬/೨೦, ೨೨;೧೮/೪೮, ೫೦, ೬೦) | ೨೪ |
| ೮. | ಗುಡಾಕೇಶ | (೧೦/೨೦, ೧೧/೭) | ೨ |
| ೯. | ತಾತ | (೬/೪೦) | ೧ |
| ೧೦. | ದೇಹಭೃತಾಂವರ | (೮/೪) | ೧ |
| ೧೧. | ಧನಂಜಯ | (೨/೪೮, ೪೯; ೪/೪೧; ೭/೭; ೯/೯; ೧೨/೯; ೧೮/೨೯, ೭೨) | ೮ |
| ೧೨. | ಪರಂತಪ | (೨/೩; ೪/೨, ೫, ೩೩; ೭/೨೭, ೯, ೩; ೧೦/೪೦; ೧೧/೫೪; ೧೮/೪೧) | ೯ |
| ೧೩. | ಪಾಂಡವ | (೪/೩೫; ೬/೨; ೧೧/೫೫; ೧೪/೨೨; ೧೬/೫) | ೫ |
| ೧೪. | ಪಾರ್ಥ | (೧/೨೫; ೨/೩, ೨೧, ೩೨, ೩೯, ೪೨, ೫೫, ೭೨; ೩/೧೬, ೨೨,೨೩; ೪/೧೧, ೩೩; ೬/೪೦; ೭/೧, ೧೦; ೮/೮,೧೪, ೧೯,೨೨,೨೭; ೯/೧೩, ೩೨; ೧೦/೨೪; ೧೧/೫; ೧೨/೭; ೧೬/೪, ೬; ೧೭/೨೬, ೨೮; ೧೮/೬, ೩೦, ೩೧, ೩೨, ೩೩, ೩೪, ೩೫, ೭೨) | ೩೮ |
| ೧೫. | ಪುರುಷರ್ಷಭ | (೨/೧೫) | ೧ |
| ೧೬. | ಪುರುಷವ್ಯಾಘ್ರ | (೧೮/೪) | ೧ |
| ೧೭. | ಭರತರ್ಷಭ | (೩/೪೧; ೭/೧೧,೧೬;' ೮/೨೩; ೧೩/೨೬; ೧೪/೧೨; ೧೮/೩೬)= ೭ | |
| ೧೮. | ಭರತಶ್ರೇಷ್ಠ | (೧೭/೧೨) | ೧ |
| ೧೯. | ಭರತಸತ್ತಮ | (೧೮/೪) | ೧ |

| | | | |
|---|---|---|---|
| ೨೦. | ಭಾರತ | (೨/೧೪, ೧೮, ೨೮, ೩೦; ೩/೨೫; ೪/೭, ೪೨; ೭/೧೭; ೧೧/೬; ೧೩/೨, ೩೩; ೧೪/೩, ೮, ೯, ೧೦; ೧೫/೧೯, ೨೦; ೧೬/೩; ೧೭/೩; ೧೮/೬೨) | ೨೦ |
| ೨೧. | ಮಹಾಬಾಹು | (೨/೨೬, ೬೮; ೩/೨೮, ೪೩; ೫/೩, ೬; ೬/೩೫; ೭/೫; ೧೦/೧; ೧೪/೫; ೧೮/೧೩) | ೧೧ |
| ೨೨. | ಸವ್ಯಸಾಚಿ | (೧೧/೩೩) | ೧ |
| | | ಒಟ್ಟು | ೧೬೨ |

*****

॥ ಶ್ರೀಕೃಷ್ಣಾರ್ಪಣಮಸ್ತು ॥

ಸಮರ್ಪಿತಂ ಮಯಾ ಭವೇತ್ ಸುಮಧ್ವಸೂತ್ರವಾಣಿನಾ ।
ರಮಾರಮೇಶಪಾದಯೋಃ ಪ್ರಭಂಜನಾಭಿಧಾಯುಜಾ ॥

*****

# ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನ(ರಿ.)

## ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯರಿಂದ ಸಂಪಾದಿತ/ಅನುವಾದಿತ/ರಚಿತ ಕೆಲವು ಕೃತಿಗಳು

## ಕೆಲವು ಸಂಸ್ಕೃತ ಕೃತಿಗಳು

| | | |
|---|---|---|
| ೧. | ಶ್ರೀಮದಾನಂದತೀರ್ಥ ಭಗವತ್ಪಾದಪ್ರಣೀತ ಸರ್ವಮೂಲಗ್ರಂಥಗಳು (ಸಂಸ್ಕೃತ, ಕನ್ನಡ ಹಾಗೂ ತೆಲುಗು ಲಿಪಿಗಳಲ್ಲಿ) | (ಕನ್ನಡ ಲಿಪಿ ರೂ. ೨೦೦೦.೦೦) |
| ೨. | ಮಹಾಭಾರತತಾತ್ಪರ್ಯನಿರ್ಣಯಃ (ಭಾವಪ್ರಕಾಶಿಕಾಸಮೇತಃ) | ೮೦೦.೦೦ |
| ೩. | ದ್ವಾದಶಸ್ತೋತ್ರಮ್ (ಎರಡು ವ್ಯಾಖ್ಯಾನಗಳ ಸಮೇತ) | ೧೦೦.೦೦ |
| ೪. | ಶ್ರೀಮದ್ಭಗವದ್ಗೀತಾ (ಶ್ರೀಮದಾನಂದತೀರ್ಥಕೃತ ಗೀತಾಭಾಷ್ಯ, ಶ್ರೀಪದ್ಮನಾಭತೀರ್ಥರ ಗೀತಾಭಾಷ್ಯಟೀಕಾ ಹಾಗೂ ಶ್ರೀವಾದಿರಾಜರ ಭಗವದ್ಗೀತಾ ಲಕ್ಷಾಲಂಕಾರ ಸಮೇತ) | ೫೫೦.೦೦ |
| ೫. | ಶ್ರೀನರಹರಿತೀರ್ಥಕೃತ ಗೀತಾಭಾಷ್ಯಟೀಕಾ | ೩೦೦.೦೦ |
| ೬. | ಶ್ರೀಮದ್ಭಗವದ್ಗೀತಾ (ಶ್ರೀವಿದ್ಯಾಧಿರಾಜತೀರ್ಥರು ಹಾಗೂ ಶ್ರೀರಾಘವೇಂದ್ರಸ್ವಾಮಿಗಳ ವ್ಯಾಖ್ಯಾನಸಮೇತ) | ೩೦೦.೦೦ |
| ೭. | ಶ್ರೀಸುಮತೀಂದ್ರತೀರ್ಥಕೃತಃ ಮಂತ್ರರತ್ನಕೋಶಃ (ಶ್ರೀಸುಮತೀಂದ್ರತೀರ್ಥರ ಇತರ ಕೆಲವು ಕೃತಿಗಳ ಸಮೇತ) | ೨೫.೦೦ |
| ೮. | ಶ್ರೀಸತ್ಯಾಭಿನವತೀರ್ಥಕೃತ ರಾಮಾಮೃತಮಹಾರ್ಣವಃ | ೨೦೦.೦೦ |
| ೯. | ಸುಮಧ್ವವಿಜಯಃ (ಮೂಲಮಾತ್ರ) | ೫೦.೦೦ |
| ೧೦. | ಸ್ತೋತ್ರಮಾಲಿಕಾ (ವೈಷ್ಣವಸ್ತೋತ್ರಸಂಗ್ರಹ) | ೫೦.೦೦ |

## ಕೆಲವು ಕನ್ನಡ ಕೃತಿಗಳು

ಸ್ತೋತ್ರಮಾಲಿಕಾ(೮ ಸಂಪುಟಗಳಲ್ಲಿ), ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯ, ಸಂಗ್ರಹರಾಮಾಯಣ, ಶ್ರೀಹರಿಕಥಾಮೃತಸಾರ, ಏಕಾದಶೀವ್ರತ, ಸುಂದರಕಾಂಡನಿರ್ಣಯ, ಸುಮಧ್ವವಿಜಯ, ಕೃಷ್ಣಾಮೃತಮಹಾರ್ಣವ, ಶ್ರೀಮಧ್ವಾಚಾರ್ಯರ ಕಾಲನಿರ್ಣಯ, ವೇಂಕಟೇಶಪಾರಿಜಾತ, ಶ್ರೀಹರಿದಾಸರ ಉಗಾಭೋಗಗಳು, ಶ್ರೀಮದ್ಭಗವದ್ಗೀತಾ, ಗೀತಾಮಧು, ಗೀತಾಮಾಹಾತ್ಮ್ಯ, ಮಹಾಭಾರತದ ಬೆಳಕು, ಭಾಗವತದ ಬೆಳಕು, ಶ್ರೀವೇದವ್ಯಾಸದರ್ಶನ, ಶ್ರೀಪೂರ್ಣಪ್ರಜ್ಞದರ್ಶನ, ಶ್ರೀಜಯತೀರ್ಥದರ್ಶನ, ಶ್ರೀಬ್ರಹ್ಮಣ್ಯತೀರ್ಥರು, ಶ್ರೀವ್ಯಾಸರಾಜದರ್ಶನ, ಶ್ರೀರಘೂತ್ತಮತೀರ್ಥರು, ಶ್ರೀವಿಜಯೀಂದ್ರದರ್ಶನ, ಶ್ರೀರಾಘವೇಂದ್ರದರ್ಶನ, ಶ್ರೀವಾದಿರಾಜತೀರ್ಥಕೃತ ತೀರ್ಥಪ್ರಬಂಧ, ಶ್ರೀಜಯತೀರ್ಥರ ಪದ್ಯಮಾಲಾ, ಬಳಿತ್ಥಾಸೂಕ್ತಮ್, ಹರಿಭಜನಕಲ್ಪದ್ರುಮ, ರಾಮಾಮೃತಮಹಾರ್ಣವ, ತಪ್ತಮುದ್ರಾಧಾರಣೆ, ಸದಾಚಾರವಿನೋದ, ಶ್ರೀಹೃಷೀಕೇಶತೀರ್ಥಕೃತ ಸಂಪ್ರದಾಯಪದ್ಧತಿ, ಉಡುಪಿ ಅಷ್ಟಮಠಗಳ ಗುರುಪರಂಪರೆ, ಅಂಭೃಣೀಸೂಕ್ತ, ಬ್ರಹ್ಮಸೂತ್ರನಾಮಾವಳಿ, ಶ್ರೀವೇದವ್ಯಾಸಪೂಜಾವಿಧಿ, ಮಧ್ವಸಿದ್ಧಾಂತ, ಇತ್ಯಾದಿ.

